ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೩೬

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಭವಿಷ್ಯಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದ ಅರ್ಥಾನುವಾದವಿವರಣೆಗಳೊಡನೆ)

## (ಬ್ರಾಹ್ಮಪರ್ವ)

## ಭಾಗ—೧



ಆಸ್ಥಾನ ವಿದ್ವಾನ್

**ಪಂಡಿತ ಬಿ. ಚನ್ನಕೇಶವಯ್ಯ**

ಅನುವಾದಕ

ಮೈಸೂರು

ಶ್ರೀ ಬಸವೇಶ್ವರ ಎಲೆಕ್ಟ್ರಿಕ್ ಪ್ರೆಸ್

೧೯೪೬

# ಮುನ್ನುಡಿ

---

ಆರ್ಯಮಹರ್ಷಿಗಳು ನಮ್ಮನ್ನು ಜ್ಞಾನಿಗಳನ್ನಾಗಿಯೂ, ಆಸ್ತಿಕರನ್ನಾಗಿಯೂ ಮಾಡಿ ಉದ್ಧರಿಸಲೋಸುಗ, ಪ್ರಭು, ಸುಹೃತ್, ಕಾಂತಾಸಮ್ಮಿತಗಳಾದ ಗ್ರಂಥರಾಶಿಯನ್ನು ಒದಗಿಸಿಟ್ಟಿರುವರು. ಪ್ರಭುಸಮ್ಮಿತಗಳಾದ ವೇದಶಾಸ್ತ್ರಾದಿಗಳು ಲಿಙ್, ಲೋಟ್, ತವ್ಯ, ಪ್ರತ್ಯಯಗಳಿಂದ ರಾಜರ ಅಪ್ಪಣೆಯಂತೆ ಜನರಿಗೆ ಪಾಪಭಯವನ್ನುಂಟು ಮಾಡಿ, ಆಸ್ತಿಕರನ್ನಾಗಿ ಮಾಡುತ್ತಿರುವುವು. ಆದರೆ ಇದು ಕೇವಲ ಪಂಡಿತರಿಗೆ ಹೊರತು ಸಾಮಾನ್ಯಜನರಿಗೆ ಅಷ್ಟಾಗಿ ಅನುಕೂಲಿಸಲಾರದು. ಎರಡನೆಯ ವರ್ಗದವುಗಳೆನಿಸಿದ ಪುರಾಣೇತಿಹಾಸಗಳು ಹಾಗಲ್ಲ. ಸುಹೃತ್ಸಮ್ಮಿತಾರೂಪವಾಗಿ ಪುಣ್ಯಪ್ರವೃತ್ತಿಯಲ್ಲಿ, ಮತ್ತು ಪಾಪನಿವೃತ್ತಿಯಲ್ಲಿ ತೊಡಗಿದ ಅನೇಕ ಮಹಾತ್ಮರ ದಿವ್ಯ ಕಥಾಮೃತಗಳನ್ನು ಸುಲಭಶೈಲಿಯಲ್ಲಿ ವಿವರಿಸುತ್ತಾ ಪಂಡಿತ ಪಾಮರ ಸಾಧಾರಣವಾಗಿ ಜ್ಞಾನೋಪಯೋಗಿಯಾಗಿರುವುದು. ಪುರಾಣಸಾಹಿತ್ಯವನ್ನು ಸರ್ವಜನಾದರಣೀಯವನ್ನಾಗಿ ಮಾಡಬೇಕೆಂದೇ ಸರ್ವಜ್ಞರೂ ಮಹಾಮಹಿಮರೂ ಆದ ವ್ಯಾಸಮಹರ್ಷಿಗಳು ಯಥೋಚಿತವಾಗಿ ಕಾಲದೇಶವನ್ನನುಸರಿಸಿ, ಮತಾನುಯಾಯಿಗಳಿಗೆ ಜುಗುಪ್ಸೆಯುಂಟಾಗದಂತೆ "ದೇವರು ಒಬ್ಬನೇ ಆದರೂ, ನಾನಾರೂಪದಲ್ಲಿರುವನು" ಎಂಬ ತತ್ತ್ವವನ್ನನುಸರಿಸಿ ವೇದಶಾಸ್ತ್ರಾದಿಗಳ ಸಾರವನ್ನೆಲ್ಲಾ ಅಡಕಮಾಡಿ ಅಷ್ಟಾದಶ ಪುರಾಣಾದಿಗ್ರಂಥ ರಚನೆಮಾಡಿರುವರು.

ಅಂಗಾನಿವೇದಾಶ್ಚತ್ವಾರೋ ಮೀಮಾಂಸಾನ್ಯಾಯವಿಸ್ತರಃ ।
ಪುರಾಣಂ ಧರ್ಮಶಾಸ್ತ್ರಂ ಚ ವಿದ್ಯಾಹ್ಯೇತಾಶ್ಚತುರ್ದಶ ॥

ಎಂದು ಉಕ್ತವಾದ ಹದಿನಾಲ್ಕು ವಿದ್ಯೆಗಳಲ್ಲಿ ಸೇರಿದ ಪುರಾಣಗಳು ಮಾನವನ ಜನ್ಮಸಾರ್ಥಕತೆಗೆ ಆವಶ್ಯಕವಾದ ಜ್ಞಾನದಾಯಕಗಳಾಗಿವೆ.

ಈ ಮಹಾತ್ಮರಿಂದ ರಚಿತವಾದ ಮಹಾಪುರಾಣಗಳಲ್ಲಿ ಭವಿಷ್ಯಮಹಾಪುರಾಣವು ಒಂದು. ಮಾನವನನ್ನು ಮಾನವತ್ವದ ಪರಾಕಾಷ್ಠೆಯನ್ನೈದಿಸಲು ಸಾಧನವಾದ ಧರ್ಮಮಾರ್ಗಾನುಸರಣೆಯನ್ನೂ, ಅದರ ಮಹಾಫಲಗಳನ್ನೂ ವಿವರಿಸುವ ಉದ್ದೇಶದಿಂದಲೇ ಇದು ರಚಿತವಾಗಿದೆ. ಮಹಾಪುರಾಣವೆಂದು ಪ್ರಸಿದ್ಧವಾಗಿರುವ ಇದರ, ಪ್ರಾರಂಭದ ಅಧ್ಯಾಯಾಂತದಲ್ಲಿ "ಇತಿ ಶ್ರೀ ಭವಿಷ್ಯೆಮಹಾಪುರಾಣೇ ಶತಾರ್ಧಸಾಹಸ್ರ್ಯಾಂ ಸಂಹಿತಾಯಾಂ" ಎಂದು ಹೇಳಿರುವಂತೆ, ಇದು ಐವತ್ತುಸಾವಿರ ಶ್ಲೋಕಗಳುಳ್ಳದ್ದೆಂದೂ, "ಪರ್ವಾಣಿಚಾತ್ರಪೈಪಂಚ" ಎಂಬ ಉಕ್ತಿಯಿಂದ ಐದು ಪರ್ವಗಳುಳ್ಳದ್ದಾಗಿತ್ತೆಂದೂ ಗೊತ್ತಾಗುವುದು. ಆದರೆ ಈಗ ಉಪಲಬ್ಧವಾಗಿರುವ ಈ ಭವಿಷ್ಯಪುರಾಣದಲ್ಲಿ ನಾಲ್ಕು ಪರ್ವಗಳೂ, ಇಪ್ಪತ್ತಾರುಸಾವಿರ ಶ್ಲೋಕಗಳೂ

ಮಾತ್ರ ಇವೆ. ಚಾತುರ್ವರ್ಣ್ಯದವರ ಕರ್ತವ್ಯಗಳು, ಅವರ ಪರಸ್ಪರ ಸಹಾನುಭೂತಿ ಯುತವಾದ ಐಕಮತ್ಯ, ಅದರಿಂದ ಆಗುವ ಧರ್ಮಾಭಿವೃದ್ಧಿ ವಿಚಾರ, ದ್ವಿಜರಿಗೆ ಆವಶ್ಯಕ ವಾದ ಸಂಸ್ಕಾರಾದಿಗಳು, ಪ್ರಾಸಾದ, ದೇವಾಲಯ, ತಟಾಕ, ಆರಾಮ ವೃಕ್ಷಾದಿಗಳ ಪ್ರತಿಷ್ಠೆ. ವಾಸ್ತುಚಕ್ರ, ನಾನಾಮಂಡಲ ರಚನೆಗಳು ಇವು ವಿಸ್ತೃತವಾಗಿವೆ. ಅಲ್ಲದೆ ಕಲಿಯುಗೀಯ ಇತಿಹಾಸ ನಿರೂಪಣದಲ್ಲಿ ಅನೇಕ ರಾಜರ ಚರಿತ್ರಗಳು, ಹೂಣ, ಮಹಮ್ಮದಾದಿಗಳ ಆಕ್ರಮಣ, ನಾನಾಮತಾಚಾರ್ಯರ ಉತ್ಪತ್ತಿ, ಆಯಾ ಮತಾಭಿವೃದ್ಧಿ ವಿಚಾರ, ಇವನ್ನು ವಿವರಿಸಿರುವುದಲ್ಲದೆ ಸದ್ಗತಿಪ್ರಾಪ್ತಿಗೆ ಸಾಧನವಾಗಿ ಆಚರಿಸಬಹುದಾದ ವ್ರತಾದಿಗಳೂ ಇದರಲ್ಲಿ ಉಕ್ತವಾಗಿವೆ.

ಆಧುನಿಕ ವಿದ್ವಾಂಸರು ಕೆಲವು ನಿದರ್ಶಗಳಿಂದ ಈ ಪುರಾಣವು ಕೇವಲ ಅರ್ವಾಚೀನವೆಂದು ಅಭಿಪ್ರಾಯಪಡುತ್ತಾರೆ. ಮಹರ್ಷಿಗಳು ಸರ್ವಜ್ಞರೂ ತ್ರಿಕಾಲ ಜ್ಞಾನಿಗಳೂ ಆದ್ದರಿಂದ ಮುಂದೆ ಸಂಭವಿಸುವುದನ್ನು ದಿವ್ಯದೃಷ್ಟಿಯಿಂದ ತಿಳಿದು ಇಲ್ಲಿ ನಿರೂಪಿಸಿದ್ದಾರೆಂದರೆ ಪ್ರಾಯಶಃ ತಪ್ಪಾಗಲಾರದು.

ದೊರೆತಷ್ಟು ಮೂಲಪ್ರತಿಗಳ ಸಹಾಯದಿಂದ ಸಮಂಜಸವಾದ ಪಾಠವನ್ನು ಆರಿಸಿಕೊಂಡು ಯಥಾಮತಿ ಅನುವಾದಮಾಡಲಾಗಿದೆ.

ಸಂಸ್ಕೃತಲಿಪಿಯಲ್ಲಿ ಮುದ್ರಣವಾಗಿ ಪಂಡಿತರಿಗೆ ಮಾತ್ರ ಸುಲಭವಾಗಿದ್ದ ಈ ಪುರಾಣಗ್ರಂಥಗಳನ್ನು ತಿಳಿಗನ್ನಡಭಾಷೆಗೆ ಅನುವಾದಮಾಡಿಸಿ, ಮೂಲದೊಡನೆ ಕನ್ನಡಲಿಪಿಯಲ್ಲಿ ಮುದ್ರಣಗೊಳಿಸಲು ಕೃಪೆಮಾಡಿ, ನಮ್ಮ ಮಹಾಪ್ರಭುಗಳು ಲೋಕಕ್ಕೂ, ಕನ್ನಡಭಾಷೆಗೂ ಮಹೋಪಕಾರಮಾಡಿದ್ದಾರೆ. ಇದರಿಂದ ಸಾಮಾನ್ಯ ಜನರೂ ಓದಿ ಪುರಾಣದ ಸ್ವಾರಸ್ಯವನ್ನು ಗ್ರಹಿಸಲು ಸಾಧನವಾಗಿದೆ. ಇಂಥ ಧರ್ಮ ಕಾರ್ಯಗಳಿಗಾಗಿ ತಮ್ಮ ತನುಮನಧನಗಳನ್ನು ವಿನಿಯೋಗಿಸುತ್ತಿರುವ ಯದುಕುಲ ಪ್ರದೀಪರೆನಿಸಿದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ. ಜಿ.ಸಿ.ಎಸ್.ಐ. ಮಹಾಪ್ರಭುಗಳವರಿಗೂ,** ಅವರ ಕುಟುಂಬಕ್ಕೂ ಭಗವತಿಯಾದ ಶ್ರೀ ಚಾಮುಂಡಾಂಬೆಯು ದೀರ್ಘಾಯುರಾರೋಗ್ಯಪುತ್ರಸಂತಾನಾದಿ ಸಕಲ ಸನ್ಮಂಗಳಗಳನ್ನೂ ದಯಪಾಲಿಸಲೆಂದು ಪ್ರಾರ್ಥಿಸುವೆನು.

ದಾನಾಯ ಲಕ್ಷ್ಮೀಃ ಸುಕೃತಾಯ ವಿದ್ಯಾ ಚಿಂತಾ ಪುನಸ್ತತ್ತ್ವವಿನಿಶ್ಚಯಾಯ ।
ಲೋಕೋಪಕಾರಾಯ ವಚಾಂಸಿ ಯಸ್ಯ ಧನ್ಯಸ್ಸಜೀಯಾಜ್ಜಯಚಾಮರಾಜಃ ॥

ಮೈಸೂರು,
ತಾ॥ 20—7—1946.

**ಬಿ. ಚನ್ನಕೇಶವಯ್ಯ,**
ಆಸ್ಥಾನ ವಿದ್ವಾನ್.



## ಶ್ರೀ ಭವಿಷ್ಯಮಹಾಪುರಾಣದ

# ವಿಷಯಾನುಕ್ರಮಣಿಕೆ.

---

ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ

॥ ಶ್ರೀಃ ॥

॥ ಗಣೇಶಾಯ ನಮಃ ॥

॥ ಓನ್ನಮೋ ಭಗವತೇ ವಾಸುದೇವಾಯ ॥

# ಪೂರ್ವಪೀಠಿಕಾ

ನಾರಾಯಣಂ ನಮಸ್ಕೃತ್ಯ ನರಂಚೈವ ನರೋತ್ತಮಂ ।
ದೇವೀಂ ಸರಸ್ವತೀಂ ವ್ಯಾಸಂ ತತೋಜಯಮುದೀರಯೇತ್ ॥ ೧ ॥

ಜಯತಿ ಪರಾಶರಸೂನುಃ ಸತ್ಯವತೀಹೃದಯನಂದನೋ ವ್ಯಾಸಃ ।
ಯಸ್ಯಾಸ್ಯಕಮಲಗಲಿತಂ ವಾಙ್ಮಯಮಮೃತಂ ಜಗತ್ಪಿಬತಿ ॥ ೨ ॥

ಮೂಕಂ ಕರೋತಿ ವಾಚಾಲಂ ಪಂಗುಂ ಲಂಘಯತೇ ಗಿರಿಂ ।
ಯತ್ಕೃಪಾ ತಮಹಂ ವಂದೇ ಪರಮಾನಂದಮಾಧವಂ ॥ ೩ ॥

---

## ಪೂರ್ವಪೀಠಿಕಾ

೧. ನರರಲ್ಲಿ ಉತ್ತಮನಾದ ನಾರಾಯಣನನ್ನೂ, ನರನನ್ನೂ, ಸರಸ್ವತೀದೇವಿಯನ್ನೂ, ವ್ಯಾಸರನ್ನೂ ನಮಸ್ಕರಿಸಿ ಅನಂತರ ಜಯಸಂಜ್ಞಾಕವಾದ ಭಾರತಾದಿ ವ್ಯಾಸಪುರಾಣಗಳನ್ನು ಪಠನಮಾಡಬೇಕು.

೨. ಪರಾಶರ ಮತ್ತು ಸತ್ಯವತೀದೇವಿ ಇವರಿಗೆ ಪ್ರಿಯಪುತ್ರನೆನಿಸಿದ ವ್ಯಾಸರು ಸರ್ವೋತ್ಕೃಷ್ಟರಾಗಿರುವರು. ಅವರ ಮುಖಕಮಲದಿಂದ ಉದುರಿದ (ಹೊರಟ) ವಾಕ್ಪ್ರಪಂಚವೆಂಬ (ಮಕರಂದ) ಅಮೃತವನ್ನು ಜಗತ್ತು (ಪ್ರಾಣಿಗಳು) ಪಾನಮಾಡುತ್ತದೆ.

೩. ಯಾವನ ದಯೆಯು ಮೂಗನನ್ನು ವಾಗ್ಮಿಯನ್ನಾಗಿ ಮಾಡುತ್ತದೆಯೋ, ಹೆಳವನಿಗೆ ಬೆಟ್ಟವನ್ನು ಕುಪ್ಪಳಿಸಿ ದಾಟುವ ಸಾಮರ್ಥ್ಯವನ್ನು ಕೊಡುವುದೋ, ಅಂತಹ ಪರಮಾನಂದಕರನೆನಿಸಿದ ಮಾಧವನನ್ನು ಎಂದರೆ ಲಕ್ಷ್ಮೀಪತಿಯಾದ ಮಹಾವಿಷ್ಣುವನ್ನು ವಂದಿಸುತ್ತೇನೆ.

ಪಾರಾಶರ್ಯವಚಃ ಸರೋಜಮಮಲಂ ಗೀತಾರ್ಥಗಂಧೋತ್ಕಟಂ
ನಾನಾಖ್ಯಾನಕ ಕೇಸರಂ ಹರಿಕಥಾ ಸದ್ಭಾನುನಾ ಬೋಧಿತಂ ।
ಲೋಕೇ ಸಜ್ಜನಷಟ್ಪದೈರಹರಹಃ ಪೇಪೀಯಮಾನಂ ಮುದಾ
ಭೂಯಾದ್ಭಾರತ ಪಂಕಜಂ ಕಲಿಮಲ ಪ್ರಧ್ವಂಸಿ ನಃ ಶ್ರೇಯಸೇ॥೪॥

ಯೋ ಗೋಶತಂ ಕನಕ ಶೃಂಗಮಯಂ ದದಾತಿ
ವಿಪ್ರಾಯ ವೇದವಿದುಷೇ ಚ ಬಹುಶ್ರುತಾಯ ।
ಪುಣ್ಯಾಂ ಭವಿಷ್ಯ ಸುಕಥಾಂ ಶೃಣುಯಾತ್ಸಮಗ್ರಾಂ
ಪುಣ್ಯಂ ಸಮಂ ಭವತಿ ತಸ್ಯ ಚ ತಸ್ಯಚೈವ ॥ ೫ ॥

ಕೃತ್ವಾ ಪುರಾಣಾನಿ ಪರಾಶರಾತ್ಮಜಃ
ಸರ್ವಾಣ್ಯನೇಕಾನಿ ಸುಖಾವಹಾನಿ ।
ತತ್ರಾತ್ಮ ಸೌಖ್ಯಾಯ ಭವಿಷ್ಯಧರ್ಮಾನ್
ಕಲೌ ಯುಗೇ ಭಾವಿ ಲಿಲೇಖ ಸರ್ವಂ ॥ ೬ ॥

ತತ್ರಾಪಿ ಸರ್ವರ್ಷಿವರಪ್ರಮುಖ್ಯೈಃ
ಪರಾಶರಾದ್ಯೈರ್ಮುನಿಭಿಃ ಪ್ರಣೀತಾನ್ ।

---

೪. ವ್ಯಾಸರ ಶುದ್ಧವಾದ ಮಾತುಗಳೆಂಬ ಸರೋವರದಲ್ಲಿ ಹುಟ್ಟಿ, ಭಗವದ್ಗೀತಾರ್ಥವೆಂಬ ಶ್ರೇಷ್ಠವಾದ ಸುಗಂಧದಿಂದ ಯುಕ್ತವಾಗಿ, ಅನೇಕ ಉಪಕಥೆಗಳೆಂಬ ಕೇಸರದಿಂದ ಕೂಡಿ, ವಿಷ್ಣುವಿನ ಚರಿತ್ರೆಯೆಂಬ ಸೂರ್ಯನಿಂದ ಚನ್ನಾಗಿ ವಿಕಾಸ ಹೊಂದಿ, ಸತ್ಪುರುಷರೆಂಬ ಭ್ರಮರಗಳಿಂದ ಯಾವಾಗಲೂ ಸಂತೋಷದಿಂದ ಪಾನ ಮಾಡಲ್ಪಡುತ್ತಿರುವ ಮಹಾಭಾರತವೆಂಬ ಕಮಲವು ಕಲಿದೋಷದಿಂದ ಉಂಟಾದ ನಮ್ಮ ಸಕಲ ಪಾಪಗಳನ್ನೂ ನಾಶಮಾಡಿ ನಮ್ಮೆಲ್ಲರಿಗೂ ಶ್ರೇಯಸ್ಸನ್ನುಂಟು ಮಾಡಲಿ.

೫. ವೇದಜ್ಞನೂ, ಬಹುಶ್ರುತನೂ, ಆದ ವಿಪ್ರನಿಗೆ ಚಿನ್ನದ ಗೊಣಸನ್ನು ಕೊಂಬಿಗೆ ಹಾಕಿದ ನೂರಾರು ಹಸುಗಳನ್ನು ದಾನಕೊಡುವುದರಿಂದ ಯಾವ ಪುಣ್ಯ ಬರುವುದೋ, ಪುಣ್ಯಕರವಾದ ಭವಿಷ್ಯಪುರಾಣದ ಕಥೆಯನ್ನು ಕೇಳಿದರೆ ಅದಕ್ಕೆ ಸಮಾನವಾದ ಪುಣ್ಯವುಂಟಾಗುವುದು.

೬. ಪರಾಶರಸೂನುವಾದ ವ್ಯಾಸರು ಸುಖಕರಗಳಾದ ಅನೇಕ ಪುರಾಣಗಳನ್ನೆಲ್ಲಾ ರಚಿಸಿ, ತಮ್ಮ ಮನಶ್ಶಾಂತಿಗೋಸ್ಕರ ಕಲಿಯುಗದಲ್ಲಿ ಮುಂದೆ ನಡೆಯುವುದನ್ನೆಲ್ಲಾ ಎಂದರೆ ಭವಿಷ್ಯಧರ್ಮಗಳನ್ನೆಲ್ಲಾ ಬರೆದರು.

ಸ್ಮೃತ್ಯುಕ್ತ ಧರ್ಮಾಗಮ ಸಂಹಿತಾರ್ಥಾನ್
ವ್ಯಾಸಃ ಸಮಾಸಾದವದದ್ಭವಿಷ್ಯಂ ॥ ೭ ॥

ಅಲ್ಪಾಯುಷೋ ಲೋಕಜನಾನ್ ಸಮೀಕ್ಷ್ಯ
ವಿದ್ಯಾವಿಹೀನಾನ್ ಪಶುವತ್ಸುಚೇಷ್ಟಾನ್ ।
ತೇಷಾಂ ಸುಖೇನ ಪ್ರತಿಬೋಧನಾಯ
ವ್ಯಾಸಃ ಪುರಾಣಂ ಪ್ರಥಿತಂ ಚಕಾರ ॥ ೮ ॥

---

೭. ಎಲ್ಲಾ ಋಷಿಶ್ರೇಷ್ಠರಲ್ಲೂ ಮುಖ್ಯರೆನಿಸಿದ ಪರಾಶರ ಮುಂತಾದ ಋಷಿಗಳಿಂದ ರಚಿತಗಳಾಗಿರುವ, ಸ್ಮೃತಿಗಳಲ್ಲಿ ಉಕ್ತವಾದ ಧರ್ಮಗಳು, ವೇದಸಂಹಿತೆಗಳು, ಇವುಗಳ ಅರ್ಥ (ಅಭಿಪ್ರಾಯ) ಗಳನ್ನೆಲ್ಲಾ ಕೂಡಿಸಿ, ವ್ಯಾಸರು ಭವಿಷ್ಯಪುರಾಣವನ್ನು ಸಂಕ್ಷೇಪವಾಗಿ ಹೇಳಿದರು.

ಲೋಕದ ಜನರು ಅಲ್ಪಾಯುಸ್ಸುಳ್ಳವರಾಗಿಯೂ, ವಿದ್ಯಾವಿಹೀನರಾಗಿಯೂ, ಪಶುಗಳಂತೆ ವ್ಯಾಪಾರ ನಡೆಯಿಸುವವರಾಗಿಯೂ, ಇರುವುದನ್ನು ನೋಡಿ, ಅವರಿಗೆ ಸುಲಭವಾಗಿ ಜ್ಞಾನವನ್ನುಂಟುಮಾಡುವುದಕ್ಕಾಗಿ ವ್ಯಾಸರು ಈ ಪುರಾಣವನ್ನು ರಚನೆಮಾಡಿದರು.



॥ ಶ್ರೀ ॥

॥ ಶ್ರೀ ಗಣೇಶ ಶಾರದಾ ಗುರುಭ್ಯೋ ನಮಃ ॥

# ಶ್ರೀ ಭವಿಷ್ಯ ಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಪ್ರಥಮೋಽಧ್ಯಾಯಃ

**ಜಯತಿ ಭುವನದೀಪೋ ಭಾಸ್ಕರೋ ಲೋಕಕರ್ತಾ**
**ಜಯತಿ ಚ ಶಿತಿದೇಹಃ ಶಾರ್ಙ್ಗಧನ್ವಾ ಮುರಾರಿಃ ।**
**ಜಯತಿ ಚ ಶಶಿಮೌಲೀ ರುದ್ರನಾಮಾಭಿಧೇಯೋ**
**ಜಯತಿ ಚ ಸ ತು ದೇವೋ ಭಾನುಮಾಂಶ್ಚಿತ್ರಭಾನುಃ ॥ ೧ ॥**

### ಒಂದನೆಯ ಅಧ್ಯಾಯವು

೧. ಸೂರ್ಯದೇವನು ಲೋಕಗಳನ್ನು ಸೃಷ್ಟಿಸಿ ಬೆಳಗಿಸುವನು. ಶಾರ್ಙ ಧನುರ್ಧಾರಿಯಾಗಿ ನೀಲಮೇಘಶ್ಯಾಮನೆನಿಸಿದ ಮಹಾವಿಷ್ಣುವು ಜಗತ್ತನ್ನು ಪಾಲಿಸುವನು. ಚಂದ್ರಶೇಖರನಾಗಿ ರುದ್ರನಾಮದಿಂದ ಮಹೇಶ್ವರನು ಪ್ರಪಂಚವನ್ನು ಲಯಗೊಳಿಸುವನು. ಹೀಗೆ ತ್ರಿಮೂರ್ತಿಗಳಿಂದ ಕಾಂತಿಯನ್ನು ಪಡೆದು ಯಜ್ಞೇಶ್ವರನು ದೇವದೇವನಾಗಿರುವನು. ಇಂತಹ ಸೂರ್ಯಪರಮಾತ್ಮನೂ, ವಿಷ್ಣು ಮಹೇಶ್ವರರೂ ಅಗ್ನಿದೇವನೂ, ಸರ್ವೋತ್ಕೃಷ್ಟರಾಗಿ ವರ್ಧಿಸಲಿ. (ಪ್ರಾರ್ಥಿಸತಕ್ಕವನು, "ಆರೋಗ್ಯಂ ಭಾಸ್ಕರಾದಿಚ್ಛೇತ್ ಶ್ರಿಯಮಿಚ್ಛೇತ್ ಹುತಾಶನಾತ್ । ಜ್ಞಾನಂ ಮಹೇಶ್ವರಾದಿಚ್ಛೇತ್ ಮೋಕ್ಷಮಿಚ್ಛೇ ಜ್ಜನಾರ್ದನಾತ್ ॥" ಎಂಬ ಉಕ್ತಿ ಪ್ರಕಾರವಾಗಿ ಇಲ್ಲಿ ನಾಲ್ಕು ಬಗೆಯ ಫಲಪ್ರಾಪ್ತಿಗೋಸ್ಕರ ಈ ಗ್ರಂಥಕರ್ತರು ಸೂರ್ಯ, ವಿಷ್ಣು, ರುದ್ರ, ಅಗ್ನಿ, ಈ ನಾಲ್ವರಿಗೂ ನಮಸ್ಕರಿಸಿ ಮಂಗಳಾಚರಣೆಯನ್ನು ಮಾಡಿರುತ್ತಾರೆ. ಇದು ಈ ಪುರಾಣದಲ್ಲಿ ಪ್ರತಿಪಾದ್ಯವಾದ ಪ್ರಧಾನ ವಿಷಯವನ್ನು ಸೂಚಿಸುತ್ತದೆ.)

**ಶ್ರಿಯಾವೃತಂ ತು ರಾಜಾನಂ ಶತಾನೀಕಂ ಮಹಾಬಲಂ ।**
**ಅಭಿಜಗ್ಮುರ್ಮಹಾತ್ಮಾನಃ ಸರ್ವೇ ದ್ರಷ್ಟುಂ ಮಹರ್ಷಯಃ ॥ ೨ ॥**

**ಭೃಗುರತ್ರಿರ್ವಸಿಷ್ಠಶ್ಚ ಪುಲಸ್ತ್ಯಃ ಪುಲಹಃ ಕ್ರತುಃ ।**
**ಪರಾಶರಸ್ತಥಾ ವ್ಯಾಸಃ ಸುಮಂತುರ್ಜೈಮಿನಿಸ್ತಥಾ ॥ ೩ ॥**

**ಮುನಿಃ ಪೈಲೋ ಯಾಜ್ಞವಲ್ಕ್ಯೋ ಗೌತಮಸ್ತು ಮಹಾತಪಾಃ ।**
**ಭಾರದ್ವಾಜೋ ಮುನಿರ್ಧೀಮಾನ್ ತಥಾ ನಾರದಪರ್ವತೌ ॥ ೪ ॥**

**ವೈಶಂಪಾಯನೋ ಮಹಾತ್ಮಾ ಶೌನಕಶ್ಚ ಮಹಾತಪಾಃ ।**
**ದಕ್ಷೋಽಂಗಿರಾಸ್ತಥಾ ಗರ್ಗೋ ಗಾಲವಶ್ಚ ಮಹಾತಪಾಃ ॥ ೫ ॥**

**ತಾನಾಗತಾನ್ ಋಷೀನ್ ದೃಷ್ಟ್ವಾ ಶತಾನೀಕೋ ಮಹೀಪತಿಃ ।**
**ವಿಧಿವತ್ ಪೂಜಯಾಮಾಸ ಅಭಿಗಮ್ಯ ಮಹಾಮತಿಃ ॥ ೬ ॥**

**ಪುರೋಹಿತಂ ಪುರಸ್ಕೃತ್ಯ ಅರ್ಘಂ ಗಾಂ ಸ್ವಾಗತೇನ ಚ ।**
**ಪೂಜಯಿತ್ವಾ ತತಸ್ಸರ್ವಾನ್ ಪ್ರಣಮ್ಯ ಶಿರಸಾ ಭೃಶಂ ॥ ೭ ॥**

---

೨. ಒಂದಾನೊಂದು ದಿವಸ ಮಹಾತ್ಮರಾದ ಹಲವರು ಮಹರ್ಷಿಗಳು ಮಹಾಬಲಶಾಲಿಯೂ, ಸಂಪದ್ಯುಕ್ತನೂ ಆದ ಶತಾನೀಕನೆಂಬ ಪ್ರಭುವನ್ನು ನೋಡ ಬೇಕೆಂದು ಹೊರಟರು.

೩-೫. ಮಹಾತಪಸ್ವಿಗಳಾದ ಭೃಗು, ಅತ್ರಿ, ವಸಿಷ್ಠ, ಪುಲಸ್ತ್ಯ, ಪುಲಹ, ಕ್ರತು, ಪರಾಶರ, ವ್ಯಾಸ, ಸುಮಂತು, ಜೈಮಿನಿ, ಪೈಲ, ಯಾಜ್ಞವಲ್ಕ್ಯ, ಗೌತಮ, ಭರದ್ವಾಜ, ನಾರದ, ಪರ್ವತ, ವೈಶಂಪಾಯನ, ಶೌನಕ, ದಕ್ಷ, ಅಂಗಿರಸ, ಗರ್ಗ, ಗಾಲವ ಇವರೇ ಮೊದಲಾದ ಅನೇಕ ಮುನಿವರ್ಯರು ಆ ರಾಜನ ಸಮೀಪಕ್ಕೆ ಬಂದರು.

೬. ಬುದ್ಧಿಶಾಲಿಯಾದ ಶತಾನೀಕ ಮಹಾರಾಜನು, ಮಹರ್ಷಿಗಳು ತನ್ನ ಬಳಿಗೆ ಬಂದುದನ್ನು ಕಂಡು ಮರ್ಯಾದೆಯಿಂದ ಪ್ರತ್ಯುತ್ಥಾನಮಾಡಿ ಶಾಸ್ತ್ರೋಕ್ತವಾಗಿ ಪೂಜಿಸಿದನು.

೭. ತನ್ನ ಕುಲಪುರೋಹಿತರು ಹೇಳಿದ ರೀತಿಯಲ್ಲಿ ಸಮಸ್ತ ಋಷಿಗಳಿಗೂ ಸುಖಾಗಮನವನ್ನು ಬಯಸಿ, ಪೂಜೋಪಕರಣಗಳಿಂದ ಪೂಜಿಸಿ, ಗೋವನ್ನು ಸಮರ್ಪಿಸಿ, ನಮ್ರತೆಯಿಂದ ತಲೆಬಾಗಿ, ನಮಸ್ಕರಿಸಿದನು.

**ಸುಖಾಸೀನಾಂಸ್ತತೋ ರಾಜಾ ನಿರಾತಂಕಾನ್ ಗತಕ್ಲಮಾನ್ ।**
**ಉವಾಚ ಪ್ರಣತೋಭೂತ್ವಾ ಬಾಹುಮುದ್ಧೃತ್ಯ ದಕ್ಷಿಣಂ ॥ ೮ ॥**

**ಇದಾನೀಂ ಸಫಲಂ ಜನ್ಮ ಮನ್ಯೇಽಹಂ ಭುವಿ ಸತ್ತಮಾಃ ।**
**ಆತ್ಮನೋ ದ್ವಿಜಶಾರ್ದೂಲಾಃ ತಥಾ ಕೀರ್ತಿರ್ಯಶೋ ಬಲಂ ॥ ೯ ॥**

**ಧನ್ಯೋಽಹಂ ಪುಣ್ಯಕರ್ಮಾ ಚ ಯತೋ ಮಾಂ ದ್ರಷ್ಟುಮಾಗತಾಃ ।**
**ಯೇಷಾಂ ಸ್ಮರಣಮಾತ್ರೇಣ ಯುಷ್ಮಾಕಂ ಪೂಯತೇ ನರಃ ॥ ೧೦ ॥**

**ಶ್ರೋತುಮಿಚ್ಛಾಮ್ಯಹಂ ಕಿಂಚಿತ್ ಧರ್ಮಶಾಸ್ತ್ರಮನುತ್ತಮಂ ।**
**ಆನೃಶಂಸ್ಯಂ ಸಮಾಶ್ರಿತ್ಯ ಕಥಯಧ್ವಂ ಮಹಾಬಲಾಃ ॥ ೧೧ ॥**

**ಯೇನಾಹಂ ಧರ್ಮಶಾಸ್ತ್ರಂ ತು ಶ್ರುತ್ವಾ ಗಚ್ಛೇ ಪರಾಂ ಗತಿಂ ।**
**ಯಥಾ ಗತೋ ಮಮ ಪಿತಾ ಶ್ರುತ್ವಾ ವೈ ಭಾರತಂ ಪುರಾ ॥ ೧೨ ॥**

---

೮. ಈ ಎಲ್ಲ ಋಷಿಗಳೂ ಆಯಾಸಪರಿಹಾರಮಾಡಿಕೊಂಡು (ನಿರಾಂತಕವಾಗಿ) ಕುಳಿತುಕೊಂಡಮೇಲೆ, ಆ ರಾಜನು ವಿನಯನಮ್ರವಾಗಿ ಬಲಗೈಯನ್ನು ಮೇಲಕ್ಕೆತ್ತಿಕೊಂಡು ಹೇಳಲಾರಂಭಿಸಿದನು.

೯. ಸಜ್ಜನ ಶ್ರೇಷ್ಠರಾದ ಬ್ರಾಹ್ಮಣರೇ ! ಭೂಲೋಕದಲ್ಲಿ ನನ್ನನ್ನು ಯಶಸ್ಸಿನಿಂದಲೂ, ಬಲದಿಂದಲೂ, ಕೂಡಿದವನೆಂದು ತಾವು ಭಾವಿಸಿದುದರಿಂದ ಈಗಲೀಗ ನನ್ನ ಜನ್ಮವು ಸಾರ್ಥಕವಾಯಿತು.

೧೦. ಯಾರ ಸ್ಮರಣೆಮಾಡಿದಮಾತ್ರಕ್ಕೆ ಮಾನವನು ಪರಿಶುದ್ಧನಾಗುವನೋ ಅಂತಹ ಮಹಾನುಭಾವರೆನಿಸಿದ ನೀವು ನನ್ನನ್ನು ನೋಡಲು ಬಂದಿರುವುದರಿಂದ ನಾನೇ ಧನ್ಯ ಮತ್ತು ನಾನೇ ಪುಣ್ಯಶಾಲಿ, ಅಲ್ಲವೇ?

೧೧. ಮಹಾಮಹಿಮರಾದ ಮುನಿವರ್ಯರೇ ! ಶ್ರೇಷ್ಠವಾದ ಧರ್ಮಶಾಸ್ತ್ರದಲ್ಲಿ ಸ್ವಲ್ಪವನ್ನಾದರೂ ಕೇಳಬೇಕೆಂದು ಆಸೆಯಿದೆ. ಆದ್ದರಿಂದ ತಾವು ಸೌಮ್ಯತೆಯಿಂದ ಅಪ್ಪಣೆಕೊಡಿಸಬೇಕು.

೧೨. ಪೂರ್ವದಲ್ಲಿ ನನ್ನ ತಂದೆಯು ಪುಣ್ಯತಮವಾದ ಭಾರತವನ್ನು ಶ್ರವಣಮಾಡಿ ಹೇಗೆ ಸದ್ಗತಿಯನ್ನು ಪಡೆದನೋ ಹಾಗೆ ನಾನೂ ಸದ್ಗತಿಪ್ರಾಪ್ತಿಗಾಗಿ ಧರ್ಮಬೋಧಕವಾದ ಪುರಾಣವನ್ನು ಕೇಳಬಯಸುವೆನು.

**ತಥೋಕ್ತಾಸ್ತೇನ ರಾಜ್ಞೋ ವೈ ಬ್ರಾಹ್ಮಣಾಸ್ತೇ ಸಮಂತತಃ ।**
**ಸಮಾಗಮ್ಯ ಮಿಥಸ್ತೇ ತು ವಿಮೃಶ್ಯ ಚ ಭೃಶಂ ತದಾ ॥ ೧೩ ॥**

**ಪೂಜಯಿತ್ವಾ ತತೋ ವ್ಯಾಸಂ ಇದಂ ವಚನಮಬ್ರುವನ್ ।**
**ವ್ಯಾಸಂ ಪ್ರಸಾದಯ ವಿಭೋ ಏಷ ತೇ ಕಥಯಿಷ್ಯತಿ ॥ ೧೪ ॥**

**ತಿಷ್ಠತ್ಯಸ್ಮಿನ್ ಮಹಾಬಾಹೋ ವಯಂ ವಕ್ತುಂ ನ ಶಕ್ನುಮಃ ।**
**ತಿಷ್ಠಮಾನೇ ಗುರೌ ಶಿಷ್ಯಃ ಕಥಂ ವಕ್ತಿ ಮಹಾಮತೇ ॥ ೧೫ ॥**

**ಅಯಂ ಗುರುಸ್ಸದಾಸ್ಮಾಕಂ ಸಾಕ್ಷಾನ್ನಾರಾಯಣಸ್ತಥಾ ।**
**ಕೃಪಾಲುಶ್ಚ ತಥಾ ಚಾಯಂ ತಥಾ ದಿವ್ಯವಿಧಾನವಿತ್ ॥ ೧೬ ॥**

**ಚತುರ್ಣಾಮಪಿ ವರ್ಣಾನಾಂ ಪಾವನಾಯ ಮಹಾತ್ಮನಾಂ ।**
**ಧರ್ಮಶಾಸ್ತ್ರಮನೇನೋಕ್ತಂ ಧರ್ಮಾದ್ಯೈಃ ಸುಸಮನ್ವಿತಂ ॥ ೧೭ ॥**

---

೧೩. ಈರೀತಿಯಾಗಿ ಶತಾನೀಕ ರಾಜನು ಪ್ರಾರ್ಥಿಸಲಾಗಿ ಆ ಮುನಿವರ್ಯ ರೆಲ್ಲರೂ ಒಟ್ಟುಗೂಡಿ ಬಹುಹೊತ್ತು ಪರಸ್ಪರ ಬಹುವಾಗಿ ವಿಮರ್ಶಿಸಿ, ವ್ಯಾಸ ಮಹರ್ಷಿಗಳನ್ನು ಶ್ಲಾಘನೆಮಾಡಿ, ಹೇಳತೊಡಗಿದರು.

೧೪-೧೫. ಬಲಶಾಲಿಯೂ, ಬುದ್ಧಿಶಾಲಿಯೂ, ಆದ ರಾಜನೇ ! ಈ ವ್ಯಾಸ ಮಹರ್ಷಿಗಳನ್ನು ಪ್ರಾರ್ಥಿಸಿ ಒಪ್ಪಿಸಿಕೊ, ಅವರು ಇದನ್ನು ನಿನಗೆ ಚೆನ್ನಾಗಿ ತಿಳಿಸ ಬಲ್ಲರು. ಅವರೇ ಪ್ರತ್ಯಕ್ಷದಲ್ಲಿರುವಾಗ ನಾವು ಅಷ್ಟುಮಟ್ಟಿಗೆ ತಿಳಿಸಲು ಶಕ್ತರಲ್ಲ. ಪ್ರವಚನಪಟುವಾದ ಗುರುವೇ ಸಾಕ್ಷಾತ್ತಾಗಿರುವಲ್ಲಿ ಶಿಷ್ಯನು ಹೇಳಲು ತೊಡಗು ವುದು ಸಮಂಜಸವಲ್ಲ.

೧೬. ಈ ವ್ಯಾಸರು ಸಾಕ್ಷಾತ್ ನಾರಾಯಣಸ್ವರೂಪರು. ಇವರು ನಮಗೆ ಗುರುಗಳು. ತುಂಬಾ ದಯಾಳುಗಳು ಮತ್ತು ಸರ್ವಶ್ರೇಷ್ಠವಾದ ಕರ್ತವ್ಯವನ್ನು ತಿಳಿದವರು.

೧೭. ಬ್ರಹ್ಮ, ಕ್ಷತ್ರ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣಗಳವರಿಗೂ, ಪರಿಶುದ್ಧವಾದುದೆನಿಸಿದ ಧರ್ಮ ಮುಂತಾದ ವಿಷಯಗಳಿಂದ ಕೂಡಿದ ಶಾಸ್ತ್ರವನ್ನೇ ಇವರು ರಚಿಸಿರುತ್ತಾರೆ.

**ಬಿಭೇತಿ ಗಹನಾತ್ ಶಾಸ್ತ್ರಾತ್ ಲೋಕೋ ವ್ಯಾಧಿರಿವೌಷಧಾತ್ ।**
**ಭಾರತಸ್ಯ ಚ ವಿಸ್ತಾರೋ ಮುನಿನಾ ವ್ಯಾಹೃತಃ ಸ್ವಯಂ ॥ ೧೮ ॥**

**ಯಥಾ ಸ್ವಾದು ಚ ಪಥ್ಯಂ ಚ ದದ್ಯಾತ್ಸ್ವಂ ಭಿಷಗೌಷಧಂ ।**
**ತಥಾ ರಮ್ಯಂ ಚ ಶಾಸ್ತ್ರಂ ಚ ಭಾರತಂ ಕೃತವಾನ್ಮುನಿಃ ॥ ೧೯ ॥**

**ಆಸ್ತಿಕ್ಯಾರೋಹಸೋಪಾನಮೇತದ್ಭಾರತಮುಚ್ಯತೆ ।**
**ತಚ್ಛೃತ್ವಾ ಸ್ವರ್ಗ ನರಕೌ ಲೋಕೈಃ ಸಾಕ್ಷಾದವೇಕ್ಷತೇ ॥ ೨೦ ॥**

**ದೇವತಾತೀರ್ಥತಪಸಾಂ ಭಾರತಾದೇವ ನಿಶ್ಚಯಃ ।**
**ನ ಜನ್ಯತೇ ನಾಸ್ತಿಕತಾ ತಸ್ಯ ಮೀಮಾಂಸಕೈರಪಿ ॥ ೨೧ ॥**

---

೧೮. ಮಹೌಷಧಕ್ಕೆ ವ್ಯಾಧಿಯು ಹೆದರುವಂತೆ ಸುಲಭಗ್ರಾಹ್ಯವಲ್ಲದ, ಗಹನವಾದ ಶಾಸ್ತ್ರವ್ಯಾಸಂಗಕ್ಕೆ ಜನಸಾಮಾನ್ಯವು ಹೆದರಿ ಅದನ್ನು ಅಭ್ಯಾಸಮಾಡುವುದಿಲ್ಲ. ಆದ್ದರಿಂದ ಆ ಶಾಸ್ತ್ರವಿಚಾರವನ್ನೊಳಗೊಂಡಿರುವಂತೆ ಮಹಾಭಾರತದ ಕಥೆಯನ್ನು ಈ ಮಹಾನುಭಾವರು ರಚಿಸಿದ್ದಾರೆ.

೧೯. ವೈದ್ಯನು ಯಾವ ರೀತಿಯಲ್ಲಿ ಔಷಧಿಯನ್ನು ಸವಿವಸ್ತುಗಳೊಡಗೂಡಿಸಿ ಸೇವನೆಗೆ ಹಿತವಾಗುವಂತೆ ಮಾಡಿ, ಕೊಡುತ್ತಾನೋ ಅದೇ ರೀತಿಯಲ್ಲಿ ಈ ಮುನಿವರ್ಯರು ಕಥೆಗಳಲ್ಲಿ ಶಾಸ್ತ್ರಾರ್ಥ ವಿಚಾರಗಳು ಅಡಗಿರುವಂತೆಮಾಡಿ ಮನೋಹರವಾಗಿ ಮಹಾಭಾರತವನ್ನು ರಚಿಸಿದ್ದಾರೆ.

೨೦. ಪ್ರಾಣಿಗಳು ಆಸ್ತಿಕ್ಯವೆಂಬ ಅಂತಸ್ತಿಗೆ ಏರುವುದಕ್ಕೆ ಭಾರತವು ಅನುಕೂಲವಾದ ಮೆಟ್ಟಿಲಾಗಿದೆ. ಈ ಭಾರತವನ್ನು ಅವಲೋಕಿಸಿದ ಮಾನವವರ್ಗವು ಸ್ವರ್ಗ ನರಕಗಳ ಸ್ವರೂಪವನ್ನು ಪ್ರತ್ಯಕ್ಷವಾಗಿ ಕಾಣಬಹುದು.

೨೧. ಇಂತಹ ದೇವತಾಸೇವೆಯನ್ನು ಮಾಡಬೇಕು. ಇಂತಹ ತೀರ್ಥಸ್ನಾನವನ್ನು ಮಾಡಬೇಕು. ಇಂತಹ ತಪಸ್ಸನ್ನು ಮಾಡಬೇಕು. ಎಂಬ ವಿಷಯಗಳನ್ನು ಭಾರತದಿಂದಲೇ ನಿಶ್ಚಯಿಸಬೇಕು. ಕರ್ಮಪ್ರಾಧಾನ್ಯವನ್ನು ಹೇಳುವ ಮೀಮಾಂಸಾಶಾಸ್ತ್ರಜ್ಞರು ಎಷ್ಟು ಪರಿಯಾಗಿ ವಾದಿಸಿದರೂ ನಾಸ್ತಿಕತೆಯನ್ನು ಸ್ಥಾಪಿಸಲು ಸಾಧ್ಯವಿಲ್ಲ.

ವಿಷ್ಣೌ ದೇವೇಷು ವೇದೇಷು ಗುರುಷು ಬ್ರಾಹ್ಮಣೇಷು ಚ ।
ಭಕ್ತಿರ್ಭವತಿ ಕಲ್ಯಾಣೀ ಭಾರತಾದೇವ ಧೀಮತಾಂ ॥ ೨೨ ॥

ಧರ್ಮಾರ್ಥಕಾಮಮೋಕ್ಷಾಣಾಂ ಭಾರತಾತ್ ಸಿದ್ಧಿರೇವ ಹಿ ।
ಅಜಿಂಹೋ ಭಾರತಃ ಪಂಥಾ ನಿರ್ವಾಣಪದಗಾಮಿನಾಂ ॥ ೨೩ ॥

ಮೋಕ್ಷ ಧರ್ಮಾರ್ಥಕಾಮಾನಾಂ ಪ್ರಪಂಚೋ ಭಾರತೇ ಕೃತಃ ।
ಅನಿತ್ಯತಾಪಸಂತಪ್ತಾ ಭವಂತಿ ತಸ್ಯ ಮುಕ್ತಯೇ ॥ ೨೪ ॥

ವಿಪತ್ತಿಂ ಭಾರತಾತ್ ಶ್ರುತ್ವಾ ವೃಷ್ಣಿಪಾಂಡವಸಂಪದಾಂ ।
ದುಃಖಾವಸಾನಾದ್ರಾಜೇಂದ್ರ ಪುಣ್ಯಂ ಚ ಸಂಶ್ರಯೇದ್ಬುಧಃ ॥ ೨೫ ॥

ಏವಂವಿಧಂ ಭಾರತಂ ವೈ ಪ್ರೋಕ್ತಂ ಯೇನ ಮಹಾತ್ಮನಾ ।
ಸೋಽಯಂ ನಾರಾಯಣಸ್ಸಾಕ್ಷಾದ್ವ್ಯಾಸರೂಪೀ ಮಹಾಮುನಿಃ ॥ ೨೬ ॥

---

೨೨. ಬುದ್ಧಿಶಾಲಿಗಳಿಗೆ ಶ್ರೀಮನ್ನಾರಾಯಣನಲ್ಲಿಯೂ, ಇತರ ದೇವರುಗಳಲ್ಲಿಯೂ, ವೇದಗಳಲ್ಲಿಯೂ, ಗುರುಗಳಲ್ಲಿಯೂ, ಬ್ರಾಹ್ಮಣರುಗಳಲ್ಲಿಯೂ ಸಹ ಶುಭಕರವಾದ ಭಕ್ತಿಯು ಭಾರತಪಠನದಿಂದಲೇ ಲಭಿಸುವುದು.

೨೩. ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ಚತುರ್ವಿಧ ಪುರುಷಾರ್ಥಗಳೂ ಭಾರತಪಠನದಿಂದಲೇ ಲಭಿಸುವುವು. ಮೋಕ್ಷಸಾಧಕರಿಗಂತೂ ಭಾರತವು ನೇರವಾದ ಮಾರ್ಗವಾಗಿದೆ.

೨೪. ಮೋಕ್ಷ, ಧರ್ಮ, ಅರ್ಥ, ಕಾಮ ಇವುಗಳ ಸ್ವರೂಪಗಳು ಭಾರತದಲ್ಲಿ ವಿಸ್ತಾರವಾಗಿ ನಿರೂಪಿತಗಳಾಗಿವೆ. ತಾತ್ಕಾಲಿಕಗಳಾದ ಸಂಕಟಕ್ಕೊಳಗಾಗಿ ತಾಪಪಡುವವರಿಗೆ ಅದರ ಪರಿಹಾರವೂ ಇದರಿಂದಲೇ ಲಭಿಸುವುದು.

೨೫. ಎಲೈ ರಾಜಶ್ರೇಷ್ಠನೇ! ವೃಷ್ಣಿವಂಶೀಯರ ಮತ್ತು ಪಾಂಡವರ ಸಂಪತ್ತುಗಳಿಗೆ ಒದಗಿದ ತೊಂದರೆಯನ್ನು ಭಾರತದಿಂದ ಕೇಳಿದವನಿಗೆ ಆ ಮೂಲಕ ದುಃಖಪರಿಹಾರವಾಗಿ ಪುಣ್ಯಪ್ರಾಪ್ತಿಯಾಗುತ್ತದೆ.

೨೬. ಯಾವ ಮಹಾತ್ಮರು ಈ ವಿಧವಾದ ಮಹಿಮಾತಿಶಯಗಳುಳ್ಳ ಭಾರತವನ್ನು ಹೇಳಿದರೋ ಆ ಮಹರ್ಷಿ ವ್ಯಾಸಮಹಾಮುನಿವರ್ಯರು ಪ್ರತ್ಯಕ್ಷ ನಾರಾಯಣನೇ ಆಗಿದ್ದಾರೆ.

**ಸ ತೇಷಾಂ ವಚನಂ ಶ್ರುತ್ವಾ ಪ್ರತಾಪೀ ಯೋ ಮಹೀಪತಿಃ ।**
**ಪ್ರಸಾದಯಾಮಾಸ ಮುನಿಂ ವ್ಯಾಸಂ ಶಾಸ್ತ್ರವಿಶಾರದಂ ॥ ೨೭**

**॥ ಶತಾನೀಕ ಉವಾಚ ॥**

**ಅಂಜಲಿಃ ಶಿರಸಾ ಬ್ರಹ್ಮನ್ ಕೃತೋಽಯಂ ಪಾದಯೋಸ್ತವ ।**
**ಬ್ರೂಹಿ ಮೇ ಧರ್ಮಶಾಸ್ತ್ರಂ ತು ಯೇನಾಹಂ ಪೂತತಾಂ ವ್ರಜೇ ॥ ೨೮ ॥**

**ಸಮುದ್ಧರ ಭವಾದಸ್ಮಾತ್ ಕೀರ್ತಯಿತ್ವಾ ಕಥಾಂ ಶುಭಾಂ ।**
**ಯಥಾ ಮಮ ಪಿತಾ ಪೂರ್ವಂ ಕೀರ್ತಯಿತ್ವಾ ತು ಭಾರತಂ ॥ ೨೯ ॥**

**ತಸ್ಯೈತದ್ವಚನಂ ಶ್ರುತ್ವಾ ವ್ಯಾಸೋ ವಚನಮಬ್ರವೀತ್ ।**
**ಏಷ ಶಿಷ್ಯಃ ಸುಮಂತುರ್ಮೇ ಕಥಯಿಷ್ಯತಿ ತೇ ಪ್ರಭೋ ॥ ೩೦ ॥**

**ಯದಿಚ್ಛಸಿ ಮಹಾಬಾಹೋ ಪ್ರೀತಿದಂ ಚಾದ್ಭುತಂ ಶುಭಂ ।**
**ಶ್ರವ್ಯಂ ಭರತಶಾರ್ದೂಲ ಸರ್ವಪಾಪಭಯಾಪಹಂ ॥ ೩೧ ॥**

---

೨೭. ಮಹಾಪ್ರತಾಪಶಾಲಿಯಾದ ಆ ಮಹಾರಾಜನು ಬಹು ಮಂದಿ ಮಹರ್ಷಿಗಳು ಈರೀತಿ ಹೇಳಿದ್ದನ್ನು ಕೇಳಿ ಸಕಲ ಶಾಸ್ತ್ರನಿಪುಣರಾದ ವ್ಯಾಸಮುನಿವರ್ಯರನ್ನು ಪ್ರಾರ್ಥಿಸಿ ಪ್ರಸನ್ನರನ್ನಾಗಿ ಮಾಡಲು ಯತ್ನಿಸಿದನು.

೨೮. ಆಗ ಶತಾನೀಕರಾಜನು ವ್ಯಾಸರನ್ನು ಕುರಿತು "ಎಲೈ ಬ್ರಾಹ್ಮಣೋತ್ತಮ! ನನ್ನ ಶಿರಸ್ಸಿನಲ್ಲಿ ಕೈಜೋಡಿಸಿ ಬೊಗಸೆಮಾಡಿ ನಿಮ್ಮ ಪಾದಗಳನ್ನು ನಮಿಸುತ್ತೇನೆ. ನನಗೆ ಶುದ್ಧಿಯನ್ನುಂಟುಮಾಡುವಂತಹ ಧರ್ಮಶಾಸ್ತ್ರವನ್ನು ಕೃಪೆಮಾಡಿ ತಿಳಿಸಬೇಕು.

೨೯. ಹಿಂದೆ ನನ್ನ ತಂದೆಯು ಭಾರತ (ಇತಿಹಾಸ) ವನ್ನು ಶ್ರವಣಮಾಡಿ ಕೃತಕೃತ್ಯನಾದನಲ್ಲವೆ. ಅದೇರೀತಿ ತಾವು ಶುಭಕರವಾದ ಈ ಕಥೆಯನ್ನು ಹೇಳಿ ನನ್ನನ್ನು ಸಂಸಾರಸಮುದ್ರದಿಂದ ಉದ್ಧರಿಸಿ" ಎಂದು ಹೇಳಿದನು.

೩೦. ಶತಾನೀಕರಾಜನು ಹೇಳಿದ ಈ ಮಾತನ್ನು ಕೇಳಿ ವ್ಯಾಸಮುನಿಗಳು "ಎಲೈ ಪ್ರಭುವೇ, ನನ್ನ ಶಿಷ್ಯನಾದ ಈ ಸುಮಂತುವು ನಿನಗೆ ವಿವರಿಸಿ ತಿಳಿಸುತ್ತಾನೆ, ಲಾಲಿಸು.

೩೧. ಮಹಾಬಲಶಾಲಿಯೂ, ಭರತ ವಂಶಜರಲ್ಲಿ ಶ್ರೇಷ್ಠನೂ ಆದ ರಾಜನೇ! ಸಮಸ್ತಪಾಪಗಳ ಭಯಪರಿಹಾರ ಮಾಡತಕ್ಕದ್ದೂ, ಪ್ರೀತಿಯನ್ನುಂಟು ಮಾಡ

**ಯಥಾ ವೈಶಂಪಾಯನೇನ ಪುರಾ ಪ್ರೋಕ್ತಂ ಪಿತುಸ್ತವ ।**
**ಮಹಾಭಾರತಮಾಖ್ಯಾನಂ ಬ್ರಹ್ಮಹತ್ಯಾವ್ಯಪೋಹನಂ ॥ ೩೨ ॥**

**ಅಥ ತಂ ಋಷಯಸ್ಸರ್ವೇ ರಾಜಾನಮಿದಮಬ್ರುವನ್ ।**
**ಸಾಧು ಪ್ರೋಕ್ತಂ ಮಹಾಬಾಹೋ ವ್ಯಾಸೇನಾಮಿತಬುದ್ಧಿನಾ ॥ ೩೩ ॥**

**ಸುಮಂತುಂ ಪೃಚ್ಛ ರಾಜರ್ಷೇ ಸರ್ವಶಾಸ್ತ್ರವಿಶಾರದಂ ।**
**ಅಸ್ಮಾಕಮಪಿ ರಾಜೇಂದ್ರ ಶ್ರವಣೇ ಜಾಯತೇ ಮತಿಃ ॥ ೩೪ ॥**

**ಅಥ ವ್ಯಾಸೋ ಮಹಾತೇಜಾ ಸುಮಂತುಂ ಋಷಿಮಬ್ರವೀತ್ ।**
**ಕಥಯಾಸ್ಮೈ ಕಥಾಸ್ತಾತ ಯಾಃ ಶ್ರುತ್ವಾ ಮೋದತೇ ನೃಪಃ ॥ ೩೫ ॥**

---

ತಕ್ಕದ್ದೂ. ಶುಭಕರವೂ, ಅದ್ಭುತವೂ, ಕೇಳಲು ಅರ್ಹವೂ ಆದ ಯಾವ ಕಥೆಯನ್ನು ಕೇಳಲು ನಿನಗೆ ಇಷ್ಟವಿದೆಯೆಂಬುದನ್ನು ಹೇಳು.

೩೨. ಪೂರ್ವದಲ್ಲಿ ವೈಶಂಪಾಯನ ಮುನಿಯು ನಿಮ್ಮ ತಂದೆಗೆ ಬ್ರಹ್ಮಹತ್ಯಾ ದೋಷಪರಿಹಾರಕವಾದ ಮಹಾಭಾರತದ ಕಥೆಯನ್ನು ಹೇಳಿದ್ದನಲ್ಲವೇ? ಅದರಂತೆ ಈಗಲೂ ಆಗಲಿ" ಎಂದರು.

೩೩. ಅನಂತರ ಅಲ್ಲಿದ್ದ ಋಷಿಗಳೆಲ್ಲರೂ ಶತಾನೀಕನನ್ನು ಕುರಿತು "ಅಯ್ಯಾ ಶೂರನಾದ ಪ್ರಭುವೇ! ಮಹಾಬುದ್ಧಿಶಾಲಿಗಳಾದ ವ್ಯಾಸರು ಬಹು ಸಮಂಜಸವಾಗಿ ಹೇಳಿದರು.

೩೪. ಎಲೈ ರಾಜರ್ಷಿಯೇ! ಸಮಸ್ತ ಶಾಸ್ತ್ರಗಳಲ್ಲಿಯೂ, ವಿಶಾರದನೆನಿಸಿದ ಸುಮಂತುಮುನಿಯನ್ನು ಕೇಳಿಕೊ, ಅವರಿಂದ ಪುರಾಣವನ್ನು ಕೇಳಬೇಕೆಂದು ನಮ್ಮೆಲ್ಲರಿಗೂ ಆಶೆ ಹುಟ್ಟಿದೆ" ಎಂದರು.

೩೫. ಆಗ ಪ್ರಭಾವಶಾಲಿಯಾದ ವ್ಯಾಸಮುನಿವರ್ಯರು ಸುಮಂತುವನ್ನು ಕುರಿತು, "ಅಯ್ಯಾ ಸುಮಂತುವೇ! ಈ ಮಹಾರಾಜನಿಗೆ ಭಾರತವೇ ಮೊದಲಾದ ಕಥೆಗಳನ್ನು ಕೇಳುವುದರಲ್ಲಿ ಮನಸ್ಸು ಆಸಕ್ತವಾಗಿದೆ. ಆದ್ದರಿಂದ ಪುರಾಣ ಕಥೆಯನ್ನು ಹೇಳು. ಆತನು ಸಂತೋಷಪಡುತ್ತಾನೆ" ಎಂದು ಹೇಳಿದರು.

**ಭಾರತಾದಿ ಕಥಾನಾಂ ತು ಯತ್ರಾಸ್ಯ ರಮತೇ ಮನಃ ।**
**ಅಸಾವಪಿ ಮಹಾತೇಜಾಃ ಶ್ರುತ್ವಾ ಭಾವಂ ಮಹಾಮತೇಃ ।**
**ವ್ಯಾಸಸ್ಯ ದ್ವಿಜಶಾರ್ದೂಲ ಋಷೀಣಾಂ ಚಾಪಿ ಸರ್ವಶಃ ॥ ೩೬ ॥**

**ಚಕಾರ ವಕ್ತುಂ ಸ ಮನಃ ತಸ್ಮೈ ರಾಜ್ಞೇ ಮಹಾಮತಿಃ ।**
**ವ್ಯಾಸಸ್ಯ ಶಾಸನಾದ್ವಿಪ್ರ ಋಷೀಣಾಂಚೈವ ಸರ್ವಶಃ ॥ ೩೭ ॥**

**ಅಥ ರಾಜಾ ಮಹಾತೇಜಾ ಆಜಮೀಢೋ ದ್ವಿಜೋತ್ತಮಂ ।**
**ಪ್ರಣಮ್ಯ ಶಿರಸಾತ್ಯರ್ಥಂ ಪ್ರವಕ್ತುಮುಪಚಕ್ರಮೆ ॥ ೩೮ ॥**

**॥ ಶತಾನೀಕ ಉವಾಚ ॥**

**ಪುಣ್ಯಾಖ್ಯಾನಂ ಮಮ ಬ್ರಹ್ಮನ್ ಪಾವನಾಯ ಪ್ರಕೀರ್ತಯ ।**
**ಶ್ರುತ್ವಾ ಯದ್ಬ್ರಾಹ್ಮಣ ಶ್ರೇಷ್ಠ ಮುಚ್ಯೇಽಹಂ ಸರ್ವಪಾತಕಾತ್ ॥ ೩೯ ॥**

---

೩೬. ಮಹಾತೇಜಸ್ವಿಯೂ, ಬ್ರಾಹ್ಮಣಶ್ರೇಷ್ಠನೂ ಆದ ಆ ಸುಮಂತುವು ಬುದ್ಧಿಶಾಲಿಗಳಾದ ವ್ಯಾಸರ ಮತ್ತು ಇತರ ಎಲ್ಲ ಋಷಿಗಳ ಮನೋಭಾವವನ್ನೂ ಅರಿತುಕೊಂಡನು.

೩೭. ಬುದ್ಧಿಶಾಲಿಯಾದ ಸುಮಂತುವು ವ್ಯಾಸಮಹರ್ಷಿಗಳ ಅಜ್ಞಾನುಸಾರವೂ ಇತರ ಋಷಿಗಳ ಇಷ್ಟಾನುಸಾರವಾಗಿಯೂ, ಆ ಮಹಾರಾಜನಿಗೆ ಭಾರತದ ಕಥೆಯನ್ನು ಹೇಳುವುದಕ್ಕೆ ಮನಸ್ಸುಮಾಡಿದನು.

೩೮. ಮಹಾತೇಜಸ್ವಿಯಾದ ರಾಜನು ಆಗ ಬ್ರಾಹ್ಮಣಶ್ರೇಷ್ಠನಾದ ಅಜಮೀಢ ಪುತ್ರನನ್ನು ಸಾಷ್ಟಾಂಗವಾಗಿ ನಮಸ್ಕರಿಸಿ ಮಾತಾಡತೊಡಗಿದನು.

೩೯. ಆಗ ಶತಾನೀಕನು "ಎಲೈ ಬ್ರಾಹ್ಮಣೋತ್ತಮ! ನನ್ನ ಸರ್ವ ಪಾಪಗಳನ್ನೂ ಪರಿಹಾರಮಾಡುವುದಕ್ಕಾಗಿಯೂ, ನನ್ನನ್ನು ಪರಿಶುದ್ಧನನ್ನಾಗಿ ಮಾಡುವುದಕ್ಕಾಗಿಯೂ, ಪುಣ್ಯಕರವಾದ ಕಥೆಯನ್ನು ಕೃಪೆಯಿಟ್ಟು ಅಪ್ಪಣೆಕೊಡಿಸಿ" ಎಂದು ಹೇಳಿದನು.

॥ ಸುಮಂತುರುವಾಚ ॥

ನಾನಾ ವಿಧಾನಿ ಶಾಸ್ತ್ರಾಣಿ ಸಂತಿ ಪುಣ್ಯಾನಿ ಭಾರತ ।
ಯಾನಿ ಶ್ರುತ್ವಾ ನರೋ ರಾಜನ್ ಮುಚ್ಯತೇ ಸರ್ವಕಿಲ್ಬಿಷೈಃ ॥ ೪೦ ॥

ಕಿಮಿಚ್ಛಸಿ ಮಹಾಬಾಹೋ ಶ್ರೋತುಂ ಯತ್ತ್ವಾಂ ಬ್ರವೀಮಿ ವೈ ।
ಭಾರತಾದಿ ಕಥಾನಾಂ ತು ಯಾಸು ಧರ್ಮಾದಯಃ ಸ್ಥಿತಾಃ ॥ ೪೧ ॥

॥ ಶತಾನೀಕ ಉವಾಚ ॥

ಮತಾನಿ ಕಾನಿ ವಿಪ್ರೇಂದ್ರ ಧರ್ಮಶಾಸ್ತ್ರಾಣಿ ಸುವ್ರತ ।
ಯಾನಿ ಶ್ರುತ್ವಾ ನರೋ ವಿಪ್ರ ಮುಚ್ಯತೇ ಸರ್ವಕಿಲ್ಬಿಷೈಃ ॥ ೪೨ ॥

॥ ಸುಮಂತುರುವಾಚ ॥

ಶ್ರೂಯತಾಂ ಧರ್ಮಶಾಸ್ತ್ರಾಣಿಮನುರ್ವಿಷ್ಣುರ್ಯಮೋಂಗಿರಾಃ ।
ವಶಿಷ್ಠದಕ್ಷಃಸಂವರ್ತಶಾತಾತಪಪರಾಶರಾಃ ॥ ೪೩ ॥

---

೪೦. ಆಗ ಸುಮಂತುವು "ಎಲೈ ಭರತಕುಲೋತ್ಪನ್ನನಾದ ರಾಜನೇ! ಯಾವುದರ ಶ್ರವಣದಿಂದ ಸಮಸ್ತ ಪಾಪಗಳೂ ಪರಿಹಾರವಾಗುವುವೋ ಅಂತಹ ಪುಣ್ಯಪ್ರದವಾದ ಶಾಸ್ತ್ರ, ಪುರಾಣಾದಿಗಳು ಅನೇಕವಾಗಿವೆ.

೪೧. ಎಲೈ ಪರಾಕ್ರಮಿಯಾದ ಪ್ರಭುವೇ! ಭಾರತವೇ ಮುಂತಾದ ಕಥೆಗಳಲ್ಲಿ ಧರ್ಮ ಮುಂತಾದುವು ಉಕ್ತವಾಗಿವೆ. ಅವುಗಳಲ್ಲಿ ಯಾವುದನ್ನು ಕೇಳಬೇಕೆಂದು ನಿನಗೆ ಆಸೆಯಿದೆ ? ಹೇಳು ಅದನ್ನು ಹೇಳುವೆನು" ಎಂದನು.

೪೨ ಅದಕ್ಕೆ ಶತಾನೀಕನು "ಎಲೈ ನೇಮಿಷ್ಠನಾದ ಬ್ರಾಹ್ಮಣೋತ್ತಮನೇ! ನನಗಿರುವ ಅಪೇಕ್ಷೆಯನ್ನು ಹೇಳುತ್ತೇನೆ ಕೇಳು. ಮತಗಳೂ, ಧರ್ಮಶಾಸ್ತ್ರಗಳೂ ಯಾವ ಯಾವುವು. ಇವೆ? ಯಾವುದನ್ನು ಕೇಳಿದರೆ ಮಾನವನ ಸಮಸ್ತಪಾಪಗಳೂ ಹೋಗುತ್ತವೆ ?

೪೩–೪೫. ಆಗ ಸುಮಂತುವು ಆ ರಾಜನನ್ನು ಕುರಿತು, "ಮನು, ವಿಷ್ಣು, ಯಮ, ಅಂಗಿರಸ, ವಸಿಷ್ಠ, ದಕ್ಷ, ಸಂವರ್ತ, ಶಾತಾತಪ, ಪರಾಶರ, ಆಪಸ್ತಂಬ,

**ಆಪಸ್ತಂಬೋಥ ಉಶನಾ ಕಾತ್ಯಾಯನ ಬೃಹಸ್ಪತೀ ।**
**ಗೌತಮ ಶ್ಯಂಖಲಿಖಿತೌ ಹಾರೀತೋಽತ್ರಿ ರಥಾಪಿವಾ ॥ ೪೪ ॥**

**ಏತಾನಿ ಧರ್ಮಶಾಸ್ತ್ರಾಣಿ ಶ್ರುತ್ವಾ ಜ್ಞಾತ್ವಾ ಚ ಭಾರತ ।**
**ವೃಂದಾರಕಪುರಂ ಗತ್ವಾ ಮೋದತೇ ನಾತ್ರ ಸಂಶಯಃ ॥ ೪೫ ॥**

**॥ ಶತಾನೀಕ ಉವಾಚ ॥**

**ಯಾನ್ಯೇತಾನಿ ತ್ವಯೋಕ್ತಾನಿ ಧರ್ಮಶಾಸ್ತ್ರಾಣಿ ಸುವ್ರತ ।**
**ನೇಚ್ಛಾಮಿ ಶ್ರೋತುಂ ವಿಪ್ರೇಂದ್ರ ಶ್ರುತಾನ್ಯೇತಾನಿ ಹಿ ದ್ವಿಜ ॥ ೪೬ ॥**

**ತ್ರಯಾಣಾಮಪಿ ವರ್ಣಾನಾಂ ಪ್ರೋಕ್ತಾನಾಮಪಿ ಪಂಡಿತೈಃ ।**
**ಶ್ರೇಯಸೇ ನ ತು ಶೂದ್ರಾಣಾಂ ತತ್ರ ಮೇ ವಚನಂ ಶೃಣು ॥ ೪೭ ॥**

**ಚತುರ್ಣಾಮಿಹ ವರ್ಣಾನಾಂ ಶ್ರೇಯಸೇ ಯಾನಿ ಸುವ್ರತ ।**
**ಭವಂತಿ ದ್ವಿಜಶಾರ್ದೂಲ ಶ್ರುತಾನಿ ಭುವನತ್ರಯೇ ॥ ೪೮ ॥**

---

ಉಶನಸ್, (ಶುಕ್ರ) ಕಾತ್ಯಾಯನ, ಬೃಹಸ್ಪತಿ, ಗೌತಮ, ಶಂಖಲಿಖಿತ, ಹಾರೀತ, ಅತ್ರಿ, ಇವರೆಲ್ಲಾ ಧರ್ಮಶಾಸ್ತ್ರಕರ್ತರು. ಈ ಧರ್ಮಶಾಸ್ತ್ರಗಳನ್ನು ಕೇಳಿ ತಿಳಿದುಕೊಂಡದ್ದೇ ಆದರೆ ಅವನು ದೇವಲೋಕವನ್ನೈದಿ ಅಲ್ಲಿ ಆನಂದಿಸುತ್ತಾನೆಂಬುದರಲ್ಲಿ ಸಂಶಯವಿಲ್ಲ" ಎಂದನು.

೪೬. ಆಗ ಶತಾನೀಕರಾಜನು ಸುಮಂತುವನ್ನು ಕುರಿತು "ಮಹಾನಿಯಮಶಾಲಿಯಾದ ಬ್ರಾಹ್ಮಣೋತ್ತಮನೇ ! ನೀನು ಈಗ ನಿರೂಪಿಸಿದ ಧರ್ಮಶಾಸ್ತ್ರಗಳೆಲ್ಲವನ್ನೂ ನಾನು ಕೇಳಿ ಆಗಿದೆ ಆದ್ದರಿಂದ ಅದನ್ನು ಮತ್ತೆ ಕೇಳಲು ಅಪೇಕ್ಷೆಯಿಲ್ಲ.

೪೭. ಮಿಕ್ಕ ಮೂರು ವರ್ಣಗಳವರ ಶ್ರೇಯಸ್ಸಿಗೆ ಸಾಧನಗಳನ್ನು ವಿದ್ವಾಂಸರು ನಿರೂಪಿಸಿರುವರು. ಶೂದ್ರರ ಶ್ರೇಯಸ್ಸಾಧಕಗಳಾದ ವಿಷಯಗಳು ಪ್ರತಿಪಾದಿತವಾಗಿಲ್ಲ. ಆ ವಿಚಾರದಲ್ಲಿ ನನ್ನ ಮಾತನ್ನು ಕೇಳು.

೪೮. ವ್ರತನಿಯಮವುಳ್ಳ ಬ್ರಾಹ್ಮಣೋತ್ತಮನೇ! ನಾಲ್ಕು ವರ್ಣಗಳವರ ಶ್ರೇಯಸ್ಸಿಗೆ ಯಾವುವು ಸಾಮಾನ್ಯವಾಗಿ ಸಾಧನಗಳಾಗುತ್ತವೆಯೋ ಅವುಗಳು ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾಗಿಯೇ ಇವೆ.

ವಿಶೇಷತಶ್ಚತುರ್ಥಸ್ಯ ವರ್ಣಸ್ಯ ದ್ವಿಜಸತ್ತಮ ॥ ೪೯ ॥

ಬ್ರಾಹ್ಮಣಾದಿಷು ವರ್ಣೇಷು ತ್ರಿಷು ವೇದಾಃ ಪ್ರಕಲ್ಪಿತಾಃ ।
ಮನ್ವಾದೀನಿ ಚ ಶಾಸ್ತ್ರಾಣಿ ತಥಾಂಗಾನಿ ಸಮಂತತಃ ॥ ೫೦ ॥

ಶೂದ್ರಾಶ್ಚೈವ ಭೃಶಂ ದೀನಾಃ ಪ್ರತಿಭಾಂತಿ ದ್ವಿಜಪ್ರಭೋ ।
ಧರ್ಮಾರ್ಥಕಾಮಮೋಕ್ಷಸ್ಯ ಶಕ್ತಾಃ ಸ್ಯುರವನೌ ಕಥಂ ॥ ೫೧ ॥

ಆಗಮೇನ ವಿಹೀನಾ ಹಿ ಅಹೋ ಕಷ್ಟಂ ಮತಂ ಮಮ ।
ಕಶ್ಚೈಷಾಮಾಗಮಃ ಪ್ರೋಕ್ತಃ ಪುರಾ ದ್ವಿಜಮನೀಷಿಭಿಃ ।
ತ್ರಿವರ್ಗಪ್ರಾಪ್ತಯೇ ಬ್ರಹ್ಮನ್ ಶ್ರೇಯಸೇ ಚ ತಥೋಭಯೋಃ ॥ ೫೨ ॥

॥ ಸುಮಂತುರುವಾಚ ॥

ಸಾಧು ಸಾಧು ಮಹಾಬಾಹೋ ಶೃಣು ಮೇ ಪರಮಂ ವಚಃ ।
ಚತುರ್ಣಾಮಪಿ ವರ್ಣಾನಾಂ ಯಾನಿ ಪ್ರೋಕ್ತಾನಿ ಶ್ರೇಯಸೇ ॥ ೫೩ ॥

---

೪೯-೫೦. ನಾಲ್ಕು ವರ್ಣಗಳವರಿಗೂ ಸಾಮಾನ್ಯವಿಧಿಗೆ ಸಂಬಂಧಪಡದೆ ಶೂದ್ರರಿಗೇ ವಿಶೇಷವಾಗಿ ಅನ್ವಯಿಸುವಂತಹ ನಿಯಮಗಳ ವಿಚಾರವಾಗಿ ಕೇಳಿದೆನು. ಬ್ರಾಹ್ಮಣನೇ ಮುಂತಾದ ಮೂರು ವರ್ಣಗಳಿಗೋಸ್ಕರ ವೇದಗಳೂ, ಮನುಧರ್ಮ ಶಾಸ್ತ್ರಾದಿಗಳೂ, ಆರು ವೇದಾಂಗಗಳೂ, ವಿಸ್ತಾರವಾಗಿ ಪ್ರತಿಪಾದಿತಗಳಾಗಿವೆ.

೫೧. ಅಯ್ಯಾ ಬ್ರಾಹ್ಮಣೋತ್ತಮನೇ! ಶೂದ್ರರಿಗೆ ಇವುಗಳೊಂದರ ಸಹಾಯವೂ ಇಲ್ಲದ್ದರಿಂದ ಅವರಿಗೆ ಬಹು ಕಷ್ಟವೆಂದು ತೋರುತ್ತದೆ. ಆ ಜನರು ಧರ್ಮ, ಅರ್ಥ, ಕಾಮ, ಮೋಕ್ಷ ಇವುಗಳ ಸಂಪಾದನೆಗೆ ಹೇಗೆ ಸಮರ್ಥರಾಗುವರೋ ಕಾಣೆ.

೫೨. ಅಯ್ಯಾ ಬ್ರಾಹ್ಮಣೋತ್ತಮನೇ! ಅವರಿಗೆ ವೇದಾದಿಗಳ ಅಧಿಕಾರವಿಲ್ಲದುದು ಅವರ ಶ್ರೇಯೋಭಿವೃದ್ಧಿಗೆ ಕಷ್ಟವೆಂದೇ ನನಗೆ ತೋರುತ್ತದೆ. ಪ್ರಾಚೀನರಾದ ಮಹರ್ಷಿಗಳು ಅವರಿಗೆ ಧರ್ಮಾರ್ಥ ಕಾಮಗಳೆಂಬ ತ್ರಿವರ್ಗಗಳ ಪ್ರಾಪ್ತಿರೂಪವಾದ ಶ್ರೇಯೋಮಾರ್ಗಕ್ಕೂ ಆ ಮೂಲಕವಾಗಿ ಉಭಯರ ಶ್ರೇಯಸ್ಸಿಗೂ ಅನುಕೂಲವಾಗಿ ಆ ಜನರಿಗೆ ಯಾವ ಆಗಮಗಳನ್ನು ಗೊತ್ತುಮಾಡಿದಾರೆ? ಅದನ್ನು ಕೃಪೆಮಾಡಿ ಹೇಳಬೇಕು" ಎಂದನು.

೫೩. ಆಗ ಸುಮಂತುವು "ಅಯ್ಯಾ ಕ್ಷತ್ರಿಯೋತ್ತಮನೇ! ನೀನು ಪ್ರಶ್ನೆ ಮಾಡಿದುದು ಸರ್ವಥಾ ಸಹಜವಾಗಿದೆ. ನಾಲ್ಕು ವರ್ಣಗಳವರ ಶ್ರೇಯಸ್ಸಿಗೆ ಸಾಧನವೆಂದು ಹೇಳಲಾಗಿರುವ ಶ್ರೇಷ್ಠವಾದ ವಿಚಾರವನ್ನು ಹೇಳುತ್ತೇನೆ ಕೇಳು.

**ಧರ್ಮಶಾಸ್ತ್ರಾಣಿ ರಾಜೇಂದ್ರ ಶೃಣು ತಾನಿ ನೃಪೋತ್ತಮ ।**
**ವಿಶೇಷತಶ್ಚ ಶೂದ್ರಾಣಾಂ ಪಾವನಾನಿ ಮನೀಷಿಭಿಃ ॥ ೫೪ ॥**

**ಅಷ್ಟಾದಶ ಪುರಾಣಾನಿ ಚರಿತಂ ರಾಘವಸ್ಯ ಚ ।**
**ರಾಮಸ್ಯ ಕುರುಶಾರ್ದೂಲ ಧರ್ಮಕಾಮಾರ್ಥಸಿದ್ಧಯೇ ॥ ೫೫ ॥**

**ತಥೋಕ್ತಂ ಭಾರತಂ ವೀರ ಪಾರಾಶರ್ಯೇಣ ಧೀಮತಾ ।**
**ವೇದಾರ್ಥಂ ಸಕಲಂ ಯೋಜ್ಯ ಧರ್ಮಶಾಸ್ತ್ರಾಣಿ ಚ ಪ್ರಭೋ ॥ ೫೬ ॥**

**ಕೃಪಾಲುನಾ ಕೃತಂ ಶಾಸ್ತ್ರಂ ಚತುರ್ಣಾಮಿಹ ಶ್ರೇಯಸೇ ।**
**ವರ್ಣಾನಾಂ ಭವಮಗ್ನಾನಾಂ ಕೃತಂ ಪೋತೋಽಹ್ಯನುತ್ತಮಂ ॥ ೫೭ ॥**

**ಅಷ್ಟಾದಶಪುರಾಣಾನಿ ಅಷ್ಟೌ ವ್ಯಾಕರಣಾನಿ ಚ ।**
**ಜ್ಞಾತ್ವಾ ಸತ್ಯವತೀಸೂನುಃ ಚಕ್ರೇ ಭಾರತ ಸಂಹಿತಾಂ ॥ ೫೮ ॥**

---

೫೪. ಅಯ್ಯಾ ಕ್ಷತ್ರಿಯೋತ್ತಮನಾದ ಮಹಾರಾಜನೇ! ಪ್ರಾಚೀನ ವಿದ್ವಾಂಸರುಗಳು ಶೂದ್ರನಿಗೆ ವಿಶೇಷವಾಗಿ ಪವಿತ್ರಕರವೆಂದು ನಿರೂಪಣಮಾಡಿರುವ ಧರ್ಮಶಾಸ್ತ್ರಗಳ್ಯಾವುವೆಂಬುದನ್ನೂ ಹೇಳುತ್ತೇನೆ ಕೇಳು.

೫೫. ಎಲೈ ಕುರುವಂಶ ಶ್ರೇಷ್ಠನಾದ ರಾಜನೇ! ತ್ರೇತಾಯುಗದಲ್ಲಿ ರಘು ವಂಶಜನಾದ ಶ್ರೀರಾಮನಿಗೆ ಧರ್ಮ, ಅರ್ಥ, ಕಾಮ, ಎಂಬ ತ್ರಿವರ್ಗಗಳ ಸಿದ್ಧಿಗಾಗಿ ಹದಿನೆಂಟು ಪುರಾಣಗಳನ್ನು ಹೇಳಲಾಯಿತು.

೫೬. ಅಯ್ಯಾ ಶೂರನಾದ ಪ್ರಭುವೇ! ಅದೇ ರೀತಿಯಲ್ಲಿ ಬುದ್ಧಿಕುಶಲರಾದ ಪರಾಶರ ಪುತ್ರರಾದ ವ್ಯಾಸರು ಸಮಸ್ತ ವೇದಗಳ ಅರ್ಥವನ್ನೆಲ್ಲಾ ಸಂಗ್ರಹಿಸಿ, ಧರ್ಮಶಾಸ್ತ್ರಗಳನ್ನೂ ಅಡಕಮಾಡಿ, ಭಾರತವನ್ನು ರಚಿಸಿದರು.

೫೭. ದಯಾಳುವಾದ ವ್ಯಾಸರು ನಾಲ್ಕು ವರ್ಣಗಳವರ ಶ್ರೇಯಸ್ಸಿಗೋಸ್ಕರ ವಾಗಿ ಈ ಶಾಸ್ತ್ರವನ್ನು ರಚಿಸಿದರು. ಭವಸಾಗರದಲ್ಲಿ ಮುಳುಗಿ ತೊಂದರೆಪಡುತ್ತಿರುವ ಆ ವರ್ಣಗಳವರಿಗೆ ಇದು ಆ ಭವಸಾಗರವನ್ನು ದಾಟಿಸುವ ಶ್ರೇಷ್ಠವಾದ ನೌಕಾ ಸದೃಶವಾಗಿದೆ.

೫೮. ಹದಿನೆಂಟು ಪುರಾಣಗಳನ್ನೂ, ಎಂಟು ವ್ಯಾಕರಣಗಳನ್ನೂ ಅರಿತು ಕೊಂಡೇ ಸತ್ಯವತೀ ಪುತ್ರರಾದ ಈ ವ್ಯಾಸರು ಭಾರತ ಸಂಹಿತೆಯನ್ನು ರಚಿಸಿದರು.

ಯಾಂ ಶ್ರುತ್ವಾ ಪುರುಷೋ ರಾಜನ್ ಮುಚ್ಯತೇ ಬ್ರಹ್ಮಹತ್ಯಯಾ ।
ಪ್ರಥಮಂ ಪ್ರೋಚ್ಯತೇ ಬ್ರಾಹ್ಮಂ ದ್ವಿತೀಯಂ ಚೈಂದ್ರಮುಚ್ಯತೇ ॥ ೫೯ ॥

ಯಾಮ್ಯಂ ಪ್ರೋಕ್ತಂ ತತೋ ರೌದ್ರಂ ವಾಯವ್ಯಂ ವಾರುಣಂ ತಥಾ ।
ಸಾವಿತ್ರಂ ಚ ತಥಾ ಪ್ರೋಕ್ತಂ ಅಷ್ಟಮಂ ವೈಷ್ಣ ತಥಾ ॥ ೬೦ ॥

ಏತಾನಿ ವ್ಯಾಕರಣಾನಿ ಪುರಾಣಾನಿ ನಿಬೋಧ ಮೇ ।
ಬ್ರಾಹ್ಮಂ ಪಾದ್ಮಂ ವೈಷ್ಣವಂ ಚ ಶೈವಂ ಭಾಗವತಂ ತಥಾ ॥ ೬೧ ॥

ತಥಾನ್ಯನ್ನಾರದೀಯಂ ಚ ಮಾರ್ಕಂಡೇಯಂ ಚ ಸಪ್ತಮಂ ।
ಆಗ್ನೇಯಮಷ್ಟಮಂ ವೀರ ಭವಿಷ್ಯಂ ನವಮಂ ಸ್ಮೃತಂ ॥ ೬೨ ॥

ದಶಮಂ ಬ್ರಹ್ಮವೈವರ್ತಂ ಲೈಂಗಮೇಕಾದಶಂ ಸ್ಮೃತಂ ।
ವಾರಾಹಂ ದ್ವಾದಶಂ ಪ್ರೋಕ್ತಂ ಸ್ಕಾಂದಂ ಚೈವ ತ್ರಯೋದಶಂ ॥ ೬೩ ॥

---

೫೯-೬೦. ಈ ಭಾರತ ಸಂಹಿತೆಯನ್ನು ಕೇಳಿದವನು ಬ್ರಹ್ಮಹತ್ಯೆಯಿಂದ ಮುಕ್ತನಾಗುತ್ತಾನೆ. ಒಂದನೆಯದು ಬ್ರಾಹ್ಮ, ಎರಡನೆಯದು ಐಂದ್ರ, ಮೂರನೆಯದು ಯಾಮ್ಯ, ನಾಲ್ಕನೆಯದು ರೌದ್ರ, ಐದನೆಯದು ವಾಯವ್ಯ, ಆರನೆಯದು ವಾರುಣ, ಏಳನೆಯದು ಸಾವಿತ್ರ, ಎಂಟನೆಯದು ವೈಷ್ಣವ, ಇವೇ ಎಂಟು ವ್ಯಾಕರಣಗಳು. ಇನ್ನು ಪುರಾಣಗಳನ್ನು ಹೇಳುವೆನು ಕೇಳು.

೬೧-೬೪. ಎಲೈ ಕುರುವಂಶ ಶ್ರೇಷ್ಠನಾದ ಪ್ರಭುವೇ! ಒಂದನೆಯದು ಬ್ರಾಹ್ಮ, ಎರಡನೆಯದು ಪದ್ಮ, ಮೂರನೆಯದು ವಿಷ್ಣು, ನಾಲ್ಕನೆಯದು ಶೈವ, ಐದನೆಯದು ಭಾಗವತ, ಆರನೆಯದು ನಾರದೀಯ, ಏಳನೆಯದು ಮಾರ್ಕಂಡೇಯ, ಎಂಟನೆಯದು ಆಗ್ನೇಯ, ಒಂಭತ್ತನೆಯದು ಭವಿಷ್ಯ, ಹತ್ತನೆಯದು ಬ್ರಹ್ಮವೈವರ್ತ, ಹನ್ನೊಂದನೆಯದು ಲೈಂಗ, ಹನ್ನೆರಡನೆಯದು ವಾರಾಹ, ಹದಿಮೂರನೆಯದು ಸ್ಕಾಂದ, ಹದಿನಾಲ್ಕನೆಯದು ವಾಮನ, ಹದಿನೈದನೆಯದು ಕೂರ್ಮ, ಹದಿನಾರನೆಯದು ಮಾತ್ಸ್ಯ, ಹದಿನೇಳನೆಯದು ಗಾರುಡ, ಹದಿನೆಂಟನೆಯದು

ಚತುರ್ದಶಂ ವಾಮನಂ ಚ ಕೌರ್ಮಂ ಪಂಚದಶಂ ಸ್ಮೃತಂ ।
ಮಾತ್ಸ್ಯಂ ಚ ಗಾರುಡಂ ಚೈವ ಬ್ರಹ್ಮಾಂಡಂ ಚ ತತಃ ಪರಂ ॥ ೬೪ ॥

ಏತಾನಿ ಕುರು ಶಾರ್ದೂಲ ಧರ್ಮ ಶಾಸ್ತ್ರಾಣಿ ಪಂಡಿತೈಃ ।
ಸಾಧಾರಣಾನಿ ಪ್ರೋಕ್ತಾನಿ ವರ್ಣಾನಾಂ ಶ್ರೇಯಸೇ ತದಾ ॥ ೬೫ ॥

ಚತುರ್ಣಾಮಿಹ ರಾಜೇಂದ್ರ ಶ್ರೋತುಮರ್ಹಾಣಿ ಸುವ್ರತ ।
ಕಿಮಿಚ್ಛಸಿ ಮಹಾಬಾಹೋ ಶ್ರೋತುಮೇಷಾಂ ನೃಪೋತ್ತಮ ॥ ೬೬ ॥

॥ ಶತಾನೀಕ ಉವಾಚ ॥

ಭಾರತಂ ತು ಶ್ರುತಂ ವಿಪ್ರ ತಾತಸ್ಯಾಂಕಗತೇನ ತು ।
ರಾಮಸ್ಯ ಚರಿತಂ ಚಾಪಿ ಶ್ರುತಂ ಬ್ರಹ್ಮನ್ ಸಮಂತತಃ ॥ ೬೭ ॥

ಪುರಾಣಾನಿ ಚ ವಿಪ್ರೇಂದ್ರ ಭವಿಷ್ಯಂ ನ ತು ಸುವ್ರತ ।
ಪುರಾಣಂ ವದ ವಿಪ್ರೇಂದ್ರ ಭವಿಷ್ಯಂ ಕೌತುಕಂ ಹಿ ನೋ ॥ ೬೮ ॥

---

ಬ್ರಹ್ಮಾಂಡ, ಇವೇ ಪುರಾಣಗಳ ಹೆಸರುಗಳು, ಇವನ್ನೇ ಪಂಡಿತರು ಧರ್ಮಶಾಸ್ತ್ರಗಳೆಂದು ವ್ಯವಹರಿಸುವರು.

೬೫-೬೬. "ಸುವ್ರತನಾದ ಎಲೈ ರಾಜಶ್ರೇಷ್ಠನೇ! ಎಲ್ಲ ವರ್ಣಗಳವರ ಶ್ರೇಯಸ್ಸಿಗೂ ಇವು ಸಾಧಾರಣವೆನಿಸುವುವು. ನಾಲ್ಕನೆಯ ವರ್ಣದವರು ಮುಖ್ಯವಾಗಿ ಕೇಳಲು -ಇದು ಅರ್ಹವಾದದ್ದು. ವೀರಾಗ್ರಣಿಯೇ! ಇವನ್ನು ಕೇಳಲು ನಿನಗೆ ಅಪೇಕ್ಷೆಯುಂಟೇ" ಎಂದು ಕೇಳಿದನು.

೬೭ ಆಗ ಶತಾನೀಕ ರಾಜನು "ಅಯ್ಯಾ ದ್ವಿಜಶ್ರೇಷ್ಠನೇ! ಚಿಕ್ಕವನಾಗಿದ್ದಾಗ ನಮ್ಮ ತಂದೆಯ ತೊಡೆಯಮೇಲೆ ಕುಳಿತುಕೊಂಡೇ ಭಾರತವನ್ನು ಕೇಳಿದೆನು. ರಾಮಾಯಣವನ್ನೂ ಸಹ ವಿಶದವಾಗಿ ಕೇಳಿದ್ದೇನೆ.

೬೮. ಅಯ್ಯಾ ಇತರ ಪುರಾಣಗಳನ್ನೂ ಕೇಳಿದ್ದೇನೆ. ಆದರೆ ಭವಿಷ್ಯ ಪುರಾಣವನ್ನು ಮಾತ್ರ ಕೇಳಿಲ್ಲ. ಅದನ್ನು ಕೇಳಲು ಕುತೂಹಲವಿರುವುದರಿಂದ ಭವಿಷ್ಯ ಪುರಾಣವನ್ನು ಕೃಪೆಮಾಡಿ ಹೇಳಬೇಕು" ಎನ್ನಲು,

॥ ಸುಮಂತುರುವಾಚ ॥

ಸಾಧು ಸಾಧು ಮಹಾಬಾಹೋ ಸಾಧು ಪೃಷ್ಟೋಽಸ್ಮಿ ಮಾನದ ।
ಶೃಣು ಮೇ ವದತೋ ರಾಜನ್ ಪುರಾಣಂ ನವಮಂ ಮಹತ್ ॥ ೬೯ ॥

ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ಮಾನವೋ ನೃಪ ।
ಅಶ್ವಮೇಧಫಲಂ ಪ್ರಾಪ್ಯ ಗಚ್ಛೇದ್ಭಾನೌ ನ ಸಂಶಯಃ ॥ ೭೦ ॥

ಇದಂ ತು ಬ್ರಹ್ಮಣಾ ಪ್ರೋಕ್ತಂ ಧರ್ಮಶಾಸ್ತ್ರಮನುತ್ತಮಂ ।
ವಿದುಷಾ ಬ್ರಾಹ್ಮಣೇನೇದಮಧ್ಯೇತವ್ಯಂ ಪ್ರಯತ್ನತಃ ॥ ೭೧ ॥

ಶಿಷ್ಯೇಭ್ಯಶ್ಚೈವ ವಕ್ತವ್ಯಂ ಚಾತುರ್ವರ್ಣ್ಯೇಭ್ಯ ಏವ ಹಿ ।
ಅಧ್ಯೇತವ್ಯಂ ನ ಚಾನ್ಯೇನ ಬ್ರಾಹ್ಮಣಂ ಕ್ಷತ್ರಿಯಂ ವಿನಾ ॥ ೭೨ ॥

---

೬೯. ಆಗ ಸುಮಂತು ಮುನಿಯು " ಅಯ್ಯಾ ಗೌರವವನ್ನರಿತ ವೀರಕ್ಷತ್ರಿಯನೇ ! ನಿನ್ನ ಮಾತು ಯುಕ್ತವಾಗಿದೆ. ಸಮಂಜಸವಾಗಿಯೇ ಕೇಳಿದ್ದೀಯೆ, ಪುರಾಣಗಳಲ್ಲಿ ಒಂಭತ್ತನೆಯದಾದ ಭವಿಷ್ಯಮಹಾಪುರಾಣವನ್ನು ಹೇಳುವೆನು ಕೇಳು.

೭೦. ಅಯ್ಯಾ ಪ್ರಭುವರ್ಯನೇ ! ಇದನ್ನು ಕೇಳಿದರೆ ಮಾನವನ ಸಮಸ್ತ ಪಾಪಗಳೂ ಪರಿಹಾರವಾಗುವುವಲ್ಲದೆ ಆತನು ಅಶ್ವಮೇಧಯಜ್ಞಮಾಡಿದ ಫಲವನ್ನು ಪಡೆದು ಸೂರ್ಯಮಂಡಲವನ್ನು ಸೇರುತ್ತಾನೆಂಬುದರಲ್ಲಿ ಸಂದೇಹವಿಲ್ಲ.

೭೧. ಸಾಕ್ಷಾತ್ ಬ್ರಹ್ಮನಿಂದ ನಿರೂಪಿತವಾಗಿ ಸರ್ವಶ್ರೇಷ್ಠವೆನಿಸಿದ ಈ ಧರ್ಮಶಾಸ್ತ್ರವನ್ನು ವಿದ್ವಾಂಸನಾದ ಬ್ರಾಹ್ಮಣನು ಪ್ರಯತ್ನಪೂರ್ವಕವಾಗಿ ಯಾದರೂ ಅಧ್ಯಯನ ಮಾಡಬೇಕು.

೭೨. ನಾಲ್ಕು ವರ್ಣಗಳವರಾದ ಶಿಷ್ಯರಿಗೂ ಇದನ್ನು ತಿಳಿಸಬಹುದು. ಆದರೆ ಬ್ರಾಹ್ಮಣರು, ಕ್ಷತ್ರಿಯರು ಹೊರತು ಇತರರು ಇದನ್ನು ಕ್ರಮವಾಗಿ ಅಧ್ಯಯನ ಮಾಡತಕ್ಕದ್ದಲ್ಲ. ಶೂದ್ರನು ಕಿವಿಯಿಂದ ಕೇಳಬಹುದೇ ವಿನಾ ಒಂದು ಕಾಲಕ್ಕೂ ಅಧ್ಯಯನಮಾಡಬಾರದು.

**ಶ್ರೋತವ್ಯಮೇವ ಶೂದ್ರೇಣ ನಾಧ್ಯೇತವ್ಯಂ ಕದಾಚನ ।**
**ದೇವಾರ್ಚಾಂ ಪುರತಃ ಕೃತ್ವಾ ಬ್ರಾಹ್ಮಣೈಶ್ಚ ನೃಪೋತ್ತಮ ॥**
**ಶ್ರೋತವ್ಯಮೇವ ಶೂದ್ರೈಶ್ಚ ತಥಾನ್ಯೈಶ್ಚ ದ್ವಿಜಾತಿಭಿಃ ॥ ೭೩ ॥**

**ಶ್ರೌತಂ ಸ್ಮಾರ್ತಂ ಹಿ ವೈ ಧರ್ಮಂ ಪ್ರೋಕ್ತಮಸ್ಮಿನ್ ನೃಪೋತ್ತಮ ।**
**ತಸ್ಮಾಚ್ಛೂದ್ರೈರ್ವಿನಾ ವಿಪ್ರಾತ್ ನ ಶ್ರೋತವ್ಯಂ ಕಥಂಚನ ॥ ೭೪ ॥**

**ಇದಂ ಶಾಸ್ತ್ರಮಧೀಯಾನೋ ಬ್ರಾಹ್ಮಣಸ್ಸಂಶಿತವ್ರತಃ ।**
**ಮನೋವಾಗ್ದೇಹಜೈರ್ನಿತ್ಯಂ ಕರ್ಮದೋಷೈರ್ನ ಲಿಪ್ಯತೆ ॥ ೭೫ ॥**

**ಶೃಣ್ವಂತಿ ಚಾಪಿ ಯೇ ರಾಜನ್ ಭಕ್ತ್ಯಾ ವೈ ಬ್ರಾಹ್ಮಣಾದಯಃ ।**
**ಮುಚ್ಯಂತೇ ಪಾತಕೈಸ್ಸರ್ವೈಃ ಗಚ್ಛಂತಿ ಚ ದಿವಂ ಪ್ರಭೋ ॥ ೭೬ ॥**

**ಶ್ರಾವಯೇಚ್ಚಾಪಿ ಯೋ ವಿಪ್ರಃ ಸರ್ವಾನ್ ವರ್ಣಾನ್ ನೃಪೋತ್ತಮ ।**
**ಸ ಗುರುಃ ಪ್ರೋಚ್ಯತೇ ತಾತ ವರ್ಣನಾಮಿಹ ಸರ್ವಶಃ ॥ ೭೭ ॥**

---

೭೩. ಅಯ್ಯಾ ಪ್ರಭುವರ್ಯನೇ ! ದೇವತಾರ್ಚನೆಮಾಡಿಸಿ ಆಮೇಲೆ ಬ್ರಾಹ್ಮಣ ಮುಖದಿಂದ ಇತರ ದ್ವಿಜವರ್ಗಗಳವರೂ ಶೂದ್ರರೂ ಕೇಳತಕ್ಕದ್ದು ವಿಹಿತವು.

೭೪. ಎಲೈ ರಾಜೇಂದ್ರನೇ ! ಇದರಲ್ಲಿ ಶ್ರೌತ ಮತ್ತು ಸ್ಮಾರ್ತ ಎಂಬ ಎರಡು ಧರ್ಮಗಳು ಉಕ್ತವಾಗಿವೆ. ಆದ್ದರಿಂದ ಇದನ್ನು ಬ್ರಾಹ್ಮಣರಿಂದ ಕೇಳಬೇಕೇ ವಿನಾ ಒಂದುಕಾಲಕ್ಕೂ ಇತರರಿಂದ ಕೇಳತಕ್ಕದ್ದಲ್ಲ.

೭೫. ಯಾವ ಬ್ರಾಹ್ಮಣನು ಈ ಶಾಸ್ತ್ರವನ್ನು ನಿಯಮಬದ್ಧನಾಗಿ ಅಧ್ಯಯನ ಮಾಡುವನೋ ಅವನಿಗೆ ಮನೋವಾಕ್ಕಾಯಗಳಿಂದುಂಟಾಗುವ ಕರ್ಮಗಳ ದೋಷ ಗಳು ಯಾವುವೂ ಸೋಂಕುವುದಿಲ್ಲ.

೭೬. ಎಲೈ ರಾಜನೇ ! ಬ್ರಾಹ್ಮಣರೇ ಮೊದಲಾದ ಯಾರೇ ಆಗಲಿ ಇದನ್ನು ಭಕ್ತಿಯಿಂದ ಕೇಳಿದರೆ ಅವರಿಗೆ ಸಮಸ್ತ ಪಾಪಗಳೂ ಪರಿಹಾರವಾಗಿ ಸ್ವರ್ಗ ಪ್ರಾಪ್ತಿ ಯಾಗುತ್ತದೆ.

೭೭. ಅಯ್ಯಾ ಪ್ರಭುವರ್ಯನೇ! ಬ್ರಾಹ್ಮಣನಾದವನು ಇತರ ವರ್ಣಗಳವರಿಗೆ ಇದನ್ನು ಶ್ರವಣಮಾಡಿಸಬಹುದು. ಆದುದರಿಂದಲೇ " ವರ್ಣಾನಾಂ ಬ್ರಾಹ್ಮಣೋ

**ಸ ಪೂಜ್ಯಸ್ಸರ್ವಕಾಲೇಷು ಸರ್ವೈರ್ವರ್ಣೈರ್ನರಾಧಿಪ ।**
**ಪೃಥಿವೀಂ ಚ ತಥೈವೇಮಾಂ ಕೃತ್ಸ್ನಾಮೇಕೋಪಿ ಸೋಽರ್ಹತಿ ॥ ೭೮ ॥**

**ಇದಂ ಸ್ವಸ್ತ್ಯಯನಂ ಶ್ರೇಷ್ಠಂ ಇದಂ ಬುದ್ಧಿವಿವರ್ಧನಂ ।**
**ಇದಂ ಯಶಸ್ಯಂ ಸತತಂ ಇದಂ ನಿಶ್ರೇಯಸಂ ಪರಂ ॥ ೭೯ ॥**

**ಅಸ್ಮಿನ್ ಧರ್ಮೋಽಖಿಲೇನೋಕ್ತೋ ಗುಣದೋಷೌ ಚ ಕರ್ಮಣಾಂ ।**
**ಚತುರ್ಣಾಮಪಿ ವರ್ಣಾನಾಮಾಚಾರಶ್ಚಾಪಿ ಶಾಶ್ವತಃ ॥ ೮೦ ॥**

**ಆಚಾರಃ ಪ್ರಥಮೋಧರ್ಮಃ ಶ್ರುತ್ಯುಕ್ತಸ್ಯ ನರೋತ್ತಮ ।**
**ತಸ್ಮಾದಸ್ಮಿನ್ ಸಮಾಯುಕ್ತೋ ನಿತ್ಯಂ ಸ್ಯಾದಾತ್ಮವಾನ್ ದ್ವಿಜಃ ॥ ೮೧ ॥**

---

ಗುರುಃ" ಎಂಬ ಉಕ್ತಿಯಂತೆ ಮಿಕ್ಕ ಎಲ್ಲ ವರ್ಣದವರಿಗೂ ಬ್ರಾಹ್ಮಣನು ಗುರುವು ಎಂಬುದು ಸರ್ವಕಾಲಕ್ಕೂ ಅನ್ವಯಿಸುವುದು

೭೮. ಅಯ್ಯಾ ನರಪತಿಯೇ ! ಅಂತಹ ಬ್ರಾಹ್ಮಣನು ಎಲ್ಲಾಕಾಲದಲ್ಲೂ ಎಲ್ಲಾ ವರ್ಣದವರಿಂದಲೂ, ಪೂಜಿಸಲು ಅರ್ಹನು. ಈ ಸಮಸ್ತ ಭೂಮಂಡಲ ಪ್ರತಿಗ್ರಹಕ್ಕೂ ಅವನೊಬ್ಬನೇ ಅರ್ಹನು.

೭೯. ಈರೀತಿ ಪೂಜ್ಯರ ಮುಖದಿಂದ ಶ್ರವಣಮಾಡುವುದು ಸರ್ವೋತ್ತಮವಾದ ಮಂಗಳಾಶಂಸನವಾಗಿಯೂ, ಬುದ್ಧಿಶಕ್ತಿಯನ್ನು ಹೆಚ್ಚಿಸುವುದಾಗಿಯೂ, ಸರ್ವದಾ ಯಶಸ್ಕರವಾದುದಾಗಿಯೂ, ಶ್ರೇಷ್ಠವಾದ ಮೋಕ್ಷವನ್ನು ಕೊಡುವುದಾಗಿಯೂ ಇದೆ.

೮೦. ಈ ಪುರಾಣದಲ್ಲಿ ಸಮಷ್ಟಿಯಿಂದ ಆಚರಿಸುವ ಧರ್ಮಪ್ರಕಾರವೂ, ಯಾವ ಕರ್ಮಾಚರಣೆಯಲ್ಲಿ ಯಾವ ಗುಣಗಳಿವೆ, ಯಾವರೀತಿ ಮಾಡಿದರೆ ಏನು ದೋಷ ಎಂಬ ವಿಚಾರವೂ, ನಾಲ್ಕು ವರ್ಣಗಳವರು ಯಾವಾಗಲೂ ನಡೆಯಿಸುವ ಆಚಾರ ವ್ಯವಹಾರಾದಿಗಳೂ ಉಕ್ತವಾಗಿವೆ.

೮೧. ಎಲೈ ಮಾನವಶ್ರೇಷ್ಠನೇ ! ವೇದದಲ್ಲಿ ಹೇಳಿರುವಂತೆ ನಡೆದುಕೊಳ್ಳುವುದು ಮುಖ್ಯವಾದುದು. ಆದ್ದರಿಂದ ಬುದ್ಧಿಶಾಲಿಯಾದ ಬ್ರಾಹ್ಮಣನು ಯಾವಾಗಲೂ ವೇದೋಕ್ತವಾದ ಆಚಾರಗಳಲ್ಲಿ ನಿರತನಾಗಿರಬೇಕು.

ಆಚಾರಾದ್ವಿಚ್ಯುತೋ ವಿಪ್ರೋ ನ ವೇದಫಲಮಶ್ನುತೇ ।
ಆಚಾರೇಣ ಚ ಸಂಯುಕ್ತಃ ಸಂಪೂರ್ಣಫಲಭಾಕ್ ಸ್ಮೃತಃ ॥ ೮೨ ॥

ಏವಮಾಚಾರತೋ ದೃಷ್ಟ್ವಾ ಧರ್ಮಸ್ಯ ಮುನಯೋ ಗತಿಂ ।
ಸರ್ವಸ್ಯ ತಪಸೋಮೂಲಮಾಚಾರಂ ಜಗೃಹುಃ ಪರಂ ॥ ೮೩ ॥

ಅನ್ಯೇ ಚ ಮಾನವಾ ರಾಜನ್ ಆಚಾರಂ ಸಂಶ್ರಿತಾಃ ಸದಾ ।
ಏವಮಸ್ಮಿನ್ ಪುರಾಣೇ ತು ಆಚಾರಸ್ಯ ತು ಕೀರ್ತನಂ ॥ ೮೪ ॥

ವೃತ್ತಾಂತಾನಿ ಚ ರಾಜೇಂದ್ರ ತಥಾಚೋಕ್ತಾನಿ ಪಂಡಿತೈಃ ।
ತ್ರಿಲೋಕ್ಯಾಸ್ತು ಸಮುತ್ಪತ್ತಿಃ ಸಂಸ್ಕಾರವಿಧಿರುತ್ತಮಃ ।
ಶ್ರವಣಂ ಚೇತಿಹಾಸಸ್ಯ ವಿಧಾನಂ ಕಥ್ಯತೇ ನೃಪ ॥ ೮೫ ॥

---

೮೨. ಆಚಾರಹೀನನಾದ ಬ್ರಾಹ್ಮಣನಿಗೆ ವೇದದಲ್ಲಿ ಹೇಳಿರುವ ಫಲಗಳು ಲಭಿಸುವುದಿಲ್ಲ. ಆಚಾರವಂತನು ವೇದೋಕ್ತವಾದ ಸಂಪೂರ್ಣ ಫಲವನ್ನು ಪಡೆಯುವನು.

೮೩. ಈರೀತಿ ಧರ್ಮಪ್ರಾಪ್ತಿಯು ಆಚಾರಶೀಲತೆಯಿಂದುಂಟಾಗುತ್ತದೆಯೆಂಬುದನ್ನು ಮುನಿಗಳು ನಿಶ್ಚಯಿಸಿ, ಸಮಸ್ತ ತಪಸ್ಸುಗಳಿಗೂ ಆಚಾರಶೀಲತೆಯನ್ನೇ ಮೂಲಾಧಾರವೆಂದು ಗಣಿಸಿದ್ದಾರೆ

೮೪. ಎಲೈ ರಾಜನೇ! ಇತರ ಮನುಷ್ಯರೂ ಯಾವಾಗಲೂ ಆಚಾರವನ್ನು ಬಿಡದೆ ನಡೆಯಿಸುವರು. ಹೀಗೆ ಈ ಪುರಾಣದಲ್ಲಿ ಆಚಾರಶೀಲತೆಯ ಮಹಿಮೆಯನ್ನು ಪ್ರಶಂಸಿಸಲಾಗಿದೆ.

೮೫. ಎಲೈ ಪ್ರಭುವರ್ಯನೇ! ಕೇಳು, ಪಂಡಿತರಾದವರು ನಿರೂಪಣಮಾಡಿರುವ ಅನೇಕ ವೃತ್ತಾಂತಗಳು, ಮೂರು ಲೋಕಗಳ ಉತ್ಪತ್ತಿಕ್ರಮ, ಗರ್ಭಾಧಾನಾದಿ ಸಂಸ್ಕಾರಗಳ ಶ್ರೇಷ್ಠವಾದ ವಿಧಾನ, ಪುರಾಣ ಇತಿಹಾಸಗಳನ್ನು ಕೇಳಬೇಕಾದ ಕ್ರಮ, ಇವುಗಳೆಲ್ಲವೂ ಇಲ್ಲಿ ಹೇಳಲ್ಪಡುತ್ತವೆ.

ತಥಾಸ್ಮಿನ್ ಕಥ್ಯತೇ ರಾಜನ್ ಮಾಹಾತ್ಮ್ಯಂ ವಾಚಕಸ್ಯ ತು ||
ವ್ರತಚರ್ಯಾಶ್ರಮಾಚಾರಾಃ ಸ್ನಾತಕಸ್ಯ ಪರೋವಿಧಿಃ || ೮೬ ||

ದಾರಾದಿಗಮನಂಚೈವ ವಿವಾಹಾನಾಂ ಚ ಲಕ್ಷಣಂ ।
ಪುಂಸಾಂ ಚ ಲಕ್ಷಣಂ ರಾಜನ್ ಯೋಷಿತಾಂ ಚಾತ್ರ ಕಥ್ಯತೇ || ೮೭ ||

ಮಹಾಯಜ್ಞವಿಧಾನಂ ಚ ಶಾಸ್ತ್ರಕಲ್ಪಂ ಚ ಶಾಶ್ವತಂ ।
ಪೃಥಿವ್ಯಾ ಲಕ್ಷಣಂ ತಾತ ದೇವಾರ್ಚಾಯಾಃ ಸುಲಕ್ಷಣಂ || ೮೮ ||

ವೃತ್ತೀನಾಂ ಲಕ್ಷಣಂಚೈವ ಸ್ನಾತಕಸ್ಯ ವ್ರತಾನಿ ಚ ।
ಭಕ್ಷ್ಯಾಭಕ್ಷ್ಯಂ ಚ ಶೌಚಂ ಚ ದ್ರವ್ಯಾಣಾಂ ಶುದ್ಧಿರೇವ ಚ || ೮೯ ||

---

೮೬. ಅಲ್ಲದೆ ಇದರಲ್ಲಿ ವಾಚಕನ ಎಂದರೆ ಪುರಾಣ ಹೇಳುವವನ ಮಾಹಾತ್ಮ್ಯೆಯನ್ನೂ ನಿರೂಪಣ ಮಾಡಲಾಗುವುದು. ಬ್ರಹ್ಮಚರ್ಯಾದಿ ಆಶ್ರಮಗಳಲ್ಲಿ ನಡೆಯಿಸಬೇಕೆಂದು ಉಕ್ತಗಳಾದ ಆಚಾರಗಳು, ಸ್ನಾತಕನ ಮುಖ್ಯ ಕರ್ತವ್ಯಗಳು, ಮುಂತಾದುವನ್ನೂ ಹೇಳಿದೆ.

೮೭. ಓ ಪ್ರಭುವರ್ಯನೇ ! ಪತ್ನಿಯನ್ನು ಪಡೆಯುವ ವಿವಾಹವಿಧಿ, ಬಗೆಬಗೆಯ ವಿವಾಹಾದಿಗಳ ಲಕ್ಷಣಗಳು. ಈ ಸಂದರ್ಭಕ್ಕೆ ಬೇಕಾಗುವ ಪುರುಷಲಕ್ಷಣ, ಸ್ತ್ರೀಲಕ್ಷಣ, ಮೊದಲಾದುವನ್ನೆಲ್ಲಾ ಇಲ್ಲಿ ತಿಳಿಸಿದೆ.

೮೮. ಅಲ್ಲದೆ ವಿವಾಹವಾದಮೇಲೆ ಮಾಡಬೇಕಾದ ಪಂಚ ಮಹಾಯಜ್ಞಗಳು, ಶಾಶ್ವತವಾಗಿ ಅನುಸರಿಸಬೇಕಾದ ಶಾಸ್ತ್ರೋಕ್ತ ಕಲ್ಪಗಳು, ಇದಕ್ಕೆ ಬೇಕಾಗುವ ಭೂಮಿಯ ಲಕ್ಷಣ, ದೇವತಾರ್ಚನೆಯನ್ನು ಮಾಡುವುದರ ಸುಲಕ್ಷಣ, ಇವುಗಳನ್ನೆಲ್ಲಾ ವಿವರಿಸಿದೆ.

೮೯–೯೦. ಇವಲ್ಲದೆ ಉಂಛಾದಿ ವೃತ್ತಿಗಳ ಎಂದರೆ ಜೀವನಕ್ಕಾಗಿ ಅನುಸರಿಸುವ ಕೆಲಸಗಳ ಲಕ್ಷಣಗಳನ್ನೂ, ಸ್ನಾತಕನು ಆಚರಿಸಬೇಕಾದ ನಿಯಮಗಳನ್ನೂ ಪ್ರಾಣಿಗಳು ತಿನ್ನಬಹುದಾದುವು ತಿನ್ನಲು ಅರ್ಹವಲ್ಲದುವು ಇವನ್ನೂ, ದ್ರವ್ಯಪರಿಶುದ್ಧಿ ವಿಚಾರವನ್ನೂ, ಸ್ತ್ರೀಯರು ಅನುಸರಿಸಬೇಕಾದ ನಡವಳಿಕೆಯನ್ನೂ, ತಪಸ್ಸಿನ

**ಸ್ತ್ರೀಧರ್ಮಯೋಗಸ್ತ್ವಾಪಸ್ಯಂ ಮೋಕ್ಷಃ ಸಂನ್ಯಾಸ ಏವ ಚ ।**
**ರಾಜ್ಞಾಶ್ಚ ಧರ್ಮೋ ಹ್ಯಖಿಲಃ ಕಾರ್ಯ್ಯಾಣಾಂ ಚ ವಿನಿರ್ಣಯಃ ॥ ೯೦ ॥**

**ಮಾಹಾತ್ಮ್ಯಂ ಸವಿತುಶ್ಚಾತ್ರ ತೀರ್ಥಾನಾಂ ಚ ವಿಶಾಂಪತೇ ।**
**ನಾರಾಯಣಸ್ಯ ಮಾಹಾತ್ಮ್ಯಂ ತಥಾ ರುದ್ರಸ್ಯ ಕಥ್ಯತೇ ॥ ೯೧ ॥**

**ಮಹಾಭಾಗ್ಯಂ ಚ ವಿಪ್ರಾಣಾಂ ಮಾಹಾತ್ಮ್ಯಂ ಪುಸ್ತಕಸ್ಯ ಚ ।**
**ದುರ್ಗಾದೇವ್ಯಾಸ್ತಥಾ ಚೋಕ್ತಂ ಸತ್ಯಸ್ಯ ಚ ಮಹಾಮತೇ ॥ ೯೨ ॥**

**ಸಂಕ್ಷಿಪ್ತಂ ಸಂವಿಧಾನಂ ಚ ಧರ್ಮಂ ಸ್ತ್ರೀಪುಂಸಯೋರಪಿ ।**
**ವಿಭಾಗಂ ಧರ್ಮದ್ಯೂತಂ ಚ ಕಥಕಾನಾಂ ಚ ಶೋಧನಂ ॥ ೯೩ ॥**

**ವೈಶ್ಯಶೂದ್ರೋಪಚಾರಂ ಚ ಸಂಕೀರ್ಣಾನಾಂ ಚ ಸಂಭವಂ ।**
**ಆಪದ್ಧರ್ಮಂ ಚ ವರ್ಣಾನಾಂ ಪ್ರಾಯಶ್ಚಿತ್ತವಿಧಿಂ ತಥಾ ॥ ೯೪ ॥**

---

ಸ್ವರೂಪವನ್ನೂ, ಮೋಕ್ಷಪ್ರಾಪ್ತಿಕ್ರಮವನ್ನೂ, ಸಂನ್ಯಾಸ ಕ್ರಮವನ್ನೂ, ಸಕಲವಿಧವಾದ ರಾಜಧರ್ಮಗಳನ್ನೂ, ಕರ್ತವ್ಯ ಕಾರ್ಯಗಳ ನಿರ್ಣಯವನ್ನೂ, ಈ ಪುರಾಣದಲ್ಲಿ ವಿವರಿಸಿದೆ.

೯೧-೯೨. ಮಹಾ ಬುದ್ಧಿಶಾಲಿಯಾದ ಮಹಾರಾಜನೇ! ಈ ಪುರಾಣದಲ್ಲಿ ಸೂರ್ಯಮಾಹಾತ್ಮ್ಯ, ಪುಣ್ಯತೀರ್ಥ ಮಾಹಾತ್ಮ್ಯ, ನಾರಾಯಣನಮಹಿಮೆ, ಶಿವನ ಮಹಿಮೆ, ಇವನ್ನೆಲ್ಲಾ ಪರಿಶೀಲಿಸುವ ಬ್ರಾಹ್ಮಣರಮಹಿಮೆ, ಪುರಾಣ ಗ್ರಂಥಗಳ ಮಾಹಾತ್ಮ್ಯೆ, ದುರ್ಗಾಮಾಹಾತ್ಮ್ಯ, ಯಥಾರ್ಥವಾದಿತ್ವದ (ಸತ್ಯ) ಮಾಹಾತ್ಮ್ಯೆ, ಇವುಗಳೆಲ್ಲಾ ನಿರೂಪಿತಗಳಾಗಿವೆ. (ಇಲ್ಲಿಂದ ಮುಂದೆ ಉಕ್ತವಾಗುವ ವಿಷಯಗಳು ರಾಜಧರ್ಮಕ್ಕೆ ಸಂಬಂಧಪಟ್ಟವುಗಳು.)

೯೩. ಸ್ತ್ರೀಯರ ಮತ್ತು ಪುರುಷರ ಸಂಕ್ಷೇಪಗಳಾದ ಧರ್ಮಾಚರಣೆಗಳು, ಸಹೋದರರ ದಾಯಭಾಗ ವಿಷಯಗಳು, ಪರರಿಗೆ ಬಾಧಕವಿಲ್ಲದ ಜೂಜುಗಳು, ವಾಙ್ಮೂಲವನ್ನು ಕೂಲಂಕಷವಾಗಿ ವಿಮರ್ಶಿಸುವ ಕ್ರಮ.

೯೪. ಪ್ರಭುಗಳು, ವೈಶ್ಯರ ಮತ್ತು ಶೂದ್ರರ ವಿಷಯದಲ್ಲಿ ನಡೆಯಬೇಕಾದ ವಿಧಾನ, ಸಂಕರ ಜಾತಿಯವರನ್ನು ವಿಮರ್ಶಿಸುವುದು. ಪ್ರತಿಯೊಂದು ವರ್ಣದವರೂ ನಡೆಸಬಹುದಾದ ಆಪದ್ಧರ್ಮಗಳನ್ನೂ, ಅಕಾರ್ಯಕ್ಕೆ ಪ್ರಾಯಶ್ಚಿತ್ತವನ್ನೂ ವಿಮರ್ಶಿಸುವ ಕ್ರಮ.

ಸಂಧ್ಯಾವಿಧಿಂ ಪ್ರೇತ ಶುದ್ಧಿಂ ಸ್ನಾನತರ್ಪಣಯೋರ್ವಿಧಿಂ ।
ವೈಶ್ವದೇವವಿಧಿಂ ಚಾಪಿ ತಥಾ ಭೋಜ್ಯವಿಧಿಂ ನೃಪ ॥ ೯೫ ॥

ಲಕ್ಷಣಂ ದಂತಕಾಷ್ಠಸ್ಯ ಚರಣವ್ಯೂಹಮುತ್ತಮಂ ।
ಸಂಸಾರಗಮನಂ ಚೈವ ತ್ರಿವಿಧಂ ಕರ್ಮಸಂಭವಂ ॥ ೯೬ ॥

ನೈಃಶ್ರೇಯಸಂ ಕರ್ಮಣಾಂ ಚ ಗುಣದೋಷಪರೀಕ್ಷಣಂ ।
ದಾನಾನಾಂ ಲಕ್ಷಣಂ ಪ್ರೋಕ್ತಂ ತಥಾ ಪಾತ್ರ ಪರೀಕ್ಷಣಂ ॥ ೯೭ ॥

ಪ್ರಸೂತಿಂ ಚಾಪಿ ಗರ್ಭಸ್ಯ ತಥಾ ಕರ್ಮಫಲಂ ನೃಪ ।
ಜಾತಿಧರ್ಮಾನ್ ಕುಲಧರ್ಮಾನ್ ವೇದಧರ್ಮಾಂಶ್ಚ ಪಾರ್ಥಿವ ॥ ೯೮ ॥

ವೈತಾನವ್ರತಿಕಾನಾಂ ಚ ತಥಾಸೌ ಪ್ರೋಕ್ತವಾನ್ ಪ್ರಭುಃ ।
ಬ್ರಹ್ಮಾ ಕುರುಕುಲಶ್ರೇಷ್ಠ ಶಂಕರಾಯ ಮಹಾತ್ಮನೇ ॥ ೯೯ ॥

---

೯೫-೯೬. ಸಂಧ್ಯಾಕಾಲಗಳಲ್ಲಿ ಮಾಡಬೇಕಾದ ಕರ್ಮಗಳು, ಲೋಕಾಂತರ ಗತರಾದಾಗಿನ ಶುದ್ಧಿವಿಚಾರಗಳು, ಸ್ನಾನ, ತರ್ಪಣಾದಿಗಳನ್ನಾಚರಿಸುವ ಕ್ರಮ, ವೈಶ್ವದೇವ ವಿಧಾನ, ಭೋಜನಮಾಡುವ ವಿಧಾನ, ಹಲ್ಲನ್ನುಜ್ಜುವ ಕಡ್ಡಿಗಳ ಲಕ್ಷಣ, ಪಾಪಪ್ರಕ್ಷಾಲನವಿಧಿ, ಸಂಚಿತ, ಪ್ರಾರಬ್ಧ, ಆಗಾಮಿಗಳೆಂಬ ಮೂರುವಿಧ ಕರ್ಮಗಳಿಗನುಸಾರವಾಗಿ ಜನನ ಮರಣಗಳು ಪ್ರಾಪ್ತವಾಗುವ ವಿಚಾರ.

೯೭. ಕರ್ಮಗಳ ಮುಕ್ತಿಸಾಧಕತ್ವ, ಗುಣಗಳನ್ನೂ ದೋಷಗಳನ್ನೂ ಪರೀಕ್ಷಿಸುವ ಕ್ರಮ, ದಾನಗಳ ಲಕ್ಷಣಗಳು, ದಾನಕ್ಕೆ ಯೋಗ್ಯವಾದ ಪಾತ್ರವನ್ನು ಪರೀಕ್ಷಿಸುವ ಕ್ರಮ ಇವೆಲ್ಲಾ ಉಕ್ತವಾಗಿವೆ.

೯೮. ಎಲೈ ರಾಜೇಂದ್ರನೇ ! ಗರ್ಭಪ್ರಸವವಿಧಾನ, ಪುಣ್ಯಪಾಪಕರ್ಮಗಳ ಫಲ, ಜಾತಿಧರ್ಮಗಳು, ಕುಲಧರ್ಮಗಳು, ವೇದಾಧ್ಯಯನ ಮಾಡಿದವನು ಆಚರಿಸಬೇಕಾದ ಧರ್ಮಗಳು, ಯಜ್ಞಮಾಡಬೇಕೆಂಬ ನಿಯಮಶಾಲಿಗಳು ಅನುಸರಿಸಬೇಕಾದ ಧರ್ಮಗಳು, ಇವುಗಳನ್ನೆಲ್ಲಾ ಇಲ್ಲಿ ವ್ಯಾಸರು ಹೇಳಿದ್ದಾರೆ.

೯೯-೧೦೦. ಎಲೈ ಕುರುವಂಶಶ್ರೇಷ್ಠನೇ! ಕೇಳು, ಇವುಗಳನ್ನೆಲ್ಲಾ ಬ್ರಹ್ಮನು ಮಹಾತ್ಮನಾದ ಈಶ್ವರನಿಗೆ ತಿಳಿಸಿದನು ಆ ಪರಮೇಶ್ವರನು ವಿಷ್ಣುವಿಗೆ ಹೇಳಿದನು. ಆ ವಿಷ್ಣುವು ನಾರದಮಹರ್ಷಿಗೆ ನಿರೂಪಿಸಿದನು.

**ಶಂಕರೇಣ ತಥಾ ವಿಷ್ಣೋಃ ಕಥಿತಂ ಕುರುನಂದನ ।**
**ವಿಷ್ಣುನಾಪಿ ಪುನಃ ಪ್ರೋಕ್ತಂ ನಾರದಾಯ ಮಹೀಪತೇ ॥ ೧೦೦ ॥**

**ನಾರದಾತ್ ಪ್ರಾಪ್ತವಾನ್ ಶಕ್ರಃ ಶಕ್ರಾದಪಿ ಪರಾಶರಃ ।**
**ಪರಾಶರಾತ್ತತೋ ವ್ಯಾಸೋ ವ್ಯಾಸಾದಪಿ ಮಯಾ ವಿಭೋ ॥ ೧೦೧ ॥**

**ಏವಂ ಪರಂಪರಾಪ್ರಾಪ್ತ ಪುರಾಣಮಿದಮುತ್ತಮಂ ।**
**ಶೃಣು ತ್ವಮಪಿ ರಾಜೇಂದ್ರ ಮತ್ಸಕಾಶಾತ್ಪರಂ ಹಿತಂ ॥ ೧೦೨ ॥**

**ಸರ್ವಾಣ್ಯೇವ ಪುರಾಣಾನಿ ಸಂಜ್ಞೇಯಾನಿ ನರರ್ಷಭ ।**
**ದ್ವಾದಶೈವ ಸಹಸ್ರಾಣಿ ಪ್ರೋಕ್ತಾನೀಹ ಮನೀಷಿಭಿಃ ॥ ೧೦೩ ॥**

**ಪುನರ್ವೃದ್ಧಿಂ ಗತಾನೀಹ ಆಖ್ಯಾನೈರ್ವಿವಿಧೈರ್ನೃಪ ।**
**ಯಥಾ ಸ್ಕಾಂದಂ ತಥಾಚೇದಂ ಭವಿಷ್ಯಂ ಕುರುನಂದನ ॥ ೧೦೪ ॥**

---

೧೦೧. ಅಯ್ಯಾ ಪ್ರಭುವರ್ಯನೇ ! ಅನಂತರ ನಾರದನಿಂದ ಇಂದ್ರನಿಗೂ, ಇಂದ್ರನಿಂದ ಪರಾಶರಮಹರ್ಷಿಗೂ, ಆ ಪರಾಶರರಿಂದ ಅವರ ಪುತ್ರರಾದ ವ್ಯಾಸರಿಗೂ, ಆ ವ್ಯಾಸರಿಂದ ನನಗೂ ಲಭ್ಯವಾಯಿತು.

೧೦೨. ಎಲೈ ರಾಜೇಂದ್ರನೇ ! ಹೀಗೆ ಪರಂಪರೆಯಾಗಿ ಬಂದುದಾಗಿ ಉತ್ತಮವೂ, ಹಿತಕರವೂ, ಮಹಾಶ್ರೇಷ್ಠವೂ ಆದ ಈ ಪುರಾಣವನ್ನು ನನ್ನಿಂದ ನೀನು ಕೇಳು.

೧೦೩. ಅಯ್ಯಾ ಪ್ರಭುವೇ ! ಪುರಾಣವೆಂಬ ಲೆಕ್ಕಕ್ಕೆ ಎಲ್ಲವೂ ಸೇರತಕ್ಕವೇ ಆದರೂ ಮಹನೀಯರಾದ ವಿದ್ವಾಂಸರು ಹನ್ನೆರಡು ಸಹಸ್ರ ಮಾತ್ರ ಲೆಕ್ಕಕ್ಕೆ ಬರತಕ್ಕ ಪುರಾಣಗಳು ಎಂದು ಹೇಳಿದಾರೆ.

೧೦೪. ಅಯ್ಯಾ ರಾಜನೇ ! ಮಾನವರಲ್ಲಿ ಬಳಕೆಯಲ್ಲಿರುವ ಬಗೆಬಗೆಯ ಕಥಾವಿಶೇಷಗಳು ಕಾಲಕ್ರಮದಲ್ಲಿ ಸೇರುತ್ತಿರುವುದರಿಂದ ಇವು ಇನ್ನೂ ಬೆಳೆದಿವೆ ಸ್ಕಾಂದಪುರಾಣವು ಹೇಗೆ ವಿಸ್ತಾರವಾಗಿದೆಯೋ ಹಾಗೆ ಈ ಭವಿಷ್ಯ ಮಹಾಪುರಾಣವೂ ವಿಸ್ತಾರವಾಗಿದೆ.

**ಸ್ಕಾಂದಂ ಶತಸಹಸ್ರಂ ತು ಲೋಕಾನಾಂ ಜ್ಞಾತಮೇವ ಹಿ ।**
**ಭವಿಷ್ಯಮೇತದೃಷಿಣಾ ಲಕ್ಷಾರ್ಧಂ ಸಂಖ್ಯಯಾ ಕೃತಂ ॥ ೧೦೫ ॥**

**ತಚ್ಛ್ರುತ್ವಾ ಪುರುಷೋ ಭಕ್ತ್ಯಾ ಇದಂ ಫಲಮವಾಪ್ನುಯಾತ್ ।**
**ಋದ್ಧಿ ವೃದ್ಧಿಸ್ತಥಾ ಶ್ರೀಶ್ಚ ಭವಂತಿ ತಸ್ಯ ನಿಶ್ಚಿತಂ ॥ ೧೦೬ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಕಥಾಪ್ರಸ್ತಾವನಂ ನಾಮ ಪ್ರಥಮೋಧ್ಯಾಯಃ**



---

೧೦೫. ಸ್ಕಾಂದ ಪುರಾಣವು ಒಂದುಲಕ್ಷ ಗ್ರಂಥವುಳ್ಳದೆಂದು ಜನರಿಗೆಲ್ಲಾ ವಿದಿತವಾಗಿದೆ. ಈ ಮಹರ್ಷಿವರ್ಯರು ಐವತ್ತುಸಾವಿರ ಎಂದರೆ ಅರ್ಧಲಕ್ಷ ಗ್ರಂಥವುಳ್ಳದ್ದಾಗಿ ಭವಿಷ್ಯಮಹಾಪುರಾಣವನ್ನು ರಚಿಸಿದರು.

(ದೇವೀಭಾಗವತದಲ್ಲಿ "ಚತುರ್ದಶ ಸಹಸ್ರಾಣಿ ತಥಾಪಂಚಶತಾನಿಚ । ಭವಿಷ್ಯಂ ಪರಿಸಂಖ್ಯಾತಂ ಮುನಿಭಿಸ್ತತ್ವದರ್ಶಿಭಿಃ" ಎಂದು ಹೇಳಿದೆ. ಅಲ್ಲಿ ಹೇಳಿರುವ ಪ್ರಕಾರ ಹದಿನಾಲ್ಕುಸಾವಿರದ ಐದುನೂರು ಎಂದು ತಿಳಿಯುವುದು. ಅಂತು ಐವತ್ತು ಸಾವಿರ ಶ್ಲೋಕವುಳ್ಳ ಈ ಪುರಾಣವು ಇನ್ನೂ ಲಬ್ಧವಾಗಿಲ್ಲ. ಈಗ ಮುದ್ರಿತವಾದ ಭವಿಷ್ಯಮಹಾಪುರಾಣದಲ್ಲಿ ಇಪ್ಪತ್ತಾರುಸಾವಿರ ಚಿಲ್ಲರೆ ಶ್ಲೋಕಗಳು ಮಾತ್ರ ಕಾಣುತ್ತಿವೆ. ಮಿಕ್ಕವು ಲುಪ್ತವಾಗಿರಬೇಕು.)

೧೦೬. ಯಾವ ಮನುಷ್ಯನು ಈ ಮಹಾಪುರಾಣವನ್ನು ಭಕ್ತಿಯಿಂದ ಶ್ರವಣ ಮಾಡುವನೋ ಅವನಿಗೆ ಸಂಪತ್ಸಮೃದ್ಧಿಯು ನಿಶ್ಚಯವಾಗಿ ಆಗುವುದು.

ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಕಥಾಪ್ರಸ್ತಾವನೆಯೆಂಬ ಮೊದಲನೆಯ ಅಧ್ಯಾಯವು ಇಲ್ಲಿಗೆ ಮುಗಿದಿದೆ.



॥ ಶ್ರೀಃ ॥

# ಶ್ರೀ ಭವಿಷ್ಯ ಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ದ್ವಿತೀಯೋಽಧ್ಯಾಯಃ

॥ ಸುಮಂತುರುವಾಚ ॥

ಶೃಣುಷ್ವೇದಂ ಮಹಾಬಾಹೋ ಪುರಾಣಂ ಪಂಚಲಕ್ಷಣಂ ।
ಯಚ್ಛೃತ್ವಾ ಮುಚ್ಯತೇ ರಾಜನ್ ಪುರುಷೋ ಬ್ರಹ್ಮಹತ್ಯಯಾ ॥ ೧ ॥

ಪರ್ವಾಣಿ ಚಾತ್ರ ವೈ ಪಂಚ ಕೀರ್ತಿತಾನಿ ಸ್ವಯಂಭುವಾ ।
ಪ್ರಥಮಂ ಕಥ್ಯತೇ ಬ್ರಾಹ್ಮಂ ದ್ವಿತೀಯಂ ವೈಷ್ಣವಂ ಸ್ಮೃತಂ ॥ ೨ ॥

ತೃತೀಯಂ ಶೈವಮಾಖ್ಯಾತಂ ಚತುರ್ಥಂ ತ್ವಾಷ್ಟ್ರಮುಚ್ಯತೇ ।
ಪಂಚಮಂ ಪ್ರತಿಸರ್ಗಾಖ್ಯಂ ಸರ್ವಲೋಕೈಃ ಸುಪೂಜಿತಂ ॥ ೩ ॥

---

## ಎರಡನೆಯ ಅಧ್ಯಾಯವು

೧. ಸುಮಂತು ಮುನಿವರ್ಯರು ರಾಜನನ್ನು ಕುರಿತು ಹೇಳುತ್ತಾರೆ. "ಮಹಾಬಲಶಾಲಿಯಾದ ರಾಜನೇ! ಯಾವುದನ್ನು ಶ್ರವಣಮಾಡುವುದರಿಂದ ಮನುಷ್ಯನು ಬ್ರಹ್ಮಹತ್ಯಾದಿ ಪಾತಕಗಳಿಂದ ಬಿಡುಗಡೆ ಹೊಂದುವನೋ ಅಂತಹ ಪುರಾಣದ ಐದು ಲಕ್ಷಣಗಳನ್ನು ತಿಳಿದುಕೋ."

೨–೩. ಈ ಪುರಾಣದಲ್ಲಿ ಒಂದನೆಯದು ಬ್ರಾಹ್ಮಪರ್ವ, ಎರಡನೆಯದು ವೈಷ್ಣವಪರ್ವ. ಮೂರನೆಯದು ಶೈವಪರ್ವ. ನಾಲ್ಕನೆಯದು ತ್ವಾಷ್ಟ್ರಪರ್ವ, ಐದನೆಯದು ಸಮಸ್ತ ಲೋಕಪೂಜ್ಯವಾದ ಪ್ರಗತಿಸರ್ಗಪರ್ವ. ಹೀಗೆ ಐದು ಪರ್ವಗಳೆಂದು ಬ್ರಹ್ಮನೇ ಹೇಳಿದಾನೆ. (ಪ್ರಕೃತ ಉಪಲಬ್ಧವಾಗಿರುವ ಈ ಪುರಾಣದಲ್ಲಿ ಬ್ರಾಹ್ಮಪರ್ವ, ಮಧ್ಯಮಪರ್ವ, ಪ್ರತಿಸರ್ಗಪರ್ವ, ಉತ್ತರಪರ್ವ ಎಂಬ ನಾಲ್ಕು ಪರ್ವಗಳು ಮಾತ್ರ ಇವೆ.)

**ಏತಾನಿ ತಾತ ಪರ್ವಾಣಿ ಲಕ್ಷಣಾನಿ ನಿಬೋಧ ಮೇ ।**
**ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ ॥ ೪ ॥**

**ವಂಶಾನುಚರಿತಂಚೇತಿ ಪುರಾಣಂ ಪಂಚಲಕ್ಷಣಂ ।**
**ಚತುರ್ದಶಭಿರ್ವಿದ್ಯಾಭಿರ್ಭೂಷಿತಂ ಕುರುನಂದನ ॥ ೫ ॥**

**ಅಂಗಾನಿ ಚತುರೋ ವೇದಾ ಮೀಮಾಂಸಾ ನ್ಯಾಯವಿಸ್ತರಃ ।**
**ಪುರಾಣಂ ಧರ್ಮಶಾಸ್ತ್ರಂ ಚ ವಿದ್ಯಾಹ್ಯೇತಾಶ್ಚತುರ್ದಶ ॥ ೬ ॥**

**ಆಯುರ್ವೇದೋ ಧನುರ್ವೇದೋ ಗಾಂಧರ್ವಶ್ಚೈವ ತೇ ತ್ರಯಃ ।**
**ಅರ್ಥಶಾಸ್ತ್ರಂ ಚತುರ್ಥಂ ತು ವಿದ್ಯಾ ಹ್ಯಷ್ಟಾದಶೈವ ತಾಃ ॥ ೭ ॥**

**ಪ್ರಥಮಂ ಕಥ್ಯತೇ ಸರ್ಗೋ ಭೂತಾನಾಮಿಹ ಸರ್ವಶಃ ।**
**ಯಚ್ಛ್ರುತ್ವಾ ಪಾಪನಿರ್ಮುಕ್ತೋ ಯಾತಿ ಶಾಂತಿಮನುತ್ತಮಾಂ ॥ ೮ ॥**

---

೪. ಇನ್ನು ಪುರಾಣ ಲಕ್ಷಣಗಳನ್ನು ಹೇಳುವೆನು ಕೇಳು. ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ, ವಂಶಾನುಚರಿತ ಎಂದು ಪುರಾಣವು ಐದು ಲಕ್ಷಣಗಳಿಂದ ಯುಕ್ತವಾಗಿರಬೇಕು.

೫-೭. ಅಯ್ಯಾ ಕುರುವಂಶಜನೇ! ಲೋಕಭೂಷಣಗಳಾದ ಹದಿನಾಲ್ಕು ವಿದ್ಯೆಗಳನ್ನು ಹೇಳುತ್ತೇನೆ. ಋಕ್, ಯಜುಸ್ಸು, ಸಾಮ, ಅಥರ್ವಣ, ಎಂಬ ನಾಲ್ಕು ವೇದಗಳೂ ; ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪ ಎಂಬ ಆರು ವೇದಾಂಗಗಳೂ ; ಮೀಮಾಂಸಾ, ನ್ಯಾಯಶಾಸ್ತ್ರ, ಪುರಾಣ, ಧರ್ಮಶಾಸ್ತ್ರ, ಎಂಬ ಈ ನಾಲ್ಕೂ ಸೇರಿ ಒಟ್ಟು ಹದಿನಾಲ್ಕು ವಿದ್ಯೆಗಳೆನಿಸುವುವು. ಇದರ ಜತೆಗೆ ಆಯುರ್ವೇದ, ಧನುರ್ವೇದ, ಗಾಂಧರ್ವವೇದ, (ಸಂಗೀತ) ಅರ್ಥಶಾಸ್ತ್ರ ಈ ನಾಲ್ಕೂ ಸೇರಿದರೆ ಒಟ್ಟು ಹದಿನೆಂಟು ವಿದ್ಯೆಗಳಾಗುತ್ತವೆ.

೮. ಯಾವುದನ್ನು ಕೇಳಿದರೆ ಮನುಷ್ಯನು ಪಾಪರಹಿತನಾಗಿ ಶ್ರೇಷ್ಠವಾದ ಶಾಂತಿಯನ್ನು ಪಡೆಯುತ್ತಾನೋ ಅಂತಹ ಭೂತಸೃಷ್ಟಿಯ ಕ್ರಮವನ್ನು (ಸರ್ಗವನ್ನು) ಮೊದಲು ಹೇಳುತ್ತೇನೆ.

**ಜಗದಾಸೀತ್ ಪುರಾ ತಾತ ತಮೋಭೂತಮಲಕ್ಷಣಂ ।**
**ಅವಿಜ್ಞೇಯಮತರ್ಕ್ಯಂ ಚ ಪ್ರಸುಪ್ತಮಿವ ಸರ್ವಶಃ ॥ ೯ ॥**

**ತತಸ್ಸ ಭಗವಾನೀಶೋ ಹ್ಯವ್ಯಕ್ತೋ ವ್ಯಂಜಯನ್ನಿದಂ ।**
**ಮಹಾಭೂತಾನಿ ವೃತ್ತೌಜಾಃ ಪ್ರೋತ್ಥಿತಸ್ತಮನಾಶನಃ ॥ ೧೦ ॥**

**ಯೋಽಸಾವತೀಂದ್ರಿಯೋಽಗ್ರಾಹ್ಯಃ ಸೂಕ್ಷ್ಮೋಽವ್ಯಕ್ತಃ ಸನಾತನಃ ।**
**ಸರ್ವಭೂತಮಯೋಽಚಿಂತ್ಯಃ ಸ ಏಷ ಸ್ವಯಮುತ್ಥಿತಃ ॥ ೧೧ ॥**

**ಯೋಽಸೌ ಷಡ್ವಿಂಶಕೋ ಲೋಕೇ ತಥಾ ಯಃ ಪುರುಷೋತ್ತಮಃ ।**
**ಭಾಸ್ಕರಶ್ಚ ಮಹಾಬಾಹೋ ಪರಂ ಬ್ರಹ್ಮ ಚ ಕಥ್ಯತೇ ॥ ೧೨ ॥**

---

೯. ಹುಟ್ಟಿ ಅಳಿಯುವ ಈ ಜಗತ್ತು ಮೊಟ್ಟಮೊದಲು ತಮೋಮಯವಾಗಿ ಯಾರಿಗೂ ಯಾವ ವಸ್ತುವನ್ನೂ ಗುರುತಿಸುವುದಕ್ಕೂ, ಹೇಗೆ ಹುಟ್ಟಿತು ಎಂದು ಊಹಿಸುವುದಕ್ಕೂ ಅಸಾಧ್ಯವಾಗಿ ಜಡವಾದುದರಿಂದ ಸರ್ವದಾ ನಿದ್ದೆಮಾಡುತ್ತಿದ್ದಂತೆ ಇದ್ದಿತು.

೧೦. ಪ್ರಕಾಶಸ್ವರೂಪನೂ ಷಡ್ಗುಣೈಶ್ವರ್ಯಸಂಪನ್ನನೂ ತಮೋನಾಶಕನೂ ಆದ ಆ ಪರಮಾತ್ಮನು, ಈ ಅಪಂಚೀಕೃತ ಪಂಚಮಹಾಭೂತಗಳನ್ನು ವ್ಯಕ್ತವಾದ ಜಗದ್ರೂಪವಾಗಿ ಸೃಷ್ಟಿಸುವುದಕ್ಕಾಗಿ ಹಾಗೆ ಸುಪ್ತನಾಗಿದ್ದವನು ಎಚ್ಚರಗೊಂಡನು.

೧೧ ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯಗಳಿಗೆ ಅಗೋಚರನೂ, ಅಂತರ್ಯಾಮಿಯಾಗುವುದಕ್ಕೆ ಅನುಕೂಲವಾದಷ್ಟು ಸೂಕ್ಷ್ಮನೂ, ಅವ್ಯಕ್ತನೂ, ಪುರಾತನನೂ, ತನ್ನ ಕಾರ್ಯವಾದ ಸಮಸ್ತಭೂತಗಳ ಸ್ವರೂಪನೂ, ಮನಸ್ಸಿಗೂ ಅಗೋಚರನೂ ಆದ ಆ ಪರಮಾತ್ಮನು ತಾನೇ ಎಚ್ಚರಗೊಂಡನು.

೧೨. ಮೂಲಪ್ರಕೃತಿ, ಅವಿಕೃತಿ, ಮಹತ್ತತ್ವ, ಅಹಂಕಾರ, ಪಂಚತನ್ಮಾತ್ರೆಗಳು, ಪಂಚಕರ್ಮೇಂದ್ರಿಯ, ಪಂಚಜ್ಞಾನೇಂದ್ರಿಯ, ಪಂಚಸ್ಥೂಲಭೂತಗಳು ಮನಸ್ಸು ಎಂಬ ಇಪ್ಪತ್ತೈದು ತತ್ವಗಳಲ್ಲದೆ ಇಪ್ಪತ್ತಾರನೆಯವನಾದ ಈ ಪರಮಾತ್ಮನು ಪುರುಷೋತ್ತಮನೆಂದೂ, ಜಡವಸ್ತುವಿಗೆ ಪ್ರಕಾಶಕೊಡುವನೆಂದೂ, ಕಾಲ, ದೇಶ, ವಸ್ತು, ಈ ಮೂರರಿಂದ ಪರಿಚ್ಛೇದವಿಲ್ಲದ್ದರಿಂದ ಬ್ರಹ್ಮವೆಂದೂ ಹೇಳಲ್ಪಡುತ್ತಾನೆ.

ಸೋಽಭಿಧ್ಯಾಯ ಶರೀರಾತ್ ಸ್ವಾತ್ ಸಿಸೃಕ್ಷುಃ ವಿವಿಧಾಃ ಪ್ರಜಾಃ ।
ಅಪ ಏವ ಸಸರ್ಜಾದೌ ತಾಸು ವೀರ್ಯಮವಾಸೃಜತ್ ॥ ೧೩ ॥

ಯಸ್ಮಾದುತ್ಪದ್ಯತೇ ಸರ್ವಂ ಸದೇವಾಸುರಮಾನುಷಂ ।
ಬೀಜಂ ಶುಕ್ರಂ ತಥಾ ರೇತ ಉಗ್ರಂ ವೀರ್ಯಂ ಚ ಕಥ್ಯತೇ ॥ ೧೪ ॥

ವೀರ್ಯಸ್ಯೈತಾನಿ ನಾಮಾನಿ ಕಥಿತಾನಿ ಸ್ವಯಂಭುವಾ ।
ತದಂಡಮಭವದ್ಧೈಮಂ ಜ್ವಾಲಾಮಾಲಾಕುಲಂ ವಿಭೋ ॥ ೧೫ ॥

ಯಸ್ಮಿನ್ ಜಜ್ಞೇ ಸ್ವಯಂ ಬ್ರಹ್ಮಾ ಸರ್ವಲೋಕಪಿತಾಮಹಃ ।
ಸುರಜ್ಯೇಷ್ಠಶ್ಚತುರ್ವಕ್ತ್ರಃ ಪರಮೇಷ್ಠೀ ಪಿತಾಮಹಃ ॥ ೧೬ ॥

ಕ್ಷೇತ್ರಜ್ಞಃ ಪುರುಷೋ ವೇಧಾಃ ಶಂಭುರ್ನಾರಾಯಣಸ್ತಥಾ ।
ಪರ್ಯಾಯವಾಚಕೈಃ ಶಬ್ದೈರೇವಂ ಬ್ರಹ್ಮಾ ಪ್ರಕೀರ್ತ್ಯತೇ ॥ ೧೭ ॥

---

೧೩. ಆ ಪರಮಾತ್ಮನು ತನ್ನ ಶರೀರದಿಂದಲೇ ವಿವಿಧವಾದ ಪ್ರಜೆಗಳನ್ನು ಸೃಷ್ಟಿಸಲು ಸಂಕಲ್ಪಿಸಿ ಮೊಟ್ಟಮೊದಲು ಜಲವನ್ನು ಸೃಷ್ಟಿಮಾಡಿ ಅದರಲ್ಲಿ ಬೀಜ ಪ್ರಾಯವಾದ ವೀರ್ಯವನ್ನು ಇಟ್ಟನು.

೧೪. ಆ ವೀರ್ಯದಿಂದ ದೇವಾಸುರ ಮನುಷ್ಯರೆಂಬ ಭೇದದಿಂದ ಈ ಸಮಸ್ತ ಜಗತ್ತೂ ಉತ್ಪನ್ನವಾಗುವುದು. ಈ ವೀರ್ಯವನ್ನೇ ಶುಕ್ರ, ರೇತಸ್ಸು, ಉಗ್ರ, ಎಂದು ನಾಮಾಂತರಗಳಿಂದ ಕರೆಯುತ್ತಾರೆ.

೧೫. ವೀರ್ಯದ ಈ ಹೆಸರುಗಳನ್ನು ಬ್ರಹ್ಮನೇ ಹೇಳಿದಾನೆ. ಹೀಗೆ ಜಲದಲ್ಲಿ ಇಟ್ಟ ಆ ವೀರ್ಯವು ಚಿನ್ನದಂತೆ ಪ್ರಕಾಶಮಾನವಾಗಿ ಜ್ವಾಲಾಮಾಲೆಯಿಂದ ಯುಕ್ತವಾದ ಮೊಟ್ಟೆಯಾಯಿತು.

೧೬–೧೭. ಆ ಸ್ವರ್ಣಮಯವಾದ ಅಂಡದಲ್ಲಿ (ಮೊಟ್ಟೆಯಲ್ಲಿ) ಸಮಸ್ತ ಲೋಕಪಿತಾಮಹನಾದ ಬ್ರಹ್ಮ (ಹಿರಣ್ಯಗರ್ಭ) ನು ಜನಿಸಿದನು. ಇವನನ್ನು ಸುರಜ್ಯೇಷ್ಠ, ಪರಮೇಷ್ಠೀ, ಪಿತಾಮಹ, ಚತುರ್ವಕ್ತ್ರ, ಕ್ಷೇತ್ರಜ್ಞ, ಪುರುಷ, ವೇಧಸ್, ಶಂಭು, ನಾರಾಯಣ ಎಂಬಿವೇ ಮೊದಲಾದ ಪರ್ಯಾಯವಾಚಕ ಶಬ್ದಗಳಿಂದ ವ್ಯವಹರಿಸುವರು.

**ಸದಾ ಮನೀಷಿಭಿಸ್ತಾತ ವಿರಂಚಿಃ ಕಂಜಜಸ್ತಥಾ ।**
**ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ　　॥ ೧೮ ॥**

**ತಾ ಯದಸ್ಯಾಯನಂ ಪೂರ್ವಂ ತೇನ ನಾರಾಯಣಃ ಸ್ಮೃತಃ ।**
**ಅರಮಿತ್ಯೇವ ಶೀಘ್ರಾಯ ನಿಯತಾಃ ಕವಿಭಿಃ ಕೃತಾಃ　　॥ ೧೯ ॥**

**ಆಪಏವಾರ್ಣವೀಭೂತ್ವಾ ಸುಶೀಘ್ರಾಸ್ತೇನ ತಾ ನರಾಃ ।**
**ಯತ್ತತ್ಕಾರಣಮವ್ಯಕ್ತಂ ನಿತ್ಯಂ ಸದಸದಾತ್ಮಕಂ　　॥ ೨೦ ॥**

**ತದ್ವಿಸೃಷ್ಟಃ ಸ ಪುರುಷೋ ಲೋಕೇ ಬ್ರಹ್ಮೇತಿ ಕೀರ್ತ್ಯತೇ ।**
**ಏವಂ ಸ ಭಗವಾನಂಡೇ ತತ್ತ್ವಮೇವ ನಿರೂಪ್ಯ ವೈ　　॥ ೨೧ ॥**

**ಧ್ಯಾನಮಾಸ್ಥಾಯ ರಾಜೇಂದ್ರ ತದಂಡಮಕರೋದ್ದ್ವಿಧಾ ।**
**ಶಕಲಾಭ್ಯಾಂ ಚ ರಾಜೇಂದ್ರ ದಿವಂ ಭೂಮಿಂ ಚ ನಿರ್ಮಮೇ　　॥ ೨೨ ॥**

---

೧೮. ಅಯ್ಯಾ ರಾಜನೇ ವಿರಂಚಿ, ಕಂಜಜ, ಎಂಬಿವೂ ಬ್ರಹ್ಮನ ಪರ್ಯಾಯ ನಾಮಗಳೆಂದು ವಿದ್ವಾಂಸರು ಹೇಳುತ್ತಾರೆ. ಜಲಕ್ಕೆ ನಾರಾ ಎಂಬ ಹೆಸರನ್ನು ಕೊಟ್ಟಿದ್ದಾರೆ. ಏಕೆಂದರೆ ಇವು ನರನಿಂದ ಹುಟ್ಟಿದುವು.

೧೯. ಆ ಜಲವು ಇವನಿಗೆ ಮೊದಲು ವಾಸಸ್ಥಾನವಾದುದರಿಂದ ವಿಷ್ಣುವು ನಾರಾಯಣನೆನಿಸಿಕೊಂಡನು. ಅರಂ ಎಂದರೆ ಶೀಘ್ರವೆಂಬದಾಗಿ ವಿದ್ವಾಂಸರು ಹೇಳುತ್ತಾರೆ.

೨೦–೨೧. ಅತಿವೇಗವುಳ್ಳ ಆ ನೀರೇ ಕೂಡಲೇ ಸಮುದ್ರವಾಗಿ ನರಸಂಜ್ಞೆಯುಳ್ಳದ್ದಾಯಿತು. ಯಾವುದು ಸರ್ವಕಾರಣವಾಗಿಯೂ, ತಾನು ಅವ್ಯಕ್ತವಾಗಿಯೂ, ನಿತ್ಯವಾಗಿಯೂ, ನಾಶವಿಲ್ಲದ್ದಾಗಿಯೂ, ಕಾರ್ಯ ಕಾರಣ ಎರಡೂ ತಾನೇ ಆಗಿರುವುದರಿಂದ ಸತ್ ಅಸತ್ ಎಂಬ ಎರಡು ಶಬ್ದಕ್ಕೂ ವಾಚ್ಯವಾಗಿಯೂ ಇರುವುದೋ ಅಂಥ ಪರಬ್ರಹ್ಮದಿಂದ ಜನಿಸಿದವನೇ ಪ್ರಪಂಚದಲ್ಲಿ ಬ್ರಹ್ಮನೆಂದು ಹೇಳಲ್ಪಡುತ್ತಾನೆ. ಈರೀತಿ ಆ ಬ್ರಹ್ಮನು ಆ ಅಂಡದಲ್ಲಿ ಹುಟ್ಟಿ ತತ್ತ್ವಸ್ವರೂಪವನ್ನು ಯೋಚಿಸಿದನು.

೨೨. ಎಲೈ ರಾಜೇಂದ್ರನೇ! ಪುನಃ ಸಂಕಲ್ಪಿಸಿ ಆ ಅಂಡವನ್ನು ಎರಡುಹೋಳುಗಳಾಗಿ ಮಾಡಿದನು. ಅನಂತರ ಆ ಎರಡು ಹೋಳುಗಳಿಂದ ದ್ಯುಲೋಕ, ಭೂಲೋಕ ಈ ಎರಡು ಲೋಕಗಳನ್ನೂ ನಿರ್ಮಾಣಮಾಡಿದನು.

ಅಂತರ್ವ್ಯೋಮ ದಿಶಶ್ಚಾಷ್ಟೌ ವಾರುಣಂ ಸ್ಥಾನಮೇವ ಹಿ ।
ಊರ್ಧ್ವಂ ಮಹಾನ್ ಗತೋ ರಾಜನ್ ಸಮಂತಾಲ್ಲೋಕಭೂತಯೇ ॥ ೨೪ ॥

ಮಹತಶ್ಚಾಪ್ಯಹಂಕಾರಃ ತಸ್ಮಾಚ್ಚ ತ್ರಿಗುಣಾ ಅಪಿ ।
ತ್ರಿಗುಣಾ ಅತಿ ಸೂಕ್ಷ್ಮಾಸ್ತ್ವತ್ತು ಬುದ್ಧಿಗಮ್ಯಾ ಹಿ ಭಾರತ ॥ ೨೪ ॥

ಉತ್ಪತ್ತಿಹೇತುಭೂತಾ ವೈ ಭೂತಾನಾಂ ಮಹತಾಂ ನೃಪ ।
ತೇಷಾಮೇವ ಗೃಹೀತಾನಿ ಶನೈಃ ಪಂಚೇಂದ್ರಿಯಾಣಿ ತು ॥ ೨೫ ॥

ತಥೈವಾವಯವಾಃ ಸೂಕ್ಷ್ಮಾಃ ಷಣ್ಣಾಮಪ್ಯಮಿತೌಜಸಾಂ ॥ ೨೬ ॥

ಸನ್ನಿವೇಶಾತ್ಮಮಾತ್ರಾಸು ಸ ರಾಜನ್ ಭಗವಾನ್ ವಿಭುಃ ।
ಭೂತಾನಿ ನಿರ್ಮಮೇ ತಾತ ಸರ್ವಾಣಿ ವಿಧಿಪೂರ್ವಕಂ ॥ ೨೭ ॥

---

೨೩. ಅವೆರಡರ ಮಧ್ಯದಲ್ಲಿ ಆಕಾಶವನ್ನೂ, ವರುಣಸ್ಥಾನವನ್ನೂ, ಅಷ್ಟ ದಿಕ್ಕುಗಳನ್ನೂ ನಿರ್ಮಿಸಿದನು. ಪ್ರಪಂಚವು ಸೃಷ್ಟಿಯಾಗುವುದಕ್ಕೋಸ್ಕರ ಮಹತ್ತತ್ತ್ವವು ಮೊದಲು ಉದ್ಭೂತವಾಯಿತು.

೨೪. ಅಯ್ಯಾ ಭರತವಂಶಜನೇ! ಆ ಮಹತ್ತತ್ತ್ವದಿಂದ ಅಹಂಕಾರ ತತ್ತ್ವವೂ, ಅದರಿಂದ ಸತ್ವರಜಸ್ತಮೋಗುಣಾತ್ಮಕಗಳಾಗಿಯೂ, ಅತೀಂದ್ರಿಯಗಳಾಗಿಯೂ ಅನುಮಾನಕ್ಕೆ ಮಾತ್ರ ಗೋಚರವಾಗಿಯೂ ಇರತಕ್ಕ ಸೂಕ್ಷ್ಮಭೂತಗಳು ಉತ್ಪನ್ನವಾದುವು.

೨೫. ಎಲೈ ರಾಜೇಂದ್ರನೇ! ತ್ರಿಗುಣಾತ್ಮಕವಾದ ಸೂಕ್ಷ್ಮಭೂತಗಳೇ ಸ್ಥೂಲ ಭೂತಗಳ ಉತ್ಪತ್ತಿಗೆ ಕಾರಣಗಳು. ಆ ಸೂಕ್ಷ್ಮಭೂತಗಳಿಂದಲೇ ಕಾಲಕ್ರಮದಲ್ಲಿ ಪಂಚೇಂದ್ರಿಯಗಳೂ ಉತ್ಪನ್ನವಾದುವು.

೨೬-೨೭. ಆ ವಿಭುವು ಪಂಚಜ್ಞಾನೇಂದ್ರಿಯಗಳು, ಮನಸ್ಸು, ಎಂಬ ಈ ಆರಕ್ಕೂ ತಮ್ಮ ತಮ್ಮ ಕಾರ್ಯಮಾಡುವ ಶಕ್ತಿಯನ್ನು ಕೊಟ್ಟು, ಈ ಇಂದ್ರಿಯಗಳಿಗೆ ಕಾರಣೀಭೂತಗಳಾದ ಪಂಚತನ್ಮಾತ್ರೆಗಳನ್ನು ಅವುಗಳಿಗೆ ಆಧಾರವಾಗಿ ಕಲ್ಪಿಸಿ, ಸ್ಥಾವರ ಜಂಗಮಾತ್ಮಕವಾದ ಎಲ್ಲಾ ಭೂತಗಳನ್ನೂ ಕ್ರಮವಾಗಿ ಸೃಷ್ಟಿಮಾಡುವನು.

**ಯನ್ಮೂರ್ತ್ಯವಯವಾಃ ಸೂಕ್ಷ್ಮಾಸ್ತಸ್ಯೇಮಾನ್ಯಾಶ್ರಯಾಣಿ ಷಟ್ ।**
**ತಸ್ಮಾತ್ ಶರೀರಮಿತ್ಯಾಹುಃ ತಸ್ಯ ಮೂರ್ತಿಂ ಮನೀಷಿಣಃ ॥ ೨೮ ॥**

**ಮಹಾಂತಿ ತಾನಿ ಭೂತಾನಿ ಆವಿಶಂತಿ ತತೋ ವಿಭುಂ ।**
**ಕರ್ಮಣಾ ಸಹ ರಾಜೇಂದ್ರ ಸಗುಣಾಶ್ಚಾಪಿ ವೈ ಗುಣಾಃ ॥ ೨೯ ॥**

**ತೇಷಾಮಿದಂ ತು ಸಪ್ತಾನಾಂ ಪುರುಷಾಣಾಂ ಮಹೌಜಸಾಂ ।**
**ಸೂಕ್ಷ್ಮಾಭ್ಯೋ ಮೂರ್ತಿಮಾತ್ರಾಭ್ಯಃ ಸಂಭವತ್ಯವ್ಯಯಾದ್ವ್ಯಯಂ ॥೩೦॥**

**ಭೂತಾದಿ ಮಹತಸ್ತಾತ ಯೇನ ವ್ಯಾಪ್ತಮಿದಂ ಜಗತ್ ।**
**ತಸ್ಮಾದಪಿ ಮಹಾಬಾಹೋ ಪುರುಷಾಃ ಪಂಚ ಏವ ಹಿ ॥ ೩೧ ॥**

**ಕೇಚಿದೇವಂ ಪರಾಂ ತಾತ ಸೃಷ್ಟಿಮಿಚ್ಛಂತಿ ಪಂಡಿತಾಃ ।**
**ಅನ್ಯೇಽಪ್ಯೇವಂ ಮಹಾಬಾಹೋ ಪ್ರವದಂತಿ ಮನೀಷಿಣಃ ॥ ೩೨ ॥**

---

೨೮. ಪಾಂಚಭೌತಿಕ ಶರೀರಕ್ಕೆ ಕಾರಣವಾದ ಸೂಕ್ಷ್ಮಭೂತಗಳು ಈ ಪಂಚ ಜ್ಞಾನೇಂದ್ರಿಯ, ಮನಸ್ಸು ಈ ಆರಕ್ಕೂ ಆಶ್ರಯಗಳಾದುದರಿಂದ ವಿದ್ವಾಂಸರು ಆದರ ರೂಪವನ್ನು ಶರೀರವೆನ್ನುವರು.

೨೯. ಎಲೈ ರಾಜೇಂದ್ರನೇ ! ಆ ಮಹಾಭೂತಗಳು ವ್ಯಾಪಕನಾದ ಭಗವಂತ ನನ್ನು ಆಶ್ರಯಿಸುತ್ತವೆ. ಸತ್ವರಜಸ್ತಮೋಗುಣಗಳು ಕೂಡ ತಮ್ಮ ಕಾರ್ಯದೊಡನೆ ಆವಿಭುವಿನಲ್ಲಿ ಸೇರುತ್ತವೆ.

೩೦. ನಾಶರಹಿತವಾದ ಬ್ರಹ್ಮಸಂಬಂಧಿ ಮಹಾಶಕ್ತಿವಂತರಾದ (ಮಹತ್ತತ್ವ ಅಹಂಕಾರ ಪಂಚತನ್ಮಾತ್ರ ಇವು ಪುರುಷನಿಗೆ ಉಪಾಧಿಯಾದ್ದರಿಂದ ಪುರುಷ ಶಬ್ದ ದಿಂದಲೇ ವ್ಯವಹರಿಸುವರು.) ಆ ಏಳು ಪುರುಷರ ಪ್ರತಿ ಜನ್ಮದಲ್ಲೂ ಬೇರೆಯಾಗದೆ ನಿತ್ಯವಾಗಿದ್ದುಕೊಳ್ಳುವ ಸೂಕ್ಷ್ಮಾಂಶಗಳು ನಶ್ವರವಾದ ಈ ಸ್ಥೂಲಶರೀರ ಸೃಷ್ಟಿಗೆ ಕಾರಣಗಳಾಗಿವೆ.

೩೧. ಅಪ್ಪಾ ! ಮಹತ್ತತ್ವದಿಂದ ಆಕಾಶತತ್ವವು ಹುಟ್ಟಿ ಜಗತ್ತನ್ನು ವ್ಯಾಪಿಸಿತು. ಎಲೈ ಮಹಾಬಾಹುವೇ ! ಅದರಿಂದಲೂ ಐವರು ಪುರುಷರಾದರು.

೩೨. ಕೆಲವರು ವಿದ್ವಾಂಸರು ಈರೀತಿಯಾದ್ದೇ ಸೃಷ್ಟಿಕ್ರಮವೆಂದು ಅಭಿಪ್ರಾಯ ಪಡುತ್ತಾರೆ ಇತರ ಪಂಡಿತರು ಸ್ಪಷ್ಟವಾಗಿ ಮುಂದೆ ಹೇಳುವಂತೆ ಹೇಳುತ್ತಾರೆ.

**ಯೋऽಸಾವಾತ್ಮಾ ಪರಸ್ತಾತ ಕಲ್ಪಾದೌ ಸೃಜತೇ ತನುಂ ।**
**ಪ್ರಜನಶ್ಚ ಮಹಾಬಾಹೋ ಸಿಸೃಕ್ಷುರ್ವಿವಿಧಾಃ ಪ್ರಜಾಃ ॥ ೩೩ ॥**

**ತೇನ ಸೃಷ್ಟಃ ಪುದ್ಗಲಸ್ತು ಪ್ರಧಾನಂ ವಿಶತೇ ನೃಪ ।**
**ಪ್ರಧಾನಂ ಕ್ಷೋಭಿತಂ ತೇನ ವಿಕಾರಾನ್ ಸೃಜತೇ ಬಹೂನ್ ॥ ೩೪ ॥**

**ಉತ್ಪದ್ಯತೇ ಮಹಾಂಸ್ತಸ್ಮಾತ್ ತತೋ ಭೂತಾದಿರೇವ ಹಿ ।**
**ಉತ್ಪದ್ಯತೇ ವಿಶಾಲಂ ಚ ಭೂತಾದೇಃ ಕುರುನಂದನ ॥ ೩೫ ॥**

**ವಿಶಾಲಾಚ್ಚ ಹರಿಸ್ತಾತ ಹರೇಶ್ಚಾಪಿ ವೃಕಾಸ್ತಥಾ ।**
**ವೃಕೈರ್ಮುಷ್ಣಂತಿ ಚ ಬುಧಾಃ ತಸ್ಮಾತ್ಸರ್ವಂ ಭವೇನ್ನೃಪ ॥ ೩೬ ॥**

**ತಥೈಷಾಮೇವ ರಾಜೇಂದ್ರ ಪ್ರಾದುರ್ಭವತಿ ವೇಗತಃ ।**
**ಮಾತ್ರಾಣಾಂ ಕುರುಶಾರ್ದೂಲ ವಿಬೋಧಸ್ತದನಂತರಂ ॥ ೩೭ ॥**

---

೩೩. ಅಯ್ಯಾ ಮಹಾಬಾಹುವೇ! ಉತ್ಕೃಷ್ಟನಾದ ಪರಮಾತ್ಮನು ಕಲ್ಪಾದಿಯಲ್ಲಿ ಬಗೆಬಗೆಯಾದ ಪ್ರಜೆಗಳನ್ನು ಸೃಷ್ಟಿಸಲೆಣಿಸಿ ಮೊದಲು ಶರೀರವನ್ನು ಸೃಷ್ಟಿಮಾಡುತ್ತಾನೆ.

೩೪. ಎಲೈ ರಾಜನೇ! ಕೇಳು ಅವನಿಂದ ಸೃಷ್ಟವಾದ ಪುದ್ಗಲವು (ಪರಮಾಣುವು) ಪ್ರಧಾನವನ್ನು ಪ್ರವೇಶಿಸುತ್ತದೆ. ಅದರಿಂದ ಪ್ರಧಾನವು ಕ್ಷೋಭಿತವಾಗಿ ಅನೇಕ ವಿಕಾರಕಾರ್ಯವರ್ಗಗಳನ್ನು ಸೃಷ್ಟಿಮಾಡುತ್ತದೆ.

೩೫. ಅಯ್ಯಾ ಕುರುನಂದನನೇ! ಆ ವಿಕಾರದಿಂದ ಮಹತ್ತತ್ತ್ವವೂ, ಆ ಮಹತ್ತತ್ವದಿಂದ ಭೂತಾದಿಗಳೂ, ಆ ಭೂತಾದಿಗಳಿಂದ ವಿಶಾಲವೂ ಹುಟ್ಟುತ್ತದೆ.

೩೬. ಆ ವಿಶಾಲದಿಂದ ಹರಿಯೂ ಹರಿಯಿಂದ ವೃಕಗಳೂ ಹುಟ್ಟುತ್ತವೆ. ವೃಕಗಳಿಂದ ಬುಧರು ಜ್ಞಾನವನ್ನು ಅಪಹರಿಸುತ್ತಾರೆ. ಎಲೈ ರಾಜನೇ! ಕೇಳು ಅದರಿಂದ ಎಲ್ಲವೂ ಉಂಟಾಗುತ್ತವೆ.

೩೭. ಕುರುಶ್ರೇಷ್ಠನಾದ ಎಲೈ ರಾಜೇಂದ್ರನೇ! ಆಮೇಲೆ ಹಾಗೆಯೇ ಈ ಮಾತ್ರೆಗಳು ವೇಗದಿಂದ ಮಿಲಿತವಾಗಿ ಸೇರಿದುದರ ದೆಸೆಯಿಂದಲೇ ಚೈತನ್ಯವುಂಟಾಗುವುದು.

**ತಸ್ಮಾದಪಿ ಹೃಷೀಕಾಣಿ ವಿವಿಧಾನಿ ನೃಪೋತ್ತಮ ।**
**ತಥೇಯಂ ಸೃಷ್ಟಿರಾಖ್ಯಾತಾ್ಯರಾಧ್ಯತಃ ಕುರುನಂದನ ॥ ೩೮ ॥**

**ಭೂಯೋ ನಿಬೋಧ ರಾಜೇಂದ್ರ ಭೂತಾನಾಮಿಹ ವಿಸ್ತರಂ ।**
**ಗುಣಾಧಿಕಾನಿ ಸರ್ವಾಣಿ ಭೂತಾನಿ ಪೃಥಿವೀಪತೇ ॥ ೩೯ ॥**

**ಆಕಾಶಮಾದಿತಃ ಕೃತ್ವಾ ಉತ್ತರೋತ್ತರವೇವ ಹಿ ।**
**ಏಕಂ ದ್ವೌ ಚ ತಥಾ ತ್ರೀಣಿ ಚತ್ವಾರಶ್ಚಾಪಿ ಪಂಚ ಚ ॥ ೪೦ ॥**

**ತತಸ್ಸ ಭಗವಾನ್ ಬ್ರಹ್ಮಾ ಪದ್ಮಾಸನಗತಃ ಪ್ರಭುಃ ।**
**ಸರ್ವೇಷಾಂ ತು ಸ ನಾಮಾನಿ ಕರ್ಮಾಣಿ ಚ ಪೃಥಕ್ ಪೃಥಕ್ ॥ ೪೧ ॥**

---

೩೮. ಎಲೈ ಕುರುವಂಶೋದ್ಭವನಾದ ರಾಜಶ್ರೇಷ್ಠನೇ ! ಕೇಳು, ಅದರಿಂದಲೂ ಬಗೆಬಗೆಯ ಜ್ಞಾನೇಂದ್ರಿಯಗಳು ಹುಟ್ಟಿದುವು. ಈರೀತಿ ಇದರಿಂದ ಈ ಸೃಷ್ಟಿಯು ಉಂಟಾಯಿತೆಂದು ನಾನು ಹೇಳಿದೆ.

೩೯. ಎಲೈ ರಾಜೇಂದ್ರನೇ ! ಪುನಃ ಈಗ ಭೂತಗಳ ವಿಸ್ತರವನ್ನು ತಿಳಿದುಕೋ ; ಎಲ್ಲಾ ಭೂತಗಳೂ ಬರುತ್ತ ಬರುತ್ತ ಹೆಚ್ಚು ಹೆಚ್ಚು ಗುಣಗಳುಳ್ಳವು ಗಳಾಗುವುವು.

೪೦. ಆಕಾಶವನ್ನು ಮೊದಲುಮಾಡಿ ಮುಂದಿನ ಭೂತಗಳಿಗೆ ಅದರ ಹಿಂದಿನ ಭೂತಗಳಿಗಿಂತ ಒಂದೊಂದು ಗುಣಗಳು ಹೆಚ್ಚಾಗುತ್ತಾ ಒಂದೊಂದರಲ್ಲೂ ಕ್ರಮ ದಿಂದ ಒಂದು, ಎರಡು, ಮೂರು, ನಾಲ್ಕು, ಐದು ಹೀಗೆ ಹೆಚ್ಚು ಹೆಚ್ಚು ಗುಣಗಳಿರು ವುವು :—ಆಕಾಶದಲ್ಲಿ ಶಬ್ದ ಒಂದೇ ; ವಾಯುವಿನಲ್ಲಿ ಶಬ್ದ ಸ್ಪರ್ಶಗಳೆರಡು ; ತೇಜಸ್ಸಿ ನಲ್ಲಿ ಶಬ್ದ ಸ್ಪರ್ಶ ರೂಪಗಳೆಂಬ ಮೂರು ಗುಣಗಳು ; ಜಲದಲ್ಲಿ ಶಬ್ದ, ಸ್ಪರ್ಶ, ರೂಪ, ರಸಗಳೆಂಬ ನಾಲ್ಕು ಗುಣಗಳು ; ಪೃಥಿವಿಯಲ್ಲಿ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಗಳೆಂಬ ಐದು ಗುಣಗಳು ಇರುವುವು.

೪೧-೪೨. ಪದ್ಮಾಸನದಲ್ಲಿ ಕುಳಿತಿರುವ ಪ್ರಭುವಾದ ಬ್ರಹ್ಮ (ಹಿರಣ್ಯಗರ್ಭ) ದೇವನು ಅನಂತರದಲ್ಲಿ ಎಲ್ಲಾ ಪದಾರ್ಥಗಳಿಗೂ ವೇದಗಳಲ್ಲಿ ಕಾಣಬರುವ ಇಂದ್ರ ಇತ್ಯಾದಿ ಶಬ್ದಗಳಿಂದಲೇ ಅವುಗಳ ನಾಮಗಳು, ಕರ್ತವ್ಯ ಕರ್ಮಗಳು ಮತ್ತು

**ವೇದಶಬ್ದೇಭ್ಯ ಏವಾದೌ ಪೃಥಕ್ ಸಂಸ್ಥಾಶ್ಚ ನಿರ್ಮಮೇ ।**
**ಕರ್ಮೋದ್ಭವಾನಾಂ ದೇವಾನಾಂ ಸೋಽಸೃಜದ್ದೇಹಿನಾಂ ಪ್ರಭುಃ ॥ ೪೨ ॥**

**ತುಷಿತಾನಾಂ ಗಣಂ ರಾಜನ್ ಯಜ್ಞಂಚೈವ ಸನಾತನಂ ।**
**ದತ್ವಾ ವೀರ ಸಮಾನೇಭ್ಯೋ ಗುಹ್ಯಂ ಬ್ರಹ್ಮಸನಾತನಂ ॥ ೪೩ ॥**

**ದುದೋಹ ಯಜ್ಞಸಿದ್ಧ್ಯರ್ಥಂ ಋಗ್ಯಜುಸ್ಸಾಮಲಕ್ಷಣಂ ।**
**ಕಾಲಂ ಕಾಲವಿಭಕ್ತೀಶ್ಚ ಗ್ರಹಾನ್ ಋತೂಂಸ್ತಥಾ ನೃಪ ॥ ೪೪ ॥**

**ಸರಿತಃ ಸಾಗರಾನ್ ಶೈಲಾನ್ ಸಮಾನಿ ವಿಷಮಾಣಿ ಚ ।**
**ಕಾಮಂ ಕ್ರೋಧಂ ತಥಾ ವಾಚಂ ರತಿಂಚಾಪಿ ಕುರೂದ್ವಹ ॥ ೪೫ ॥**

---

ಅವಸ್ಥೆಗಳು ಇವೆಲ್ಲವನ್ನೂ ವೇದಶಬ್ದಗಳನ್ನು ಅನುಸಂಧಾನಮಾಡಿಕೊಂಡೇ ಸೃಷ್ಟ್ಯಾದಿಯಲ್ಲಿ ಪ್ರತ್ಯೇಕಪ್ರತ್ಯೇಕವಾಗಿ ನಿರ್ಮಿಸಿದನು.

ಹಿಂದಿನ ಸೃಷ್ಟಿಯಲ್ಲಿ ಆಚರಿಸಿದ ತಮ್ಮ ಸತ್ಕರ್ಮಗಳಿಂದ ದೇವತೆಗಳಾಗಿ ಸೃಷ್ಟರಾದ ಇಂದ್ರ ಮೊದಲಾದ ಶರೀರಿಗಳಿಗೆ ವೇದಶಬ್ದಗಳಿಂದಲೇ ನಾಮಗಳನ್ನೂ ಅನುರೂಪವಾದ ಅವಸ್ಥೆಗಳನ್ನೂ ಸಹ ಆ ಪ್ರಭುವು ಸೃಷ್ಟಿಸಿದನು.

೪೩. ಅಯ್ಯಾ ಕುರುವಂಶದ ರಾಜನೇ! ತುಷಿತಾ ಎಂಬ ದೇವತೆಗಳ ಒಂದು ಗಣವನ್ನೂ, ಪುರಾತನವಾದ ಯಜ್ಞವನ್ನೂ, ಗೂಢವೂ, ಪುರಾತನವೂ ಆದ ವೇದವನ್ನೂ ಯೋಗ್ಯರಾದವರಿಗೆ ಕೊಟ್ಟನು.

೪೪. ಇದಲ್ಲದೆ ಈ ಯಜ್ಞಸಿದ್ಧಿಗೋಸ್ಕರ ಋಗ್ಯಜುಸ್ಸಾಮಗಳನ್ನೂ ಕಾಲವನ್ನೂ, ಕಾಲವಿಭಾಗಗಳನ್ನೂ, ಗ್ರಹಗಳನ್ನೂ, ಋತುಗಳನ್ನೂ ಸಹ ಸೃಷ್ಟಿಸಿದನು.

೪೫. ಮುಂದೆ ನಾನಾಬಗೆಯ ಪ್ರಜಾ ಸೃಷ್ಟಿಮಾಡುವ ಉದ್ದೇಶವಿಟ್ಟುಕೊಂಡು ಅವರ ಉಪಭೋಗಕ್ಕಾಗಿ ನದಿಗಳನ್ನೂ, ಸಮುದ್ರಗಳನ್ನೂ, ಬೆಟ್ಟಗಳನ್ನೂ, ಹಳ್ಳತಿಟ್ಟುಗಳಾದ ಭೂಪ್ರದೇಶಗಳನ್ನೂ, ಕಾಮ, ಕ್ರೋಧ, ವಾಕ್, ರತಿ, ಇವುಗಳನ್ನೂ ಸಹ ಸೃಷ್ಟಿಸಿದನು.

**ಸೃಷ್ಟಿಂ ಸಸರ್ಜ ರಾಜೇಂದ್ರ ಸಿಸೃಕ್ಷುರ್ವಿವಿಧಾಃ ಪ್ರಜಾಃ ।**
**ಧರ್ಮಾಧರ್ಮೌ ವಿವೇಕಾಯ ಕರ್ಮಣಾಂ ಚ ತಥಾಸೃಜತ್ ॥ ೪೬ ॥**

**ಸುಖದುಃಖಾದಿಭಿರ್ದ್ವಂದ್ವೈಃ ಪ್ರಜಾಶ್ಚೇಮಾನ್ಯಯೋಜಯತ್ ।**
**ಅಣ್ವ್ಯೋ ಮಾತ್ರಾವಿನಾಶಿನ್ಯೋ ದಶಾರ್ಧಾನಾಂ ತು ಯಾಃ ಸ್ಮೃತಾಃ ।**
**ತಾಭಿಃ ಸರ್ವಮಿದಂ ವೀರ ಸಂಭವತ್ಯನು ಪೂರ್ವಶಃ ॥ ೪೭ ॥**

**ಯತ್ಕೃತಂ ತು ಪುರಾ ಕರ್ಮ ಸಂನಿಯುಕ್ತೇನ ವೈ ನೃಪ ॥ ೪೮ ॥**

**ಸ ತದೇವ ಸ್ವಯಂ ಭೇಜೇ ಸೃಜ್ಯಮಾನಂ ಪುನಃ ಪುನಃ ।**
**ಹಿಂಸ್ರಾಹಿಂಸ್ರೇ ಮೃದುಕ್ರೂರೇ ಧರ್ಮಾಧರ್ಮೇ ಋತಾನೃತೇ ॥ ೪೯ ॥**

**ಯದ್ಯಥಾಸ್ಯಾಭವತ್ಸರ್ಗೇ ತತ್ತಸ್ಯ ಸ್ವಯಮಾವಿಶತ್ ।**
**ಯಥಾ ಚ ಲಿಂಗಾನ್ಯೃತವಃ ಸ್ವಯಮೇವಾನುಪರ್ಯಯೇ ॥ ೫೦ ॥**

**ಸ್ವಾನಿಸ್ವಾನ್ಯಭಿಪದ್ಯಂತೇ ತಥಾ ಕರ್ಮಾಣಿ ದೇಹಿನಃ ।**
**ಲೋಕಸ್ಯೇಹ ವಿವೃದ್ಧ್ಯರ್ಥಂ ಮುಖಬಾಹೂರುಪಾದತಃ ॥ ೫೧ ॥**

---

೪೬. ಅಧರ್ಮದಿಂದ ಧರ್ಮವನ್ನು ಪ್ರತ್ಯೇಕಿಸಿ ತಿಳಿದುಕೊಳುವುದಕ್ಕಾಗಿ ಆ ಪ್ರಭುವು ಧರ್ಮಾಧರ್ಮಗಳನ್ನು ಸೃಷ್ಟಿಸಿದನು.

೪೭. ಓ ಶೂರನಾದ ಪ್ರಭುವೇ ! ಈ ಪ್ರಜೆಗಳಿಗೆ ಸುಖ, ದುಃಖ, ಕ್ಷುತ್ತು (ಹಸಿವು) ಪಿಪಾಸೆ (ಬಾಯಾರಿಕೆ) ಇವೇ ಮೊದಲಾದ ದ್ವಂದ್ವ ದುಃಖಗಳನ್ನು ಸೇರಿಸಿದನು. ನಾಶವಾಗ್ತುವ ಐದು ಭೂತಗಳ ಅಣುವಾದ ಸೂಕ್ಷ್ಮಾಂಶಗಳಿಂದಲೇ ಕ್ರಮವಾಗಿ ಈ ಸಮಸ್ತ ಜಗತ್ತೂ ಸೃಷ್ಟವಾಯಿತು.

೪೮–೫೨. ಪೂರ್ವದಲ್ಲಿ ಶರೀರಿಯು ಈಶ್ವರ ಪ್ರೇರಿತನಾಗಿ ಯಾವ ಕರ್ಮವನ್ನು ಮಾಡಿ ಆ ವಾಸನೆ ಅವನಲ್ಲಿರುತ್ತಿದ್ದಿತೋ ಪುನಃ ಸೃಷ್ಟಿಮಾಡಲ್ಪಟ್ಟಾಗಲೂ ಪೂರ್ವಜನ್ಮ ವಾಸನಾನುಸಾರವಾಗಿ ಅದೇ ಕರ್ಮವನ್ನು ಹೊಂದುತ್ತಾನೆ. ಹಿಂಸಾಕರ ಹಿಂಸಾಕರವಲ್ಲದ್ದು ; ಮೃದು, ಕ್ರೂರ ; ಪುಣ್ಯ, ಪಾಪ ; ನಿಜ, ಸುಳ್ಳು ; ಇವುಗಳಲ್ಲಿ ಪೂರ್ವಸೃಷ್ಟಿ ಕಾಲದಲ್ಲಿ ಶರೀರಿಗೆ ಯಾವುದು ಹೇಗೆ ಉಂಟಾಗಿದ್ದಿತೋ ಅವು ತಾನಾಗಿಯೇ ಬಂದು ಸೇರುತ್ತವೆ. ಪೂರ್ವ ಸೃಷ್ಟಿಯಲ್ಲಿ ಯಾವ ಯಾವ ಋತುಗಳಲ್ಲಿ ಯಾವ

ಬ್ರಹ್ಮ ಕ್ಷತ್ರಂ ತಥಾಚೋಭೌ ವೈಶ್ಯಶೂದ್ರೌ ನೃಪೋತ್ತಮ ।
ಮುಖಾನಿ ಯಾನಿ ಚತ್ವಾರಿ ತೇಭ್ಯೋ ವೇದಾ ವಿನಿಃಸೃತಾಃ ॥ ೫೨ ॥

ಋಗ್ವೇದಸಂಹಿತಾ ತಾತ ವಸಿಷ್ಠೇನ ಮಹಾತ್ಮನಾ ।
ಪೂರ್ವಾನ್ಮುಖಾನ್ಮಹಾಬಾಹೋ ದಕ್ಷಿಣಾಚ್ಚಾಪಿ ವೈ ಶೃಣು ॥ ೫೩ ॥

ಯಜುರ್ವೇದೋ ಮಹಾರಾಜ ಯಾಜ್ಞವಲ್ಕ್ಯೇನ ವೈ ಸಹ ।
ಸಾಮಾನಿ ಪಶ್ಚಿಮಾತ್ತತ್ರ ಗೌತಮಶ್ಚ ಮಹಾನ್ ಋಷಿಃ ॥ ೫೪ ॥

ಅಥರ್ವವೇದೋ ರಾಜೇಂದ್ರ ಮುಖಾಚ್ಚಾಪ್ಯುತ್ತರಾನ್ನೃಪ ।
ಋಷಿಶ್ಚಾಪಿ ತಥಾ ರಾಜನ್ ಶೌನಕೋ ಲೋಕಪೂಜಿತಃ ॥ ೫೫ ॥

ಯತ್ತನ್ಮುಖಂ ಮಹಾಬಾಹೋ ಪಂಚಮಂ ಲೋಕವಿಶ್ರುತಂ ।
ಅಷ್ಟಾದಶಪುರಾಣಾನಿ ಸೇತಿಹಾಸಾನಿ ಭಾರತ ॥ ೫೬ ॥

---

ಯಾವ ಚಿಹ್ನೆಗಳು ನಿಯತವಾಗಿದ್ದವೋ ಪ್ರಳಯವಾಗಿ ಪುನಃ ಸೃಷ್ಟಿಯಾದಾಗಲೂ ಆಯಾ ಋತುಗಳಿಗೆ ಆಯಾ ಚಿಹ್ನೆಗಳು ಪೂರ್ವ ಸೃಷ್ಟಿಯಲ್ಲಿದ್ದಂತೆಯೇ ಸೇರುತ್ತವೆ. ಹಾಗೆ ಪ್ರಾಣಿಗಳಿಗೆ ಪೂರ್ವಕರ್ಮವಾಸನಾನುಸಾರ ಕರ್ಮಗಳು ಬಂದು ಸೇರುತ್ತವೆ.

೫೩–೫೪. ಎಲೈ ರಾಜಶ್ರೇಷ್ಠನೇ! ಬ್ರಹ್ಮನ ಪೂರ್ವ ಮುಖದಿಂದ ಋಗ್ವೇದ ಸಂಹಿತೆಯು ಮಹಾತ್ಮನಾದ ವಸಿಷ್ಠಮಹರ್ಷಿಗೋಸ್ಕರವೂ ದಕ್ಷಿಣ ಮುಖದಿಂದ ಯಜುರ್ವೇದ ಸಂಹಿತೆಯು ಯಾಜ್ಞವಲ್ಕ್ಯರಿಗಾಗಿಯೂ ಪಶ್ಚಿಮ ಮುಖದಿಂದ ಸಾಮವೇದ ಸಂಹಿತೆಯು ಗೌತಮ ಮಹರ್ಷಿಗೋಸ್ಕರವಾಗಿಯೂ,

೫೫. ಹಾಗೆಯೇ ಉತ್ತರ ಮುಖದಿಂದ ಅಥರ್ವವೇದ ಸಂಹಿತೆಯು ಲೋಕ ಲೋಕಪೂಜಿತರಾದ ಶೌನಕಮಹರ್ಷಿಗಾಗಿಯೂ ಆವಿರ್ಭಾವವಾದುವು.

೫೬. ಎಲೈ ಕುರುವಂಶದಲ್ಲಿ ಹುಟ್ಟಿದ ರಾಜೇಂದ್ರನೇ ! ಬ್ರಹ್ಮನ ಐದನೆಯ ಮುಖದಿಂದ ಲೋಕಪ್ರಸಿದ್ಧವಾದ ಇತಿಹಾಸಸಹಿತಗಳಾಗಿ ಹದಿನೆಂಟು ಪುರಾಣಗಳೂ ಹೊರಟುವು.

ನಿರ್ಗತಾನಿ ತತಸ್ತಸ್ಮಾನ್ಮುಖಾತ್ ಕುರುಕುಲೋದ್ವಹ ।
ತಥಾನ್ಯಾಃ ಸ್ಮೃತಯಶ್ಚಾಪಿ ಯಮಾದ್ಯಾ ಲೋಕ ಪೂಜಿತಾಃ ॥ ೫೭ ॥

ತತಸ್ಸ ಭಗವಾನ್ ದೇವೋ ದ್ವಿಧಾ ದೇಹಮಕಾರಯತ್ ।
ದ್ವಿಧಾ ಕೃತ್ವಾಽಽತ್ಮನೋ ದೇಹಂ ಅರ್ಧೇನ ಪುರುಷೋಽಭವತ್ ॥ ೫೮ ॥

ಅರ್ಧೇನ ನಾರೀ ತಸ್ಯಾಂ ಚ ವಿರಾಜಮಸೃಜತ್ಪ್ರಭುಃ ।
ತಪಸ್ತಪ್ತ್ವಾಽಸೃಜದ್ಯಂ ತು ಸ ಸ್ವಯಂ ಪುರುಷೋ ವಿರಾಟ್ ॥ ೫೯ ॥

ಸ ಚಕಾರ ತಪೋ ರಾಜನ್ ಸಿಸೃಕ್ಷುರ್ವಿವಿಧಾಃ ಪ್ರಜಾಃ ।
ಪತೀನ್ ಪ್ರಜಾನಾಮಸೃಜತ' ಮಹರ್ಷೀನಾದಿತೋ ದಶ ॥ ೬೦ ॥

ನಾರದಂ ಚ ಭೃಗುಂ ತಾತ ಕಂ ಪ್ರಚೇತಸಮೇವ ಹಿ ।
ಪುಲಹಂ ಕ್ರತುಂ ಪುಲಸ್ತ್ಯಂ ಚ ಅತ್ರಿಮಂಗಿರಸಂ ತಥಾ ॥ ೬೧ ॥

ಮರೀಚಿಂ ಚಾಪಿ ರಾಜೇಂದ್ರ ಯೋಸಾವಾದ್ಯಃ ಪ್ರಜಾಪತಿಃ ।
ಏತಾಂಶ್ಚಾನ್ಯಾಂಶ್ಚ ರಾಜೇಂದ್ರ ಅಸೃಜದ್ಭೂರಿ ತೇಜಸಃ ॥ ೬೨ ॥

---

೫೭. ಹಾಗೆಯೇ ಲೋಕಪೂಜಿತವಾದ ಯಮಾದಿ ಇತರ ಸ್ಮೃತಿಗಳೂ ಕೂಡ ಆ ಐದನೆಯ ಮುಖದಿಂದಲೇ ಹೊರಟುವು.

೫೮. ಆಮೇಲೆ ಆ ಭಗವಂತನು ತನ್ನ ದೇಹವನ್ನು ಎರಡುಭಾಗ ಮಾಡಿ ಕೊಂಡು ಅರ್ಧಭಾಗದಿಂದ ಪುರುಷನನ್ನು ನಿರ್ಮಾಣಮಾಡಿದನು.

೫೯. ಉಳಿದ ಅರ್ಧಭಾಗದಿಂದ ಸ್ತ್ರೀಯನ್ನು ನಿರ್ಮಿಸಿ ಸಂಕಲ್ಪಪೂರ್ವಕ ವಾಗಿ ಯಾವನನ್ನು ಆ ಸ್ತ್ರೀಯಲ್ಲಿ ಸೃಷ್ಟಿಸಿದನೋ ಅವನೇ ವಿರಾಟ್ಪುರುಷನಾದನು.

೬೦. ಪರಮಾತ್ಮನ ಶಕ್ತಿಯಿಂದ ಸೃಷ್ಟಿಸಲ್ಪಟ್ಟ ಆ ವಿರಾಟ್ಪುರುಷನು ತಾನು ಬಗೆಬಗೆಯ ಪ್ರಜೆಗಳನ್ನು ಸೃಷ್ಟಿಮಾಡಲು ಸಂಕಲ್ಪಿಸಿ ಮೊದಲು ಮಹರ್ಷಿಗಳಾದ ಮರೀಚ್ಯಾದಿ ಹತ್ತುಜನ ಪ್ರಜಾಪತಿಗಳನ್ನು ಸೃಷ್ಟಿಮಾಡಿದನು.

೬೧-೬೨. ಆದಿಯಲ್ಲಿ ವಿರಾಟ್ಪುರುಷನು ನಾರದ, ಭೃಗು, ವಸಿಷ್ಠ, ಪ್ರಚೇತಸ, ಪುಲಹ, ಕ್ರತು, ಪುಲಸ್ತ್ಯ, ಅತ್ರಿ, ಅಂಗಿರಸ, ಮರೀಚಿ ಎಂಬ ಈ ಹತ್ತುಜನ ಮಹ ರ್ಷಿಗಳನ್ನು ಸೃಷ್ಟಿಸಿದನು. ಇವರಲ್ಲಿ ಮರೀಚಿಯು ಮೊದಲನೆಯ ಪ್ರಜಾಪತಿ. ಇವರ ಜೊತೆಗೆ ತುಂಬಾ ತೇಜೋವಂತರಾದ ಇತರರನ್ನೂ ಸೃಷ್ಟಿಮಾಡಿದನು.

**ಅಥ ದೇವಾನ್ ಋಷೀನ್ ದೈತ್ಯಾನ್ ಸೋಽಸೃಜತ್ಕುರುನಂದನ ।**
**ಯಕ್ಷರಕ್ಷಃಪಿಶಾಚಾಂಶ್ಚ ಗಂಧರ್ವಾಪ್ಸರಸೋ ಸುರಾನ್ ॥ ೬೩ ॥**

**ಮನುಷ್ಯಾಣಾಂ ಪಿತೄಣಾಂಶ್ಚ ಸರ್ಪಾಣಾಂಶ್ಚೈವ ಭಾರತ ।**
**ನಾಗಾನಾಂ ಚ ಮಹಾಬಾಹೋ ಸಸರ್ಜ ವಿವಿಧಾನ್ ಗಣಾನ್ ॥ ೬೪ ॥**

**ಕ್ಷಣರುಚೋಽಶನಿಗಣಾನ್ ರೋಹಿತೇಂದ್ರಧನೂಂಷಿ ಚ ।**
**ಧೂಮಕೇತೂಂಸ್ತಥಾ ಚೋಲ್ಕಾ ನಿರ್ವಾತಾನ್ ಜ್ಯೋತಿಷಾಂ ಗಣಾನ್ ॥ ೬೫ ॥**

**ಮನುಷ್ಯಾನ್ ಕಿನ್ನರಾನ್ ಮತ್ಸ್ಯಾನ್ ವರಾಹಾಂಶ್ಚ ವಿಹಂಗಮಾನ್ ।**
**ಗಜಾನಶ್ವಾನಥ ಪಶೂನ್ ಮೃಗಾನ್ ವ್ಯಾಲಾಂಶ್ಚ ಭಾರತ ॥ ೬೬ ॥**

**ಕೃಮಿಕೀಟಪತಂಗಾಶ್ಚ ಯೂಕಾಲಿಕ್ಷಕಮತ್ಕುಣಾನ್ ।**
**ಸರ್ವಂ ಚ ದಂಶಮಶಕಂ ಸ್ಥಾವರಂ ಚ ಪೃಥಗ್ವಿಧಂ ॥ ೬೭ ॥**

---

೬೩-೬೪. ಅಯ್ಯಾ ಕುರುನಂದನನೇ ! ಅನಂತರ ದೇವತೆಗಳು- ಋಷಿಗಳು, ದೈತ್ಯರು, ಯಕ್ಷರು, ರಾಕ್ಷಸರು, ಪಿಶಾಚರು, ಗಂಧರ್ವರು, ಅಪ್ಸರಸರು, ಅಸುರರು, ಮನುಷ್ಯರು, ಪಿತೃಗಳು, ಸರ್ಪಗಳು, ನಾಗರು ಇವರುಗಳ ಬಗೆಬಗೆಯಾದ ಗಣಗಳನ್ನು ಸೃಷ್ಟಿಮಾಡಿದನು.

೬೫. ಹೀಗೆಯೇ ಮಿಂಚು, ಸಿಡಿಲು, ಕೆಂಪಾದ ಕಾಮನಬಿಲ್ಲು, ಧೂಮಕೇತು ಉಲ್ಕಾಪಾತಗಳು, ವಾಯುಸಂಬಂಧವಿಲ್ಲದ ತೇಜಃಪುಂಜಗಳ ಸಮೂಹ ಎಂದರೆ ಚಂದ್ರ ನಕ್ಷತ್ರಾದಿಗಳು ಮುಂತಾದವುಗಳನ್ನು ಸೃಷ್ಟಿಸಿದನು.

೬೬-೬೭. ಅದಲ್ಲದೆ ಮನುಷ್ಯರು, ಕಿನ್ನರರು, ಮೀನುಗಳು, ವರಾಹಗಳು, ಪಕ್ಷಿಗಳು, ಆನೆ, ಕುದುರೆ, ದನಗಳು, ಮೃಗಗಳು, ಸರ್ಪಗಳು, ಕ್ರಿಮಿಗಳು, ಕೀಟಗಳು ಪತಂಗಗಳು, ಹೇನು, ಕೂರೆ, ತಿಗಣೆಗಳು, ಕಾಡುನೊಣ, ಸಾಮಾನ್ಯನೊಣ ಮುಂತಾದ ಪ್ರಾಣಿಗಳನ್ನೂ ಮತ್ತು ಬೇರೆ ನಾನಾಜಾತೀಯವಾದ ಸ್ಥಾವರ ವಸ್ತುಗಳನ್ನೂ ನಿರ್ಮಿಸಿದನು.

**ಏವಂ ಸ ಭಾಸ್ಕರೋ ದೇವಃ ಸಸರ್ಜ ಭುವನತ್ರಯಂ ।**
**ಯೇಷಾಂ ತು ಯಾದೃಶಂ ಕರ್ಮ ಭೂತಾನಾಮಿಹ ಕೀರ್ತಿತಂ　　॥ ೬೮ ॥**

**ಕಥಯಿಷ್ಯಾಮಿ ತತ್ಸರ್ವಂ ಕ್ರಮಯೋಗಂ ಚ ಜನ್ಮನಿ ।**
**ಗಜಾ ವ್ಯಾಲಾ ಮೃಗಾಸ್ತಾತ ಪಶವಶ್ಚ ಪೃಥಗ್ವಿಧಾಃ　　॥ ೬೯ ॥**

**ಪಿಶಾಚಾ ಮಾನುಷಾಸ್ತಾತ ರಕ್ಷಾಂಸಿ ಚ ಜರಾಯುಜಾಃ ।**
**ದ್ವಿಜಾಸ್ತು ಅಂಡಜಾ ಸ್ಸರ್ಪಾ ನಕ್ರಾ ಮತ್ಸ್ಯಾಃ ಸಕಚ್ಛಪಾಃ　　॥ ೭೦ ॥**

**ಏವಂ ವಿಧಾನಿ ಯಾನೀಹ ಸ್ಥಲಜಾನ್ಯೌದಕಾನಿ ಚ ।**
**ಸ್ವೇದಜಂ ದಂಶಮಶಕಂ ಯೂಕಾಲಿಕ್ಷಕಮತ್ಕುಣಾಃ　　॥ ೭೧ ॥**

**ಊಷ್ಮಣಾ ಚೋಪಜಾಯಂತೇ ಯಚ್ಚಾನ್ಯತ್ಕಿಂಚಿದೀದೃಶಂ ।**
**ಉದ್ಭಿಜ್ಜಾಃ ಸ್ಥಾವರಾಃ ಸರ್ವೇ ಬೀಜಕಾಂಡಪ್ರರೋಹಿಣಃ　　॥ ೭೨ ॥**

---

೬೮. ಹೀಗೆ ತೇಜಸ್ವಿಯಾದ ಪರಮಾತ್ಮನು ಲೋಕತ್ರಯವನ್ನೂ ಸೃಷ್ಟಿ ಮಾಡಿದನು. ಈ ಜನ್ಮದಲ್ಲಿ ಯಾವ ಯಾವ ಪ್ರಾಣಿಗಳಿಗೆ ಯಾವ ಯಾವ ಕರ್ಮವು ಇಲ್ಲಿ ನಿಯಮಿತವಾಗಿದೆಯೋ ಅವುಗಳೆಲ್ಲವನ್ನೂ ಹೇಳುವೆನು ಕೇಳು.

೬೯. ಅದಲ್ಲದೆ ಆನೆ, ದುಷ್ಟಮೃಗಗಳು, ನಾನಾ ಪಶುಗಳು ಇವುಗಳ ಜನ್ಮವನ್ನೂ ಮತ್ತು ಅವುಗಳ ಕ್ರಮಯೋಗವೆಲ್ಲವನ್ನೂ ಹೇಳುತ್ತೇನೆ ಕೇಳು.

೭೦-೭೧. ಪಿಶಾಚರು, ಮನುಷ್ಯರು, ರಾಕ್ಷಸರು, ಇವರೆಲ್ಲಾ ಜರಾಯುಜರು ಎಂದರೆ ಗರ್ಭಕೋಶದಿಂದ ಜನಿಸಿದವರು. ಪಕ್ಷಿಗಳು, ಸರ್ಪಗಳು, ಮೊಸಳೆ, ಮೀನು, ಆಮೆ, ಇವೇ ಮೊದಲಾದವುಗಳು ಅಂಡಜಗಳು. ಇವುಗಳಲ್ಲಿ ಕೆಲವು ಭೂಚರಗಳು (ಎಂದರೆ ಭೂಮಿಯಲ್ಲಿ ಸಂಚರಿಸುವವುಗಳು); ಕೆಲವು ಜಲಚರಗಳು; ಕೂರೆ, ತಗಣೆ, ಹೇನು, ಕಚ್ಚುವಸೊಳ್ಳೆ, ನೊಣ ಇವೇ ಮೊದಲಾದುವುಗಳು ಬೆವರಿನಿಂದ ಉಂಟಾಗತಕ್ಕವುಗಳು.

೭೨. ಇನ್ನೂ ಇತರ ಎಷ್ಟೋ ಪ್ರಾಣಿಗಳು ಸೆಕೆಯಿಂದ ಹುಟ್ಟುತ್ತವೆ. ಬೀಜಗಳಿಂದಲೂ, ಕಾಂಡಗಳಿಂದಲೂ ಹುಟ್ಟುವ ಸ್ಥಾವರವಸ್ತುಗಳೆಲ್ಲವೂ ಉದ್ಭಿಜ್ಜಗಳೆನಿಸುವುವು.

ಓಷಧ್ಯಃ ಫಲಪಾಕಾಂತಾಃ ನಾನಾವಿಧ ಫಲೋಪಗಾಃ ।
ಅಪುಷ್ಪಾಃ ಫಲವಂತೋ ಯೇ ತೇ ವನಸ್ಪತಯಃ ಸ್ಮೃತಾಃ ॥ ೭೩ ॥

ಪುಷ್ಪಿಣಃ ಫಲಿನಶ್ಚೈವ ವೃಕ್ಷಾಸ್ತೂಭಯತಃ ಸ್ಮೃತಾಃ ।
ಗುಚ್ಛಗುಲ್ಮಂ ತು ವಿವಿಧಂ ತಥೈವ ತೃಣ ಜಾತಯಃ ॥ ೭೪ ॥

ಬೀಜಕಾಂಡರುಹಾಣ್ಯೇವ ಪ್ರತಾನಾ ವಲ್ಲ್ಯ ಏವ ಚ ।
ತಮಸಾ ಬಹುರೂಪೇಣ ವೇಷ್ಟಿತಾಃ ಕರ್ಮಹೇತುನಾ ॥ ೭೫ ॥

ಅಂತಸ್ಸಂಜ್ಞಾ ಭವಂತ್ಯೇತೇ ಸುಖದುಃಖಸಮನ್ವಿತಾಃ ।
ಏತಾವತ್ಯಸ್ತು ಗತಯಃ ಪ್ರೋದ್ಭೂತಾಃ ಕುರುನಂದನ ॥ ೭೬ ॥

---

೭೩. ಒಂದುಸಾರಿ ಫಲಬಿಟ್ಟಮೇಲೆ ನಾಶವಾಗುವ ಬಾಳೆ ಮುಂತಾದುವು ಓಷಧಿಗಳೆನಿಸುವವು. ಹೂಬಿಡದೇ ಕಾಯಿಯಾಗುವ ಬಗೆಬಗೆಯ ಫಲವೃಕ್ಷಗಳು ವನಸ್ಪತಿಗಳೆನಿಸುವವು.

೭೪. ಹೂವು, ಕಾಯಿ ಎರಡನ್ನೂ ಬಿಡುವ ಮರಗಳಿಗೂ ಓಷಧಿ, ವನಸ್ಪತಿ ಎಂದು ಎರಡು ಶಬ್ದಗಳಿಂದಲೂ ವ್ಯವಹರಿಸಬಹುದು. ತೃಣಜಾತಿಯಲ್ಲಿ ಗೊಂಚಲಾಗಿ ಬೆಳೆಯುವುದು, ಪೊದೆಯಾಗಿ ಬೆಳೆಯುವುದು ಮುಂತಾದ ನಾನಾ ಪ್ರಕಾರಗಳಿವೆ.

೭೫. ಬೀಜಗಳಿಂದ ಹುಟ್ಟುವ ಕುಂಬಳ ಮೊದಲಾದ ಹಂಬುಗಳಿಗೆ ಪ್ರತಾನವೆಂದು ಹೆಸರು. ಕಾಂಡಗಳಿಂದ ಹುಟ್ಟುವ ಮಲ್ಲಿಗೆ ಮೊದಲಾದುವುಗಳಿಗೆ ವಲ್ಲಿ (ಬಳ್ಳಿ) ಗಳೆಂದು ಹೆಸರು. ಅವು ತಮ್ಮ ಪಾಪಕರ್ಮದಿಂದ ಸುತ್ತುವರಿಯಲ್ಪಟ್ಟು ಈರೀತಿ ಜನ್ಮತಾಳಿದವಾಗಿವೆ.

೭೬. ಎಲೈ ಕುರುವಂಶಜನೇ! ಕೇಳು, ಇವುಗಳಿಗೂ ಸುಖದುಃಖಾದಿಗಳ ಪ್ರಾಪ್ತಿಯುಂಟಾದರೂ ಸುಖದುಃಖಜ್ಞಾನವು ಹೊರಗೆ ಕಾಣಿಸದೆ ಒಳಗೇ ಗೂಢವಾಗಿರುತ್ತವೆ. ಈರೀತಿಯಾಗಿ ಬ್ರಹ್ಮಸೃಷ್ಟಿಯಲ್ಲಿ ಸಕಲಪ್ರಾಣಿಗಳಿಗೂ ಗತಿ (ಆಯಾ ಯೋನಿಪ್ರಾಪ್ತಿ) ಗಳು ಇರುತ್ತವೆ.

**ತಸ್ಮಾದ್ದೇವಾ ದ್ದೀಪ್ತಿಮಂತೋ ಭಾಸ್ಕರಾಚ್ಚ ಮಹಾತ್ಮನಃ ।**
**ಘೋರೇಸ್ಮಿಂಸ್ತಾತ ಸಂಸಾರೇ ನಿತ್ಯಂ ಸತತಯಾಯಿನಿ　　॥ ೭೭ ॥**

**ಏವಂ ಸರ್ವಂ ಸ ಸೃಷ್ಟ್ವೇದಂ ರಾಜಲ್ಲೋಕಗುರುಂ ಪರಂ ।**
**ತಿರೋಭೂತಃ ಸ ಭೂತಾತ್ಮಾ ಕಾಲಂ ಕಾಲೇನ ಪೀಡಯನ್　　॥ ೭೮ ॥**

**ಯದಾ ಸ ದೇವೋ ಜಾಗರ್ತಿ ತದೇದಂ ಚೇಷ್ಟತೇ ಜಗತ್ ।**
**ಯದಾ ಸ್ವಪಿತಿ ಶಾಂತಾತ್ಮಾ ತದಾ ಸರ್ವಂ ನಿಮೀಲತಿ　　॥ ೭೯ ॥**

**ತಸ್ಮಿನ್ ಸ್ವಪಿತಿ ರಾಜೇಂದ್ರ ಜಂತವಃ ಕರ್ಮಬಂಧನಾಃ ।**
**ಸ್ವಕರ್ಮಭ್ಯೋ ನಿವರ್ತಂತೇ ಮನಶ್ಚ ಗ್ಲಾನಿಮೃಚ್ಛತಿ　　॥ ೮೦ ॥**

---

೭೭. ತೇಜಸ್ವರೂಪನಾದ ಆ ಬ್ರಹ್ಮನಿಂದಲೇ ಪ್ರಕಾಶಸ್ವರೂಪರಾದ ದೇವತೆಗಳೂ ಹುಟ್ಟಿದರು. ನಿತ್ಯವೂ ಎಡೆಬಿಡದೆ ಸಾಗುತ್ತಿರುವ ಈ ಭಯಂಕರವಾದ ಸಂಸಾರದಲ್ಲಿ ಸಕಲ ಚೇತನಾಚೇತನಗಳೂ ಸಿಲುಕಿ ಇವೆ.

೭೮. ಎಲೈ ರಾಜನೇ! ಸಕಲಭೂತಗಳಿಗೂ ಆತ್ಮಸ್ವರೂಪನಾದ ಪರಮಾತ್ಮನು ಹೀಗೆ ಪ್ರಪಂಚವನ್ನೆಲ್ಲವನ್ನೂ ಮತ್ತು ಲೋಕಗುರುಗಳಾದ ಮರೀಚ್ಯಾದಿ ಪ್ರಜಾಪತಿಗಳನ್ನೂ ಸೃಷ್ಟಿಸಿ, ಕಾಲಕ್ರಮದಲ್ಲಿ ಸೃಷ್ಟವಸ್ತುಗಳನ್ನೂ ಮತ್ತು ಸೃಷ್ಟಿಯ ಕಾಲವನ್ನೂ ನಾಶಮಾಡಿ ಅನಂತರ ತಾನು ಅಲ್ಲಿಯೇ ಅಂತರ್ಧಾನನಾಗುವನು.

೭೯. ಆ ಸ್ವಾಮಿಯು ಎಚ್ಚತ್ತಿರುವಾಗ ಈ ಜಗತ್ತು ಸೃಷ್ಟವಾಗಿ ತಮ್ಮ ತಮ್ಮ ಕೆಲಸದಲ್ಲಿ ನಿರತವಾಗಿರುತ್ತದೆ. ಶಾಂತಾತ್ಮನಾಗಿ ಅವನು ನಿದ್ರಿಸುವಾಗ ಇವೆಲ್ಲವೂ ಲಯವಾಗುತ್ತವೆ.

೮೦. ಎಲೈ ರಾಜನೇ ಕೇಳು ! ಆ ಪರಮಾತ್ಮನು ನಿದ್ರಾವಶನಾದಾಗ ಪುಣ್ಯಪಾಪಗಳ ಬಂಧನಕ್ಕೊಳಗಾದ ಜೀವರು ತಮ್ಮ ಕರ್ಮಫಲವನ್ನು ಭೋಗಿಸದೆ ಉದಾಸೀನವಾಗಿರುತ್ತಾರೆ. ಅವುಗಳ ಮನಸ್ಸುಗಳು ಗ್ಲಾನಿಹೊಂದಿ ನಿರ್ವ್ಯಾಪಾರವಾಗಿರುತ್ತವೆ.

ಯುಗಪತ್ತು ಪ್ರಲೀಯಂತೇ ಯದಾ ತಸ್ಮಿನ್ ಮಹಾತ್ಮನಿ ।
ತದಾಯಂ ಸರ್ವ ಭೂತಾತ್ಮಾ ಸುಖಂ ಸ್ವಪಿತಿ ಭಾರತ ॥ ೮೧ ॥

ತಮೋ ಯದಾ ಸಮಾಶ್ರಿತ್ಯ ಚಿರಂ ತಿಷ್ಠತಿ ಸೇಂದ್ರಿಯಃ ।
ನ ನವಂ ಕುರುತೇ ಕರ್ಮ ತದೋತ್ಕ್ರಾಮತಿ ಮೂರ್ತಿತಃ ॥ ೮೨ ॥

ಯದಾಯಂ ಮಾತ್ರಿಕೋ ಭೂತ್ವಾ ಬೀಜಂ ಸ್ಥಾಸ್ನು ಚರಿಷ್ಣು ಚ ।
ಸಮಾವಿಶತಿ ಸಂಸೃಷ್ಟಸ್ತದಾ ಮೂರ್ತಿಂ ವಿಮುಂಚತಿ ॥ ೮೩ ॥

ಏವಂ ಸ ಜಾಗ್ರತ್ಸ್ವಪ್ನಾಭ್ಯಾಮಿದಂ ಸರ್ವಂ ಜಗತ್ಪ್ರಭುಃ ।
ಸಂಜೀವಯತಿ ಚಾಜಸ್ರಂ ಪ್ರಮಾಪಯತಿ ಚಾವ್ಯಯಃ ॥ ೮೪ ॥

ಕಲ್ಪಾದೌ ಸೃಜತೇ ತಾತ ಅಂತೇ ಕಲ್ಪಸ್ಯ ಸಂಹರೇತ್ ।
ದಿನಂ ತಸ್ಯೇಹ ಯತ್ತಾತ ಕಲ್ಪಾಂತಮಿತಿ ಕಥ್ಯತೇ ॥ ೮೫ ॥

---

೮೧. ಎಲೈ ಭರತವಂಶಜನೇ! ಯಾವಾಗ ಇವೆಲ್ಲವೂ ಆ ಮಹಾತ್ಮನಲ್ಲಿ ಒಟ್ಟಿಗೆ ಅಡಗಿರುತ್ತವೆಯೋ ಆವಾಗ ಸರ್ವಭೂತಾತ್ಮನಾದ ಆ ಪರಮಾತ್ಮನು ಸುಖವಾಗಿ ನಿದ್ರಿಸುತ್ತಾನೆ.

೮೨. ಇಂದ್ರಿಯಗಳೊಡನೆ ಕೂಡಿದ ಮಾಯಾಮಾತ್ರದಿಂದ ಆಶ್ರಿತನಾಗಿ ಯಾವಾಗ ಆ ಪರಮಾತ್ಮನು ಹೊಸಕೆಲಸವನ್ನೇನೂ ಮಾಡುವುದಿಲ್ಲವೋ ಆಗ ಈ ಶರೀರದಿಂದ ಉತ್ಕ್ರಾಂತನಾಗುವನು.

೮೩. ಸ್ಥಾವರ ಜಂಗಮಾತ್ಮಕವಾದ ಶರೀರಗಳಿಗೆ ಕಾರಣೀಭೂತವಾದ ಮಾಯೆಯನ್ನೇ ಆಶ್ರಯಿಸಿ ಕೇವಲ ಮಾಯಾಸಂಸ್ಪೃಷ್ಟನಾಗಿ ಯಾವಾಗ ಇರುವನೋ ಆಗ ಈ ಸ್ಥೂಲ ಶರೀರವನ್ನು ಪರಿತ್ಯಾಗಮಾಡುತ್ತಾನೆ.

೮೪. ಸ್ವಯಂ ನಿರ್ವಿಕಾರನೂ ಜಗತ್ಪ್ರಭುವೂ ಆದ ಪರಮಾತ್ಮನು ಈರೀತಿ ಇವುಗಳನ್ನೆಲ್ಲಾ ತನ್ನ ಜಾಗ್ರದವಸ್ಥೆಯಲ್ಲಿ ಸೃಷ್ಟಿಸಿ ಬದುಕಿಸುತ್ತಾನೆ. ನಿದ್ರಾವಸ್ಥೆಯಲ್ಲಿ ಲಯಮಾಡುತ್ತಾನೆ.

೮೫. ಪ್ರತಿಯೊಂದು ಕಲ್ಪದ ಮೊದಲಲ್ಲೂ ಹೀಗೆ ಸೃಷ್ಟಿಮಾಡಿ ಆ ಕಲ್ಪದ ಕೊನೆಯಲ್ಲಿ ಲಯಮಾಡುತ್ತಾನೆ. ಈ ಒಂದು ಕಲ್ಪಾಂತಕಾಲವು ಬ್ರಹ್ಮನಿಗೆ ಒಂದು ದಿನ. ಪ್ರಾಣಿಗಳಿಗೆ ಕಲ್ಪಾಂತವೆನಿಸುವುದು.

**ಕಾಲಸಂಖ್ಯಾಂ ತತಸ್ತಸ್ಯ ಕಲ್ಪಸ್ಯ ಶೃಣು ಭಾರತ ।**
**ನಿಮೇಷಾ ದಶಚಾಷ್ಟೌ ಚ ಅಕ್ಷ್ಣಃಕಾಷ್ಠಾ ನಿಗದ್ಯತೇ ॥ ೮೬ ॥**

**ತ್ರಿಂಶತ್ಕಾಷ್ಠಾಃ ಕಲಾಮಾಹುಃ ಕ್ಷಣಸ್ತ್ರಿಂಶತ್ಕಲಾಃ ಸ್ಮೃತಾಃ ।**
**ಮುಹೂರ್ತಮಥ ಮೌಹೂರ್ತಾ ವದಂತಿ ದ್ವಾದಶಕ್ಷಣಂ ॥ ೮೭ ॥**

**ತ್ರಿಂಶನ್ಮುಹೂರ್ತಮುದ್ದಿಷ್ಟಮಹೋರಾತ್ರಂ ಮನೀಷಿಭಿಃ ।**
**ಮಾಸಸ್ತ್ರಿಂಶದಹೋರಾತ್ರಂ ದ್ವೌದ್ವೌ ಮಾಸಾವೃತುಃ ಸ್ಮೃತಃ ॥ ೮೮ ॥**

**ಋತುತ್ರಯಮುಷ್ಣಯನಂ ಅಯನೇ ದ್ವೇ ತು ವತ್ಸರಃ ।**
**ಅಹೋರಾತ್ರೇ ವಿಭಜತೇ ಸೂರ್ಯೋ ಮಾನುಷ ದೈವಿಕೇ ॥ ೮೯ ॥**

**ರಾತ್ರಿಃ ಸ್ವಪ್ನಾಯ ಭೂತಾನಾಂ ಚೇಷ್ಟಾಯೈ ಕರ್ಮಣಾಮಹಃ ।**
**ಕರ್ಮಜ್ಯೇಷ್ಠಾಸ್ವಹಃ ಶುಕ್ಲಃ ಕೃಷ್ಣಃ ಸ್ವಪ್ನಾಯ ಶರ್ವರೀ ॥ ೯೦ ॥**

---

೮೬. ಅಯ್ಯಾ ಭರತಕುಲೋತ್ಪನ್ನನೇ! ಆ ಕಲ್ಪದ ಕಾಲಪರಿಮಾಣವನ್ನು ಹೇಳುವೆನು ಕೇಳು. ಹದಿನೆಂಟುಸಾರಿ ಕಣ್ಣುರೆಪ್ಪೆಹೊಡೆಯುವಷ್ಟು ಕಾಲಕ್ಕೆ ಕಾಷ್ಠಾ ಎಂದು ಹೆಸರು.

೮೭. ಮುವತ್ತು ಕಾಷ್ಠಗಳಿಗೆ ಒಂದುಕಲೆ ಎನ್ನುವರು. ಮುವತ್ತು ಕಲೆಗಳಿಗೆ ಒಂದು ಕ್ಷಣವೆಂದು ಹೆಸರು. ಇಂತಹ ಹನ್ನೆರಡು ಕ್ಷಣಗಳಿಗೆ ಒಂದು ಮುಹೂರ್ತವೆಂದು ಜ್ಯೋತಿಷ್ಕರು ಹೇಳುತ್ತಾರೆ.

೮೮. ಮುವ್ವತ್ತು ಮುಹೂರ್ತಕ್ಕೆ ಒಂದು ಹಗಲು ಮತ್ತು ಒಂದು ರಾತ್ರಿ ಎಂದು ಪ್ರಾಜ್ಞರು ಹೇಳುತ್ತಾರೆ. ಇಂತಹ ಮುವ್ವತ್ತು ಹಗಲು ರಾತ್ರಿಗಳಿಗೆ (ದಿನಗಳಿಗೆ) ಒಂದು ಮಾಸವೆಂದು ಹೆಸರು. ಎರಡು ಮಾಸಗಳಿಗೆ ಒಂದು ಋತು.

೮೯. ಮೂರು ಋತುಗಳಿಗೆ ಒಂದು ಅಯನ. ಎರಡು ಅಯನಗಳಿಗೆ ಒಂದು ವರ್ಷ. ಮಾನುಷ ಮತ್ತು ದೈವ ಸಂಬಂಧವಾದ ಅಹೋರಾತ್ರಿಗಳ ವಿಭಾಗಕ್ಕೆ ಈ ಪರಮಾತ್ಮನೇ ಸೂರ್ಯಸ್ವರೂಪನಾಗಿ ತನ್ನ ಉದಯಾಸ್ತಮಯದ್ವಾರಾ ಕಾರಣನಾಗಿರುವನು.

೯೦. ರಾತ್ರಿಯು ಪ್ರಾಣಿಗಳ ನಿದ್ರೆಗಾಗಿ ನಿಯಮಿತವಾಗಿದೆ. ಹಗಲು ವೈದಿಕ ಲೌಕಿಕ ಕರ್ಮಗಳಿಗಾಗಿ ಕ್ಲುಪ್ತವಾಗಿದೆ. ಶ್ರೌತ ಕರ್ಮಗಳಿಗೆ ಶುಕ್ಲಪಕ್ಷದ ಅಹಸ್ಸು ಉತ್ತಮವು, ಪಿತೃಕಾರ್ಯಕ್ಕೆ ಕೃಷ್ಣಪಕ್ಷದ ಅಹಸ್ಸು ಉತ್ತಮ. ಹದಿನೈದು ದಿನಗಳಿಗೆ ಒಂದುಪಕ್ಷ, ಎರಡು ಪಕ್ಷಗಳಿಗೆ ಒಂದುಮಾಸ (ತಿಂಗಳು).

ಪಿತ್ರ್ಯೇ ರಾತ್ರ್ಯಹನೀ ಮಾಸಃ ಪ್ರವಿಭಾಗಸ್ತು ಪಕ್ಷಯೋಃ ।
ದೈವೇ ರಾತ್ರ್ಯಹನೀ ವರ್ಷಂ ಪ್ರವಿಭಾಗಸ್ತ್ವಯನ ಯೋಃ ॥ ೬೧ ॥

ಅಹಸ್ತತ್ರೋದ ಗಯನಂ ರಾತ್ರಿ ಸ್ಯಾದ್ದಕ್ಷಿಣಾಯನಂ ।
ಬ್ರಾಹ್ಮಸ್ಯ ತು ಕ್ಷಪಾಹಸ್ಯ ಯತ್ಪ್ರಮಾಣಂ ಮಹೀಪತೇ ॥ ೬೨ ॥

ಏಕೈಕಶೋ ಯುಗಾನಾಂ ತು ಕ್ರಮಶಸ್ತನ್ನಿಬೋಧ ಮೇ ।
ಚತ್ವಾರ್ಯಾಹು ಸ್ಸಹಸ್ರಾಣಿ ವರ್ಷಾಣಾಂ ತತ್ಕೃತಂ ಯುಗಂ ॥ ೬೩ ॥

ತಸ್ಯ ತಾವಚ್ಛತೀ ಸಂಧ್ಯಾ ಸಂಧ್ಯಾಂಶಶ್ಚ ತಥಾ ವಿಧಃ ।
ತ್ರೇತಾ ತ್ರೀಣಿ ಸಹಸ್ರಾಣಿ ವರ್ಷಾಣಿ ಚ ವಿದುರ್ಬುಧಾಃ ॥ ೬೪ ॥

ಶತಾನಿ ಷಟ್ಚ ರಾಜೇಂದ್ರ ಸಂಧ್ಯಾ ಸಂಧ್ಯಾಂಶಯೋಃ ಪೃಥಕ್ ।
ವರ್ಷಾಣಾಂ ದ್ವೇ ಸಹಸ್ರೇ ತು ದ್ವಾಪರೇ ಪರಿಕೀರ್ತ್ಯತೇ ॥ ೬೫ ॥

---

೬೧. ಈ ಒಂದು ತಿಂಗಳು ಪಿತೃಗಳಿಗೆ ಒಂದು ಅಹೋ ರಾತ್ರಿ. ಇಂತಹ ಹನ್ನೆರಡು ತಿಂಗಳಿಗೆ ಒಂದು ಮನುಷ್ಯ ವರ್ಷ. ಈ ಒಂದು ವರ್ಷವು ದೇವತೆಗಳಿಗೆ ಒಂದು ಅಹೋ ರಾತ್ರಿ. ಈ ಒಂದು ವರ್ಷದಲ್ಲಿ ಎರಡು ಅಯನಗಳಿವೆ.

೬೨. ಅಯ್ಯಾ ರಾಜೇಂದ್ರನೇ! ಅವುಗಳಲ್ಲಿ ಉತ್ತರಾಯಣವು ದೇವತೆಗಳಿಗೆ ಹಗಲು, ದಕ್ಷಿಣಾಯನವು ಅವರಿಗೆ ರಾತ್ರಿ. ಮೊದಲು ಬ್ರಹ್ಮಮಾನದ ಹಗಲು ರಾತ್ರಿ ಗಳ ಪರಿಮಾಣವನ್ನು ಕೇಳು.

೬೩. ಒಂದೊಂದು ಯುಗಗಳಿಗೆ ಎಷ್ಟೆಷ್ಟು ವರ್ಷಗಳೆಂಬುದನ್ನು ಕ್ರಮವಾಗಿ ಹೇಳುತ್ತೇನೆ. ಕೃತಯುಗದ ಪ್ರಮಾಣವು ನಾಲ್ಕು ಸಹಸ್ರವರ್ಷಗಳು.

೬೪. ಆ ವರ್ಷಗಳ ಮಧ್ಯದಲ್ಲಿ ಅಷ್ಟೇ ನೂರು ಸಂಧಿಕಾಲಗಳೂ ಮತ್ತು ಅಷ್ಟೇ ಸಂಧ್ಯಾಂಶಗಳೂ, ಬರುವುವು. ತ್ರೇತಾಯುಗಕ್ಕೆ ಮೂರು ಸಹಸ್ರವರ್ಷಗಳು.

೬೫. ಈ ತ್ರೇತಾಯುಗದಲ್ಲಿ ಆರುನೂರು ಸಂಧಿ (ಸಂಧಿ ಕಾಲಗಳು) ಗಳೂ, ಅಷ್ಟೇ ಸಂಧ್ಯಾಂಶಗಳೂ ಇವೆ. ದ್ವಾಪರಯುಗ ಪ್ರಮಾಣ ಎರಡು ಸಹಸ್ರವರ್ಷಗಳು.

**ಚತ್ವಾರಿ ಚ ಶತಾನ್ಯಾಹುಃ ಸಂಧ್ಯಾಸಂಧ್ಯಾಂಶಯೋರ್ಬುಧಃ ।**
**ಸಹಸ್ರಂ ಕಥಿತಂ ಚಾಂತ್ಯೇ ಶತದ್ವಯ ಸಮನ್ವಿತಂ　　॥ ೯೬ ॥**

**ಏಷಾ ಚತುರ್ಯುಗಸ್ಯಾಪಿ ಸಂಖ್ಯಾ ಪ್ರೋಕ್ತಾ ನೃಪೋತ್ತಮ ।**
**ಯದೇತತ್ಪರಿಸಂಖ್ಯಾತಮಾದಾದೇವ ಚತುರ್ಯುಗಂ　　॥ ೯೭ ॥**

**ಏತದ್ದ್ವಾದಶಸಾಹಸ್ರಂ ದೇವಾನಾಂ ಯುಗಮುಚ್ಯತೇ ।**
**ದೈವಿಕಾನಾಂ ಯುಗಾನಾಂ ತು ಸಹಸ್ರಪರಿಸಂಖ್ಯಯಾ　　॥ ೯೮ ॥**

**ಬ್ರಾಹ್ಮಮೇಕಮಹರ್ಜ್ಞೇಯಂ ತಾವತೀ ರಾತ್ರಿರುಚ್ಯತೇ ।**
**ಏತದ್ಯುಗಸಹಸ್ರಾಂತಂ ಬ್ರಾಹ್ಮಂ ಪುಣ್ಯಮಹರ್ವಿದುಃ　　॥ ೯೯ ॥**

**ರಾತ್ರಿಂ ಚ ತಾವತೀಮೇವ ತೇಽಹೋರಾತ್ರವಿದೋ ಜನಾಃ ।**
**ತತೋಽಸೌ ಯುಗಪರ್ಯಂತೇ ಪ್ರಸುಪ್ತಃ ಪ್ರತಿಬುಧ್ಯತೆ　　॥ ೧೦೦ ॥**

---

೯೬　ಈ ದ್ವಾಪರಯುಗದಲ್ಲಿ ನಾಲ್ಕುನೂರು ಸಂಧಿಕಾಲಗಳೂ, ನಾಲ್ಕು ನೂರು ಸಂಧ್ಯಾಂಶಗಳೂ ಇವೆ. ಕೊನೆಯದಾದ ಕಲಿಯುಗದ ಪ್ರಮಾಣವು ಒಂದು ಸಾವಿರವರ್ಷ. ಅದರಲ್ಲಿ ಎರಡುನೂರು ಸಂಧಿಕಾಲಗಳೂ ಅಷ್ಟೇ ಸಂಧ್ಯಾಂಶಗಳೂ ಇರುತ್ತವೆ.

೯೭. ಆದಿಯಲ್ಲೇ ನಾಲ್ಕು ಯುಗಗಳೆಂದು ನಾನು ನಿನಗೆ ಗಣನೆಮಾಡಿ ಹೇಳಿದ್ದೆನು. ಆ ನಾಲ್ಕು ಯುಗಗಳಿಗೂ ಸಂಖ್ಯಾ ಪ್ರಮಾಣವನ್ನೂ ಈಗ ನಿನಗೆ ನಾನು ಹೇಳಿದೆನು.

೯೮. ಈ ಚತುರ್ಯುಗಗಳು ಹನ್ನೆರಡುಸಾವಿರವಾದರೆ ಒಂದು ದೇವಯುಗ. ಇಂತಹ ಒಂದುಸಾವಿರ ದೇವಯುಗಗಳಾದರೆ,

೯೯. ಆಗ ಬ್ರಹ್ಮನಿಗೆ ಒಂದು ಹಗಲು ಮತ್ತೆ ಒಂದುಸಾವಿರ ದೇವಯುಗಕ್ಕೆ ಒಂದು ರಾತ್ರಿ. ಮತ್ತೆ ಒಂದುಸಾವಿರ ದೇವಯುಗಕ್ಕೆ ಬ್ರಹ್ಮನ ಒಂದು ಹಗಲು.

೧೦೦. ಪುನಃ ಅಷ್ಟೇ ಯುಗಗಳಿಗೆ ಒಂದು ರಾತ್ರಿಯೆಂದೂ, ಒಟ್ಟು ಬ್ರಹ್ಮನ ಒಂದು ಅಹೋ ರಾತ್ರಿಗೆ ಎರಡುಸಾವಿರ ದೇವಯುಗಗಳು ಎಂದೂ ಅಹೋರಾತ್ರಿ ಪರಿಮಿತಿ ತಿಳಿದ ಪ್ರಾಜ್ಞರು ಹೇಳುತ್ತಾರೆ. ಹೀಗೆ ಇವನ ಒಂದುಯುಗ ಮುಗಿದು ಪ್ರಳಯವಾಗುತ್ತಲೆ ಸುಪ್ತನಾಗುತ್ತಾನೆ.

ಪ್ರತಿಬುದ್ಧಸ್ತು ಸೃಜತಿ ಮನಸ್ಸದಸದಾತ್ಮಕಂ ।
ಮನಃ ಸೃಷ್ಟಿಂ ವಿಕುರುತೇ ಚೋದ್ಯಮಾನಂ ಸಿಸೃಕ್ಷಯಾ ॥ ೧೦೧ ॥

ವಿಪುಲಂ ಜಾಯತೇ ತಸ್ಮಾತ್ ತಸ್ಯ ಶಬ್ದಂ ಗುಣಂ ವಿದುಃ ।
ವಿಪುಲಾತ್ತು ವಿಕುರ್ವಾಣಾತ್ ಸರ್ವಗಂಧವಹಃ ಶುಚಿಃ ॥ ೧೦೨ ॥

ಬಲವಾನ್ ಜಾಯತೇ ವಾಯುಃ ಸ ವೈ ಸ್ಪರ್ಶಗುಣೋ ಮತಃ ।
ವಾಯೋರಪಿ ವಿಕುರ್ವಾಣಾತ್ ವಿರೋಚಿಷ್ಣು ತಮೋನುದಂ ॥ ೧೦೩ ॥

ಉತ್ಪದ್ಯತೇ ವಿಚಿತ್ರಾಂಶುಃ ತಸ್ಯ ರೂಪಂ ಗುಣಂ ವಿದುಃ ।
ತಸ್ಮಾದಪಿ ವಿಕುರ್ವಾಣಾದಾಪೋ ಜಾತಾ ಸ್ಮೃತಾ ಬುಧೈಃ ॥ ೧೦೪ ॥

---

೧೦೧. ನಿದ್ರೆಯಿಂದ ಎಚ್ಚರಗೊಂಡಮೇಲೆ ಪರಮಾತ್ಮನು ಸದಸದಾತ್ಮಕವಾದ ಎಂದರೆ ಸತ್ತು, ಅಸತ್ತುಗಳ ರೂಪವಾದ ಮನಸ್ಸನ್ನು ಸೃಷ್ಟಿಮಾಡುತ್ತಾನೆ. ಸೃಷ್ಟಿಮಾಡುವ ಇಚ್ಛಾಮಾತ್ರದಿಂದ ಪ್ರೇರಿತವಾದ ಮನಸ್ಸು ಸ್ಪಷ್ಟವಾಗಿ ಬಗೆಬಗೆಯ ಪ್ರಪಂಚವನ್ನು ಸೃಷ್ಟಿಮಾಡುತ್ತದೆ.

೧೦೨. ಆ ಮನಸ್ಸು ಸೃಷ್ಟವಾದ ಅನಂತರ ವ್ಯಾಪಕವಾದ ಆಕಾಶವು ಹುಟ್ಟುತ್ತದೆ. ಆ ಆಕಾಶಕ್ಕೆ ಶಬ್ದವೇ ಗುಣವು. ಅದು ಎಂದರೆ ವ್ಯಾಪಕವಾದ ಆಕಾಶವು ಹುಟ್ಟಿದ ಅನಂತರ ವಾಯುತತ್ತ್ವವು ಹುಟ್ಟುತ್ತದೆ.

೧೦೩. ವೇಗವಾಗಿ ಬೀಸುವ ವಾಯುವಿಗೆ ಸ್ಪರ್ಶವೇ ಅಸಾಧರಣ ಗುಣವೆನಿಸುವುದು. ವಿಕೃತವಾದ ಆ ವಾಯುವಿನ ಉತ್ಪತ್ತ್ಯನಂತರದಲ್ಲಿ ಕತ್ತಲೆಯನ್ನು ಹೋಗಲಾಡಿಸುವುದೂ, ಪ್ರಕಾಶಮಾನವೂ,

೧೦೪. ನಾನಾಬಣ್ಣದ ಕಿರಣಗಳುಳ್ಳುದೂ ಆದ ತೇಜಸ್ತತ್ವವು ಉತ್ಪನ್ನವಾಗುವುದು. ಅದಕ್ಕೆ ರೂಪವೇ ಅಸಾಧಾರಣ ಗುಣವೆಂದು ತಿಳಿಯಬೇಕು. ಆ ತೇಜಸ್ತತ್ವದ ಉತ್ಪತ್ತ್ಯನಂತರದಲ್ಲಿ ವಿಕೃತವಾಗಿ ಜಲತತ್ವವು ಉತ್ಪತ್ತಿಯಾಗುವುದು. ವಿದ್ವಾಂಸರು ಈರೀತಿ ಅಭಿಪ್ರಾಯಪಡುತ್ತಾರೆ.

**ತಾಸಾಂ ಗುಣೋ ರಸೋ ಜ್ಞೇಯಃ ಸರ್ವಲೋಕಸ್ಯ ಭಾವನಃ ।**
**ಅದ್ಭ್ಯೋ ಗಂಧಗುಣಾ ಭೂಮಿರಿತ್ಯೇಷಾ ಸೃಷ್ಟಿರಾದಿತಃ ॥ ೧೦೫ ॥**

**ಯತ್ಪ್ರಾಕ್ ದ್ವಾದಶಸಾಹಸ್ರಮುಕ್ತಂ ಸೌಮನಸಂ ಯುಗಂ ।**
**ತದೇಕಸಪ್ತತಿ ಗುಣಂ ಮನ್ವಂತರಮಿಹೋಚ್ಯತೇ ॥ ೧೦೬ ॥**

**ಮನ್ವಂತರಾಣ್ಯಸಂಖ್ಯಾನಿ ಸರ್ಗಃ ಸಂಹಾರ ಏವ ಚ ।**
**ತಥಾಪ್ಯಹೇ ಸದಾ ಬ್ರಾಹ್ಮೇ ಮನವಸ್ತು ಚತುರ್ದಶ ॥ ೧೦೭ ॥**

**ಕಥ್ಯಂತೇ ಕುರುಶಾರ್ದೂಲ ಸಂಖ್ಯಯಾ ಪಂಡಿತೈಃ ಸದಾ ।**
**ಮನೋಃ ಸ್ವಾಯಂಭುವಸ್ಯೇಹ ಷಡ್ವಂಶ್ಯಾ ಮನವೋಽಪರೇ ॥ ೧೦೮ ॥**

**ಸೃಷ್ಟವಂತಃ ಪ್ರಜಾಃ ಸ್ವಾಃ ಸ್ವಾಃ ಮಹಾತ್ಮಾನೋ ಮಹೌಜಸಃ ।**
**ಸಾವರ್ಣೀಯಸ್ತಥಾ ಪಂಚಭೌತ್ಯೋ ರೌಚ್ಯಸ್ತಥಾ ಪರಃ ॥ ೧೦೯ ॥**

---

೧೦೫. ಸರ್ವಲೋಕ ಜೀವನವಾದ ಆ ಜಲಕ್ಕೆ ರಸವೇ ಗುಣವೆಂದು ತಿಳಿಯಬೇಕು. ಈ ಜಲದಿಂದ ಭೂಮಿಯು ಉತ್ಪತ್ತಿಯಾಯಿತು. ಅದು ಗಂಧವೆಂಬ ಗುಣವುಳ್ಳದ್ದು.

೧೦೬. ಈರೀತಿಯಾಗಿ ಇದು ಸೃಷ್ಟಿಯ ಆದಿಯ ಉತ್ಪತ್ತಿಕ್ರಮವು. ಯಾವ ಚತುರ್ಯುಗಗಳ ಹನ್ನೆರಡು ಸಹಸ್ರಗಳು ಒಂದು ದೇವಯುಗವೆಂದು ಈ ಮೊದಲೇ ಹೇಳಿದೆವೋ ಅಂತಹ ಎಪ್ಪತ್ತೊಂದು ದೇವಯುಗಗಳಿಗೆ ಒಂದು ಮನ್ವಂತರವೆನ್ನುವರು.

೧೦೭. ಈ ಮನ್ವಂತರಗಳೂ ಸೃಷ್ಟಿ ಪ್ರಲಯಗಳೂ ಈವರೆಗೆ ಲೆಕ್ಕವಿಲ್ಲದಷ್ಟು ನಡೆದಿವೆ. ಬ್ರಹ್ಮನ ಈ ಒಂದು ದಿನದಲ್ಲಿ ಹದಿನಾಲ್ಕು ಮನುಗಳು ಎಂಬದಾಗಿ ಗೊತ್ತಾಗಿದೆ.

೧೦೮. ಅಯ್ಯಾ ಕುರುವಂಶೋದ್ಭವನೇ! ಇದರ ನಿಷ್ಕರ್ಷೆಯ ಪ್ರಮಾಣವನ್ನು ಪ್ರಾಜ್ಞರು ಲೆಕ್ಕಮಾಡಿ ಹೇಳಿದ್ದಾರೆ. ಮೊದಲನೆಯವನಾದ ಸ್ವಾಯಂಭುವ ಮನುವಿನ ವಂಶದಲ್ಲಿ ಇನ್ನೂ ಆರುಮಂದಿ ಬೇರೇ ಮನುಗಳು ಜನಿಸಿದರು.

೧೦೯. ಮಹಾತ್ಮರೂ ಹೆಚ್ಚು ವೀರ್ಯವಂತರೂ ಆದ ಆ ಮನುಗಳು ತಮ್ಮ ತಮ್ಮ ಸಂತಾನಗಳನ್ನು ಸೃಷ್ಟಿಸಿದರು. ಸಾವರ್ಣೀಯು, ಪಂಚಭೌತ್ಯರು, ರೌಚ್ಯನೆಂಬ ಮತ್ತೊಬ್ಬನು.

ಏತೇ ಭವಿಷ್ಯಾ ಮನವಃ ಸಪ್ತ ಪ್ರೋಕ್ತಾ ನೃಪೋತ್ತಮ ।
ಸ್ವೇ ಸ್ವೇಂತರೇ ಸರ್ವಮಿದಂ ಪಾಲಯಂತಿ ಚರಾಚರಂ ॥ ೧೧೦ ॥

ಏವಂ ವಿಧಂ ದಿನಂ ತಸ್ಯ ವಿರಂಚೇಸ್ತು ಮಹಾತ್ಮನಃ ।
ತಸ್ಯಾಂತೇ ಕುರುತೇ ಸರ್ವಂ ಯಥೇದಂ ಕಥಿತಂ ತವ ॥ ೧೧೧ ॥

ಕ್ರೀಡನ್ನಿವೈತತ್ಕುರುತೇ ಪರಮೇಷ್ಠೀ ನರಾಧಿಪ ।
ಚತುಷ್ಪಾತ್ಸಕಲೋ ಧರ್ಮಃ ಸತ್ಯಂ ಚೈವ ಕೃತೇ ಯುಗೇ ॥ ೧೧೨ ॥

ನಾಧರ್ಮೇಣಾಗಮಃ ಕಂಚಿನ್ಮನುಷ್ಯಾಣಾಂ ಪ್ರವರ್ತತೇ ।
ಇತರೇಷ್ವಾಗಮಾಸ್ತಾತ ಧರ್ಮಾಶ್ಚ ಕುರುನಂದನ ॥ ೧೧೩ ॥

---

೧೧೦. ' ಇವರೇ ಭವಿಷ್ಯಕಾಲದ ಸಪ್ತಮನುಗಳು ಆಗುವರು ' ಎಂದು ಹೇಳಿದ್ದಾರೆ. ಇವರು ತಮ್ಮ ತಮ್ಮ ಮನ್ವಂತರಗಳಲ್ಲಿ ಸಮಸ್ತವಾದ ಈ ಚರಾಚರಗಳನ್ನೂ ರಕ್ಷಣೆಮಾಡುತ್ತಾರೆ.

೧೧೧. ಈರೀತಿ ಒಂದು ಸೃಷ್ಟಿ ಮತ್ತು ಲಯಕ್ಕೆ ಮಹಾತ್ಮನಾದ ಬ್ರಹ್ಮನ ಒಂದುದಿನ. ಅಂತಹ ದಿನಾಂತದಲ್ಲಿ ಪುನಃ ಹೇಗೆ ಸೃಷ್ಟಿಮಾಡುತ್ತಾನೆ ಎಂಬುದನ್ನು ನಿನಗೆ ಹೇಳಿದ್ದಾಯಿತು.

೧೧೨. ಅಯ್ಯಾ ಧೊರೆಯೆ ! ಬ್ರಹ್ಮನು ಈ ಕಾರ್ಯಗಳನ್ನು ಆಟವಾಡಿದಂತೆ (ಲೀಲಾಜಾಲವಾಗಿ) ಮಾಡುತ್ತಾನೆ. ಧರ್ಮ ಮತ್ತು ಸತ್ಯ ಇವೆರಡೂ ಕೃತಯುಗದಲ್ಲಿ ನಾಲ್ಕು ಪಾದಗಳ ಸಹಿತವಾಗಿ ಸಂಪೂರ್ಣವಾಗಿ ಇರುತ್ತವೆ.

೧೧೩. ಎಲೈ ಕುರುವಂಶೋದ್ಭವನೇ ! ಕೃತಯುಗದಲ್ಲಿ ಮನುಷ್ಯರು ಅಧರ್ಮ ಯುಕ್ತವಾದ ಮಾರ್ಗದಲ್ಲಿ ಪ್ರವರ್ತಿಸುವುದಿಲ್ಲ. ಇತರ ಯುಗಗಳಲ್ಲಿ ಅಧರ್ಮಮಾರ್ಗ ಮತ್ತು ಧರ್ಮಮಾರ್ಗ ಪ್ರವೃತ್ತಿಗಳೆರಡೂ ಇರುತ್ತವೆ. ಹೇಗೆ ಆಚರಿಸಿ ಅವರು (ನಿಕೃಷ್ಟರು) ಫಲಭ್ರಷ್ಟರಾಗುವರು ಎಂಬ ವಿಷಯವನ್ನು ಮನುವು ಹೇಗೆ ನಿರೂಪಿಸಿದಾನೆ ಎಂಬುದನ್ನು ತಿಳಿದುಕೊ.

ಯಾಪ್ಯಶಾ ಪರಿಹೀಯಂತೇ ಯಥಾಹ ಭಗವಾನ್ಮನುಃ ।
ಚೌರ್ಯಾಚ್ಚಾಪ್ಯನೃತಾದ್ರಾಜನ್ ಮಾಯಾಭಿರಮಿತದ್ಯುತೇ ॥ ೧೧೪ ॥

ಪಾದೇನ ಹೀಯತೇ ಧರ್ಮಃ ತ್ರೇತಾದಿಷು ಯುಗೇಷು ವೈ ।
ಅರೋಗಾಃ ಸರ್ವಸಿದ್ಧಾರ್ಥಾಃ ಚತುರ್ವರ್ಷಶತಾಯುಷಃ ॥ ೧೧೫ ॥

ಕೃತ ತ್ರೇತಾದಿಷುತ್ವೇಷಾಂ ವಯೋ ಹ್ರಸತಿ ಪಾದಶಃ ।
ವೇದೋಕ್ತಮಾಯುರಾಶೀಶ್ಚ ಮರ್ತ್ಯಾನಾಂ ಕುರುನಂದನ ॥ ೧೧೬ ॥

ಕರ್ಮಣಾಂ ತು ಫಲಂ ತಾತ ಫಲತ್ಯನುಯುಗಂ ಸದಾ ।
ಪ್ರಭಾವಶ್ಚ ತದಾ ಲೋಕೇ ಫಲತ್ಯೇವ ಶರೀರಿಣಾಂ ॥ ೧೧೭ ॥

ಅನ್ಯೇ ಕೃತಯುಗೇ ಧರ್ಮಾಸ್ತ್ರೇತಾಯಾಂ ದ್ವಾಪರೇ ಪರೇ ।
ಅನ್ಯೇ ಕಲಿಯುಗೇ ನೃಣಾಂ ಯುಗಧರ್ಮಾನುರೂಪತಃ ॥ ೧೧೮ ॥

---

೧೧೪-೧೧೫. ಅಯ್ಯಾ ರಾಜನೇ! ತ್ರೇತೆಯೇ ಮುಂತಾದ ಯುಗಗಳಲ್ಲಿ ಕಳ್ಳತನ, ಸುಳ್ಳು, ಮೋಸ ಮುಂತಾದುವುಗಳಿಂದ ಧರ್ಮದ ಒಂದೊಂದು ಪಾದವು ಕ್ಷೀಣವಾಗುವುದು. ಕೃತಯುಗದಲ್ಲಿ ಎಲ್ಲರೂ ಸರ್ವಪುರುಷಾರ್ಥಗಳನ್ನು ಪಡೆದ ವರೂ, ರೋಗರಹಿತರೂ, ನಾನೂರುವರ್ಷ ಆಯುಸ್ಸುಳ್ಳವರೂ ಆಗಿದ್ದರು.

೧೧೬. ತ್ರೇತಾ ಮುಂತಾದ ಯುಗಗಳಲ್ಲಿ ಈ ಮನುಷ್ಯರ ವಯಸ್ಸು (ಜೀವಿತಕಾಲವು) ಕಾಲು ಕಾಲುಭಾಗ ಕಡಮೆಯಾಗುವುದು. ಎಂದರೆ ತ್ರೇತೆಯಲ್ಲಿ ಮುನ್ನೂರು ವರ್ಷಗಳೂ, ದ್ವಾಪರದಲ್ಲಿ ಇನ್ನೂರು ವರ್ಷಗಳೂ, ಕಲಿಯುಗದಲ್ಲಿ ನೂರು ವರ್ಷಗಳೂ ಆಗಿರುವುದು. ಅಯ್ಯಾ ಕುರುನಂದನನೇ! ವೇದೋಕ್ತವಾದ ಆಯುಸ್ಸು, ಮತ್ತು ಹಿರಿಯರ ಆಶೀರ್ವಾದಗಳು.

೧೧೭. ಮತ್ತು ಕರ್ಮಗಳ ಫಲ, ಲೋಕದಲ್ಲಿ ಪುರುಷರ ಪ್ರಭಾವ ಇವೆ ಲ್ಲವೂ ಕೂಡ ಯುಗಾನುಗುಣವಾಗಿಯೇ ಫಲಿಸುವುದು.

೧೧೮. ಆಯಾಯುಗಸ್ವರೂಪಕ್ಕೆ ತಕ್ಕಂತೆ ಕೃತಯುಗದಲ್ಲಿ ಒಂದು ಬಗೆಯ ಧರ್ಮಗಳೂ, ತ್ರೇತೆಯಲ್ಲಿ ಬೇರೆ ಬಗೆಯ ಧರ್ಮಗಳೂ, ದ್ವಾಪರಯುಗದಲ್ಲಿ ಬೇರೆ ಬಗೆಯ ಧರ್ಮಗಳೂ ಕಲಿಯುಗದಲ್ಲಿ ಬೇರೆ ಬಗೆಯ ಧರ್ಮಗಳೂ ಕಾಲಾನುಸಾರ ವಾಗಿ ನಡೆಯುತ್ತವೆ.

**ತಪಃ ಪರಂ ಕೃತಯುಗೇ ತ್ರೇತಾಯಾಂ ಜ್ಞಾನಮುಚ್ಯತೇ ।**
**ದ್ವಾಪರೇ ಯಜ್ಞಮಿತ್ಯಾಹುಃ ದಾನಮೇಕಂ ಕಲೌಯುಗೇ ॥ ೧೧೯ ॥**

**ಸರ್ವಸ್ಯ ರಾಜನ್ ಸರ್ಗಸ್ಯ ಗುಪ್ತ್ಯರ್ಥಂ ಚ ಮಹಾದ್ಯುತೇ ।**
**ಮುಖಬಾಹೂರುಪಾದಾನಾಂ ಪೃಥಕ್ಕರ್ಮಾಣ್ಯಕಲ್ಪಯತ್ ॥ ೧೨೦ ॥**

**ಅಧ್ಯಾಪನಂಚಾಧ್ಯಯನಂ ಯಜನಂ ಯಾಜನಂ ತಥಾ ।**
**ದಾನಂ ಪ್ರತಿಗ್ರಹಂ ಚೈವ ಬ್ರಾಹ್ಮಣಾನಾಮಕಲ್ಪಯತ್ ॥ ೧೨೧ ॥**

**ಪ್ರಜಾನಾಂ ಪಾಲನಂ ರಾಜನ್ ದಾನಮಧ್ಯಯನಂ ತಥಾ ।**
**ವಿಷಯೇಷು ಪ್ರಸಕ್ತಿಂ ಚ ತಥೇಜ್ಯಾಂ ಕ್ಷತ್ರಿಯಸ್ಯ ತು ॥ ೧೨೨ ॥**

---

೧೧೯. ಕೃತಯುಗದಲ್ಲಿ ತಪಸ್ಸೇ ಶ್ರೇಷ್ಠವೆಂದೂ, ತ್ರೇತಾಯುಗದಲ್ಲಿ ಜ್ಞಾನವೇ ಶ್ರೇಷ್ಠವೆಂದೂ, ದ್ವಾಪರದಲ್ಲಿ ಯಜ್ಞವೇ ಶ್ರೇಷ್ಠವೆಂದೂ, ಕಲಿಯುಗದಲ್ಲಿ ದಾನವೇ ಶ್ರೇಷ್ಠವೆಂದೂ ತಿಳಿಯಬೇಕು.

೧೨೦. ತೇಜಶ್ಶಾಲಿಯಾದ ಎಲೈ ರಾಜನೇ! ಈರೀತಿ ಸೃಷ್ಟವಾದ ಸಕಲ ಪ್ರಾಣಿಗಳ ರಕ್ಷಣೆಗೋಸ್ಕರ ವಿರಾಟ್ಪುರುಷನ ಮುಖದಿಂದ ಉತ್ಪನ್ನರಾದ ಬ್ರಾಹ್ಮಣರಿಗೂ, ಬಾಹುವಿನಿಂದ ಉತ್ಪನ್ನರಾದ ಕ್ಷತ್ರಿಯರಿಗೂ, ತೊಡೆಯಿಂದ ಉತ್ಪನ್ನರಾದ ವೈಶ್ಯರಿಗೂ, ಪಾದದಿಂದ ಹುಟ್ಟಿದ ಶೂದ್ರರಿಗೂ ಹೀಗೆ ಎಲ್ಲರಿಗೂ ಬೇರೆ ಬೇರೆ ಕೆಲಸಗಳನ್ನು ಕ್ಲುಪ್ತಮಾಡಿದನು.

೧೨೧-೧೨೨. ಶಿಷ್ಯರಿಗೆ ಅಧ್ಯಯನ ಮಾಡಿಸುವುದು, ತಾನೂ ಅಧ್ಯಯನ ಮಾಡುವುದು, ಇತರರಿಂದ ಯಜ್ಞಮಾಡಿಸುವುದು, ತಾನೂ ಯಜ್ಞಮಾಡುವುದು, ಇತರರಿಗೆ ದಾನಕೊಡುವುದು, ತಾನೂ ಇತರರಿಂದ ದಾನವನ್ನು ಸ್ವೀಕರಿಸುವುದು, ಈ ಷಟ್ಕರ್ಮಗಳು ಬ್ರಾಹ್ಮಣರಿಗೆ ಎಂದು ಗೊತ್ತುಮಾಡಲ್ಪಟ್ಟವು. ಅಯ್ಯಾ ರಾಜನೇ! ಪ್ರಜೆಗಳನ್ನು ರಕ್ಷಿಸುವುದು, ದಾನ ಕೊಡುವುದು, ಅಧ್ಯಯನ ಮಾಡುವುದು, ಯಜ್ಞ ಮಾಡುವುದು, ವಿಷಯಾನುಭವದಲ್ಲಿ ತೊಡಗುವುದು, ಇವು ಕ್ಷತ್ರಿಯರಿಗೆ ವಿಹಿತವಾದುವು.

ಪಶೂನಾಂ ರಕ್ಷಣಂ ದಾನಂ ಇಜ್ಯಾಧ್ಯಯನಮೇವ ತು ।
ವಣಿಕ್ಪಥಂ ಕುಸೀದಂ ಚ ವೈಶ್ಯಸ್ಯ ಕೃಷಿರೇವ ಚ ॥ ೧೨೩ ॥

ಏಕಮೇವ ತು ಶೂದ್ರಸ್ಯ ಕರ್ಮ ಲೋಕೇ ಪ್ರಕೀರ್ತಿತಂ ।
ಏತೇಷಾಮೇವ ವರ್ಣಾನಾಂ ಶುಶ್ರೂಷಾಮನುಪೂರ್ವಶಃ ॥ ೧೨೪ ॥

ಪುರುಷಸ್ಯ ಸದಾ ಶ್ರೇಷ್ಠಂ ನಾಭೇರೂರ್ಧ್ವಂ ನೃಪೋತ್ತಮ ।
ತಸ್ಮಾದಪಿ ಶುಚಿತರಂ ಮುಖಂ ತಾತ ಸ್ವಯಂಭುವಃ ॥ ೧೨೫ ॥

ತಸ್ಮಾನ್ಮುಖಾದ್ದ್ವಿಜೋ ಜಾತ ಇತೀಯಂ ವೈದಿಕೀಶ್ರುತಿಃ ।
ಸರ್ವಸ್ಯೈವಾಸ್ಯ ಧರ್ಮಸ್ಯ ಸರ್ವತೋ ಬ್ರಾಹ್ಮಣಃ ಪ್ರಭುಃ ॥ ೧೨೬ ॥

ಸಸೃಜೇ ಪದ್ಮಜಃ ಪೂರ್ವಂ ತಪಸ್ತಪ್ತ್ವಾ ಕುರೂದ್ವಹ ।
ಹವ್ಯಾನಾಮಿವ ಕವ್ಯಾನಾಂ ಸರ್ವಸ್ಯಾಪಿ ಚ ಗುಪ್ತಯೇ ॥ ೧೨೭ ॥

---

೧೨೩. ಗೋವುಗಳ ಸಂರಕ್ಷಣೆ, ದಾನ, ಅಧ್ಯಯನ, ಯಜ್ಞ, ಹಣದಿಂದ ಬಡ್ಡಿ ಸಂಪಾದನೆಮಾಡುವುದು, ವ್ಯಾಪಾರ, ಭೂಮಿಯ ವ್ಯವಸಾಯ ಮಾಡುವುದು ಇವು ವೈಶ್ಯರಿಗೆ ಕ್ಲುಪ್ತವಾದ ಧರ್ಮಗಳು.

೧೨೪. ಈ ಬ್ರಹ್ಮ, ಕ್ಷತ್ರಿಯ, ವೈಶ್ಯವರ್ಣಗಳವರ ಸೇವೆ ಮಾಡುವುದು ಎಂಬ ಧರ್ಮ ಒಂದು ಮಾತ್ರ ಶೂದ್ರನಿಗೆ ಕ್ಲುಪ್ತವಾದುದು.

೧೨೫. ಅಯ್ಯಾ ರಾಜಶ್ರೇಷ್ಠನೇ! ಯಾವಾಗಲೂ ವಿರಾಟ್ಪುರುಷನ ಹೊಕ್ಕಳಿನಿಂದ ಮೇಲಿನ ಭಾಗದ ಅವಯವಗಳು ಶ್ರೇಷ್ಠಗಳು. ಅದರಲ್ಲಿ ಮುಖವು ಹೆಚ್ಚು ಪರಿಶುದ್ಧವಾದುದು.

೧೨೬. ಬ್ರಹ್ಮನ ಆ ಮುಖದಿಂದ ಬ್ರಾಹ್ಮಣನು ಉತ್ಪನ್ನನಾದನೆಂಬುದು ವೇದೋಕ್ತವಾದ ಮಾತು. ಈ ಸಮಸ್ತ ವರ್ಣಧರ್ಮಗಳಿಗೂ ಬ್ರಾಹ್ಮಣನೇ ಒಡೆಯನು.

೧೨೭. ಅಯ್ಯಾ ಕುರುಕುಲೋತ್ಪನ್ನನೇ! ಹವ್ಯಗಳನ್ನೂ ಕವ್ಯಗಳನ್ನೂ ರಕ್ಷಿಸುವುದಕ್ಕೋಸ್ಕರ ಪೂರ್ವದಲ್ಲಿ ಬ್ರಹ್ಮನು ಸಂಕಲ್ಪಪೂರ್ವಕವಾಗಿ ಈ ಬ್ರಾಹ್ಮಣನನ್ನು ಸೃಷ್ಟಿಮಾಡಿದನು.

ಅಶ್ನಂತಿ ಚ ಮುಖೇನಾಸ್ಯ ಹವ್ಯಾನಿ ತ್ರಿದಿವೌಕಸಃ ।
ಕವ್ಯಾನಿಚೈವ ಪಿತರಃ ಕಿಂಭೂತಮಧಿಕಂ ತತಃ ॥ ೧೨೮ ॥

ಭೂತಾನಾಂ ಪ್ರಾಣಿನಃ ಶ್ರೇಷ್ಠಾಃ ಪ್ರಾಣಿನಾಂ ಬುದ್ಧಿಜೀವನಃ ।
ಬುದ್ಧಿಮತ್ಸು ನರಾಃ ಶ್ರೇಷ್ಠಾಃ ನರೇಷು ಬ್ರಾಹ್ಮಣಾಃ ಸ್ಮೃತಾಃ ॥ ೧೨೯ ॥

ಬ್ರಾಹ್ಮಣೇಷು ಚ ವಿದ್ವಾಂಸೋ ವಿದ್ವತ್ಸು ಕೃತಬುದ್ಧಯಃ ।
ಕೃತಬುದ್ಧಿಷು ಕರ್ತಾರಃ ಕರ್ತೃಷು ಬ್ರಹ್ಮವೇದಿನಃ ॥ ೧೩೦ ॥

ಜನ್ಮ ವಿಪ್ರಸ್ಯ ರಾಜೇಂದ್ರ ಧರ್ಮಾರ್ಥಮಿಹ ಕಥ್ಯತೇ ।
ಉತ್ಪನ್ನಃ ಸರ್ವಸಿದ್ಧ್ಯರ್ಥಂ ಯಾತಿ ಬ್ರಹ್ಮಸದೋ ನೃಪ ॥ ೧೩೧ ॥

---

೧೨೮. ದೇವತೆಗಳು ಈ ಬ್ರಾಹ್ಮಣನ ಮೂಲಕ ಹವಿಸ್ಸುಗಳನ್ನು ಸ್ವೀಕರಿಸುತ್ತಾರೆ. ಅದರಿಂದ ದೇವತೆಗಳು ತೃಪ್ತರಾಗುತ್ತಾರೆ. ಈ ಬ್ರಾಹ್ಮಣರ ಮೂಲಕವಾಗಿಯೇ ಕವ್ಯಗಳೆಂಬ ಶ್ರಾದ್ಧ ವಸ್ತುಗಳಿಂದ ಪಿತೃಗಳೂ ಕೂಡ ತೃಪ್ತರಾಗುತ್ತಾರೆ ಆದುದರಿಂದ ಬ್ರಾಹ್ಮಣನಿಗಿಂತ ಉತ್ತಮ ವಸ್ತು ಯಾವುದು ಇದೆ?

೧೨೯. ಪಂಚಭೂತಗಳಲ್ಲಿ ಸಜೀವವಸ್ತುಗಳು ಶ್ರೇಷ್ಠ. ಅಂಥ ಸಜೀವಿಗಳಲ್ಲಿ ಬುದ್ಧಿಶಕ್ತಿಯಿಂದ ಜೀವಿಸುವ ಪ್ರಾಣಿ ಶ್ರೇಷ್ಠ. ಈರೀತಿ ಬುದ್ಧಿಯಿಂದ ಜೀವಿಸುವ ಪ್ರಾಣಿಗಳಲ್ಲಿ ಮಾನವನು ಶ್ರೇಷ್ಠ. ಆ ಮಾನವ ವರ್ಗದಲ್ಲಿ ಬ್ರಾಹ್ಮಣನು ಶ್ರೇಷ್ಠ.

೧೩೦. ಬ್ರಾಹ್ಮಣರಲ್ಲಿ ಪ್ರಾಜ್ಞರು ಶ್ರೇಷ್ಠರು, ಪ್ರಾಜ್ಞರಲ್ಲಿ ಓದಿ ತಿಳಿವಳಿಕೆಯುಳ್ಳವರು ಶ್ರೇಷ್ಠರು. ಹಾಗೆ ಓದಿ ತಿಳಿದವರಲ್ಲಿ ಆ ತಿಳಿವಳಿಕೆಯಂತೆ ಅನುಷ್ಠಾನ ಮಾಡುವರು ಮತ್ತೂ ಉತ್ತಮ. ಈ ಅನುಷ್ಠಾನಪರರಲ್ಲಿ ಬ್ರಹ್ಮಜ್ಞಾನಿಗಳು ಮಹಾಶ್ರೇಷ್ಠರೆಂದು ತಿಳಿಯಬೇಕು.

೧೩೧. ಎಲೈ ರಾಜೇಂದ್ರನೇ! ಧರ್ಮಾಚರಣೆಗಾಗಿಯೇ ಬ್ರಾಹ್ಮಣ ಜನ್ಮವು ಏರ್ಪಟ್ಟಿದೆ. ಸರ್ವಕಾರ್ಯಗಳಲ್ಲೂ ಫಲ ಸಿದ್ಧಿಯಾಗುವಂತೆ ಮಾಡುವುದಕ್ಕಾಗಿ ಉತ್ಪನ್ನನಾದ ದ್ವಿಜನು ಬ್ರಹ್ಮಲೋಕವನ್ನು ಪಡೆಯುತ್ತಾನೆ.

ಸ ಚಾ ಪಿ ಜಾಯಮಾನಸ್ತು ಪೃಥಿವ್ಯಾಮಿಹ ಜಾಯತೇ ।
ಭೂತಾನಾಂ ಪ್ರಭವಾಯೈವ ಧರ್ಮಕೋಶಸ್ಯ ಗುಪ್ತಯೇ ॥ ೧೩೨ ॥

ಸರ್ವಂ ಹಿ ಬ್ರಾಹ್ಮಣಸ್ಯೇದಂ ಯತ್ಕಿಂಚಿತ್ ಪೃಥಿವೀಗತಂ ।
ಜನ್ಮನಾಚೋತ್ತಮೇನೇದಂ ಸರ್ವಂ ವೈ ಬ್ರಾಹ್ಮಣೋsರ್ಹತಿ ॥ ೧೩೩ ॥

ಸ್ವಕೀಯಂ ಬ್ರಾಹ್ಮಣೋ ಭುಂಕ್ತೇ ವಿವಿಧಾನಿ ಚ ಸುವ್ರತ ।
ಕರುಣಾಂ ಕುರ್ವತಸ್ತಸ್ಯ ಭುಂಜತೀಹೇತರೇ ಜನಾ॥ ॥ ೧೩೪ ॥

ತ್ರಯಾಣಾಮಿಹ ವರ್ಣಾನಾಂ ಭಾವಾಭಾವಾಯ ವೈ ದ್ವಿಜಃ ।
ಭವೇದ್ರಾಜನ್ನ ಸಂದೇಹಸ್ತುಷ್ಟೋ ಭಾವಾಯ ವೈ ದ್ವಿಜಃ ॥ ೧೩೫ ॥

ಅಭಾವಾಯ ಭವೇತ್ಕ್ರುದ್ಧಃ ತಸ್ಮಾತ್ಪೂಜ್ಯತಮೋ ಹಿ ಸಃ ।
ಬ್ರಾಹ್ಮಣೇ ಸತಿ ನಾನ್ಯಸ್ಯ ಪ್ರಭುತ್ವಂ ವಿದ್ಯತೇ ನೃಪ ॥ ೧೩೬ ॥

---

೧೩೨. ಆ ಬ್ರಾಹ್ಮಣನು ಪುಣ್ಯಾತೀರಿ ಪುನಃ ಹುಟ್ಟುವಾಗಲೂ ಈ ಭೂಲೋಕದಲ್ಲಿಯೇ ಹುಟ್ಟುತ್ತಾನೆ. ಪ್ರಾಣಿಗಳ ಉತ್ಪತ್ತಿಗೂ, ಧರ್ಮ ಸಂಗ್ರಹಗಳ ರಕ್ಷಣೆಗೂ ಅವನ ಜನ್ಮವು ಏರ್ಪಟ್ಟಿದೆ.

೧೩೩ ಪೃಥ್ವಿಯಲ್ಲಿರುವ ಯಾವ ವಸ್ತುವೇ ಆಗಲಿ ಅದೆಲ್ಲವೂ ಬ್ರಾಹ್ಮಣನಿಗೆ ಸಂಬಂಧವಾದುದು. ಅವನು ಜನ್ಮತಃ ಉತ್ತಮನಾದುದರಿಂದ ಪೃಥ್ವಿಯಲ್ಲಿರುವ ಎಲ್ಲಕ್ಕೂ ಅವನು ಅರ್ಹನಾಗುತ್ತಾನೆ.

೧೩೪. ಅಯ್ಯಾ ನಿಯಮಿಷ್ಠನಾದ ರಾಜನೇ! ಬ್ರಾಹ್ಮಣನು ಭೋಜನ ಮಾಡುವ ಎಲ್ಲ ವಸ್ತುಗಳೂ ಅವನ ಸ್ವಂತ ಹಕ್ಕಿಗೆ ಒಳಪಟ್ಟವು. ಅವನ ದಯೆಯಿಂದಲೇ ಇತರ ಜನಗಳು ಭೋಜನಮಾಡುತ್ತಾರೆ.

೧೩೫. ಎಲೈ ರಾಜೇಂದ್ರನೇ ! ಉಳಿದ ಮೂರು ವರ್ಣಗಳವರ ಸ್ಥಿತಿ ನಾಶ ಇವುಗಳಿಗೆ ಬ್ರಾಹ್ಮಣನೇ ಕಾರಣನಾಗುತ್ತಾನೆ. ಇದರಲ್ಲಿ ಸಂದೇಹವಿಲ್ಲ. ಬ್ರಾಹ್ಮಣನು ಸಂತುಷ್ಟನಾದರೆ ಇತರ ವರ್ಣಗಳವರಿಗೆ ಸುಸ್ಥಿತಿಯು ಉಂಟು.

೧೩೬. ಇವನು ಕೋಪಿಸಿಕೊಂಡರೆ ಇತರ ವರ್ಣದವರು ನಾಶವಾಗುವುದಕ್ಕೆ ಕಾರಣನಾಗುತ್ತಾನೆ. ಆದುದರಿಂದ ಬ್ರಾಹ್ಮಣನು ಅತ್ಯಂತ ಪೂಜ್ಯನು. ಬ್ರಾಹ್ಮಣನು

ಕಾಮಾತ್ಮಕರೋತ್ಯಸೌ ಕರ್ಮ ಕಾಮಗಶ್ಚ ನೃಪೋತ್ತಮ ।
ತಸ್ಮಾದ್ವೃಂದಾರಕಪುರೀ ತಸ್ಮಾದಪಿ ಮಹಃ ಪುನಃ ॥ ೧೩೭ ॥

ಮಹ ರ್ಲೋಕಾಜ್ಜನೋಲೋಕಂ ಬ್ರಹ್ಮಲೋಕಂ ಚ ಗಚ್ಛತಿ ।
ಬ್ರಹ್ಮತ್ವಂ ಚ ಮಹಾಬಾಹೋ ಯಾತಿ ವಿಪ್ರೋ ನ ಸಂಶಯಃ ॥ ೧೩೮ ॥

॥ ಶತಾನೀಕ ಉವಾಚ ॥

ಬ್ರಹ್ಮತ್ವಂ ನಾಮ ದುಷ್ಪ್ರಾಪಂ ಬ್ರಹ್ಮಲೋಕೇಷು ಸುವ್ರತ ।
ಬ್ರಹ್ಮತ್ವಂ ಕೀದೃಶಂ ವಿಪ್ರೋ ಬ್ರಹ್ಮಲೋಕಂ ಚ ಗಚ್ಛತಿ ॥ ೧೩೯ ॥

ನಾಮಮಾತ್ರೋಥ ಕಿಂ ವಿಪ್ರೋ ಬ್ರಹ್ಮತ್ವಂ ಬ್ರಹ್ಮಣಸ್ಸದಾ ।
ಯಾತಿ ಬ್ರಹ್ಮನ್ ಗುಣಾಃ ತೇಸ್ಯುಃ ಬ್ರಹ್ಮಪ್ರಾಪ್ತೌ ಮತೋಚ್ಯತಾಂ ೧೪೦

---

ಇರುತ್ತಿರಲಾಗಿ ಅವನ ಮುಂದೆ ಬೇರೊಬ್ಬನಿಗೆ ಸ್ಥಿತಿ ನಾಶಗಳ ಮೇಲಿನ ಅಧಿಕಾರವು (ಪ್ರಭಾತ್ವ) ದೊರೆಯುವದಿಲ್ಲ.

೧೩೭. ರಾಜವರೇಣ್ಯನೇ! ಇವನು ಇಚ್ಛಾನುಸಾರವಾಗಿ ಬೇಕಾದಲ್ಲಿಗೆ ಹೋಗುತ್ತಾನೆ. ತಾನು ವಾಸಿಸುವ ಭೂಮಿಯಿಂದ ಸ್ವರ್ಗಕ್ಕೂ ಅಲ್ಲಿಂದ ಮಹ ರ್ಲೋಕಕ್ಕೂ ಹೋಗುವನು.

೧೩೮. ಮಹಾಬಾಹುವಾದ ರಾಜನೇ! ಮಹರ್ಲೋಕದಿಂದ ಜನೋಲೋಕಕ್ಕೂ, ಜನೋಲೋಕದಿಂದ ಬ್ರಹ್ಮಲೋಕಕ್ಕೂ ಹೋಗುತ್ತಾನೆ. ಇವುಗಳನ್ನು ಪಡೆದಮೇಲೆ ಬ್ರಹ್ಮಭಾವವನ್ನು ಪಡೆಯುತ್ತಾನೆಂಬುದರಲ್ಲಿ ಸಂಶಯವಿಲ್ಲ ಎಂದು ಹೇಳಿದನು.

೧೩೯. ಆಗ ಶತಾನೀಕರಾಜನು ಪ್ರಶ್ನೆಮಾಡುತ್ತಾನೆ.—ನಿಯಮಿಷ್ಠನಾದ ಪ್ರಭುವೆ! ಲೋಕದಲ್ಲಿ ಬ್ರಹ್ಮವು ಹೊಂದಲಸಾಧ್ಯ ಎಂದು ಪ್ರಸಿದ್ಧವಾದುದು. ಬ್ರಹ್ಮತ್ವವೆಂಬುದು ಎಂತಹದು? ಎಂಥ ವಿಪ್ರನು ಬ್ರಹ್ಮಲೋಕವನ್ನು ಹೊಂದುವನು? ಎಂಬುದನ್ನು ತಿಳಿಸು.

೧೪೦. ಎಲೈ ಮುನಿವರ್ಯನೇ! ಹೆಸರು ಮಾತ್ರಕ್ಕೆ ಬ್ರಾಹ್ಮಣನೆನಿಸಿದವನೂ ಬ್ರಹ್ಮತ್ವವನ್ನು ಪಡೆದು ಬ್ರಹ್ಮನ ಸಮೀಪವನ್ನು ಹೊಂದುವನೇ? ಬ್ರಹ್ಮಪ್ರಾಪ್ತಿಗೆ ಇರಬೇಕಾದ ಗುಣಗಳಾವುವು? ಎಂಬುದನ್ನು ನನಗೆ ತಿಳಿಸಬೇಕು ಎಂದನು.

॥ ಸುಮಂತುರುವಾಚ ॥

ಸಾಧುಸಾಧು ಮಹಾಬಾಹೋ ಶೃಣು ಮೇ ಪರಮಂ ವಚಃ ।
ಯೇ ಪ್ರೋಕ್ತಾ ವೇದಶಾಸ್ತ್ರೇಷು ಸಂಸ್ಕಾರಾ ಬ್ರಾಹ್ಮಣಸ್ಯ ತು ॥ ೧೪೧ ॥

ಗರ್ಭಾಧಾನಾದಯೋ ಯೇ ಚ ಸಂಸ್ಕಾರಾ ಯಸ್ಯ ಪಾರ್ಥಿವ ।
ಚತ್ವಾರಿಂಶತ್ತಥಾಷ್ಟೌ ಚ ನಿರ್ವೃತ್ತಾಃ ಶಾಸ್ತ್ರತೋ ನೃಪ ॥ ೧೪೨ ॥

ಸ ಯಾತಿ ಬ್ರಹ್ಮಣಃ ಸ್ಥಾನಂ ಬ್ರಾಹ್ಮಣತ್ವಂ ಚ ಮಾನದ ।
ಸಂಸ್ಕಾರಾಃ ಸರ್ವಥಾ ಹೇತುಃ ಬ್ರಹ್ಮತ್ವೇ ನಾತ್ರ ಸಂಶಯಃ ॥ ೧೪೩ ॥

॥ ಶತಾನೀಕ ಉವಾಚ ॥

ಸಂಸ್ಕಾರಾಃ ಕೇ ಮತಾ ಬ್ರಹ್ಮನ್ ಬ್ರಹ್ಮತ್ವೇ ಬ್ರಾಹ್ಮಣಸ್ಯ ತು ।
ಶಂಸ ಮೇ ದ್ವಿಜಶಾರ್ದೂಲ ಕೌತುಕಂ ಹಿ ಮಹನ್ಮಮ ॥ ೧೪೪ ॥

---

೧೪೧. ಸುಮಂತುಮುನಿವರ್ಯರು ಹೇಳುತ್ತಾರೆ.—ಎಲೈ ರಾಜೇಂದ್ರನೇ! ನೀನು ಕೇಳಿದ್ದು ಚೆನ್ನಾಗಿದೆ. ಹೇಳುವೆನು ಕೇಳು. ಬ್ರಾಹ್ಮಣನಿಗೆ ಆಗಬೇಕಾದ ವೇದೋಕ್ತವಾದ ಸಂಸ್ಕಾರಗಳು ಯಾವುವೆಂಬುದನ್ನು ಹೇಳುತ್ತೇನೆ.

೧೪೨. ಅಯ್ಯಾ ನೃಪಶ್ರೇಷ್ಠನೇ! ಗರ್ಭಾಧಾನವೇ ಮುಂತಾದ ಶಾಸ್ತ್ರೋಕ್ತವಾದ ಸಂಸ್ಕಾರಗಳು ಶಾಸ್ತ್ರಪ್ರಕಾರ ನಡೆದು ಎಂಟು ಆತ್ಮಗುಣಗಳೂ ಅವಶ್ಯವಾಗಿರಬೇಕು. " ದಯಾಸರ್ವಭೂತೇಷು ಕ್ಷಾಂತಿರನಸೂಯಾಶೌಚಾಮಾನಾಯಾಸೋ ಮಂಗಲಮಕಾರ್ಪಣ್ಯಮಸ್ಪೃಹಾಚೇತಿ ಆತ್ಮಗುಣಾಃ (ಗೌತಮಸೂತ್ರ) ಎಂಟು ಸಂಸ್ಕಾರಗಳು ಸಪ್ತಪಾಕ್‌ಯಜ್ಞಸಂಸ್ಥಾ, ಸಪ್ತಹವಿರ್ಯಜ್ಞಸಂಸ್ಥಾ, ಸಪ್ತಸೋಮಾಸಂಸ್ಥಾ, ಗೋದಾನಾದಿ ವ್ರತಚತುಷ್ಟಯ, ಸಮಾವರ್ತನ, ವಿವಾಹ, ಪಂಚಯಜ್ಞ ಇವು ನಲವತ್ತೂ.

೧೪೩. ಇಂತಹ ಬ್ರಾಹ್ಮಣನು ಬ್ರಾಹ್ಮಣತ್ವವನ್ನು ಪಡೆದು ಬ್ರಹ್ಮಲೋಕವನ್ನು ಹೊಂದುತ್ತಾನೆ. ಆದುದರಿಂದ ಸರ್ವಪ್ರಕಾರದಿಂದಲೂ ಬ್ರಹ್ಮಪ್ರಾಪ್ತಿಗೆ ವೇದೋಕ್ತ ಸಂಸ್ಕಾರಗಳನ್ನು ನಡೆಯಿಸುವುದೇ ಮುಖ್ಯವಾದ ಸಾಧನ. ಈ ವಿಚಾರದಲ್ಲಿ ಏನೂ ಸಂದೇಹವಿಲ್ಲ " ಎಂದು ಹೇಳಿದನು.

೧೪೪ ಆಗ ಶತಾನೀಕರಾಜನು ಕೇಳುತ್ತಾನೆ.—ಅಯ್ಯಾ ದ್ವಿಜವರ್ಯನೇ! ಬ್ರಾಹ್ಮಣನು ಬ್ರಹ್ಮತ್ವವನ್ನು ಪಡೆಯುವುದಕ್ಕೆ ಅವಶ್ಯವಾಗಿ ಆಗಬೇಕಾದ ಸಂಸ್ಕಾರ

॥ ಸುಮಂತುರುವಾಚ ॥

ಸಾಧು ಸಾಧು ಮಹಾಬಾಹೋ ಶೃಣು ಮೇ ಪರಮಂ ವಚಃ ।
ಯೇ ಪ್ರೋಕ್ತಾ ವೇದಶಾಸ್ತ್ರೇಷು ಸಂಸ್ಕಾರಾ ಬ್ರಾಹ್ಮಣಸ್ಯ ತು ॥ ೧೪೫ ॥

ಗರ್ಭಾಧಾನಂ ಪುಂಸವನಂ ಸೀಮಂತೋನ್ನಯನಂ ತಥಾ ।
ಜಾತಕರ್ಮಾನ್ನಾಶನಂ ಚ ಚೂಡೋಪನಯನಂ ನೃಪ ॥ ೧೪೬ ॥

ಬ್ರಹ್ಮವ್ರತಾನಿ ಚತ್ವಾರಿ ಸ್ನಾನಂ ಚ ತದನಂತರಂ ।
ಸಧರ್ಮಚಾರಿಣೀಯೋಗೋ ಯಜ್ಞಾನಾಂ ಕರ್ಮ ಮಾನದ ॥ ೧೪೭ ॥

ಪಂಚಾನಾಂ ಕಾರ್ಯಮಿತ್ಯಾಹುರಾತ್ಮನಃ ಶ್ರೇಯಸೇ ನೃಪ ।
ದೇವಪಿತೃಮನುಷ್ಯಾಣಾಂ ಭೂತಾನಾಂ ಬ್ರಹ್ಮಣಸ್ತಥಾ ॥ ೧೪೮ ॥

---

ಗಳು ಯಾವುವೋ ಅವನ್ನು ನನಗೆ ತಿಳಿಸು. ಅದನ್ನು ಕೇಳಲು ಬಹಳ ಕುತೂಹಲವಾಗಿದೆ ಎಂದನು.

೧೪೫-೧೪೭. ಸುಮಂತುಮುನಿವರ್ಯರು ಹೇಳುತ್ತಾರೆ.—ಎಲೈ ರಾಜಶ್ರೇಷ್ಠನೇ! ನೀನು ಕೇಳಿದುದು ನ್ಯಾಯವಾಗಿಯೇ ಇದೆ. ವೇದಶಾಸ್ತ್ರಗಳಲ್ಲಿ ಬ್ರಾಹ್ಮಣನಿಗೆ ಅವಶ್ಯಕವೆಂದು ವಿದ್ವಾಂಸರು ಯಾವ ಸಂಸ್ಕಾರಗಳನ್ನು ಹೇಳಿರುವರೋ ಅವನ್ನು ಒಂದನ್ನೂ ಬಿಡದೆ ಹೇಳುವೆನು ಕೇಳು. ಅಯ್ಯಾ ಪ್ರಭುವೇ! ಗರ್ಭಾಧಾನ, ಪುಂಸವನ, ಸೀಮಂತೋನ್ನಯನ, (ಅನವಲೋಭನ) ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೌಲ, ಉಪನಯನ, ಗೋಧಾನಾದಿ ವ್ರತಚತುಷ್ಟಯ, (ಋಗ್ವೇದ ರೀತ್ಯಾ ಮಹಾನಾಮ್ನ್ಯಾದಿ ನಾಲ್ಕು ವ್ರತಗಳು, ಅಥವಾ ಯಜುರ್ವೇದರೀತ್ಯಾ ಪ್ರಾಜಾಪತ್ಯ, ಸೌಮ್ಯ, ಆಗ್ನೇಯ, ವೈಶ್ವದೇವ ಎಂಬ ನಾಲ್ಕು ವ್ರತಗಳು) ಸ್ನಾತಕ (ಸಮಾವರ್ತನ), ವಿವಾಹ, ತದಂಗವಾದ ಪಂಚಯಜ್ಞಕರ್ಮಗಳು, ಸಪ್ತಸೋಮಯಾಗ, ಸಪ್ತಪಾಕಯಜ್ಞ, ಸಪ್ತಹವಿರ್ಯಜ್ಞ, ಈ ನಲವತ್ತು ವೇದೋಕ್ತ ಸಂಸ್ಕಾರಗಳು.

೧೪೮. ಮನುಷ್ಯನು ತನ್ನ ಶ್ರೇಯಸ್ಸಿಗಾಗಿ ಮಾಡುವ ದೇವಯಜ್ಞ, ಪಿತೃಯಜ್ಞ, ಮನುಷ್ಯಯಜ್ಞ, ಭೂತಯಜ್ಞ, ಬ್ರಹ್ಮಯಜ್ಞ ಇವೇ ಪಂಚಯಜ್ಞಗಳೆನಿಸುವುವು.

ಏತೇಷಾಂಚಾಷ್ಟಕಾಕರ್ಮ ಪಾರ್ವಣಶ್ರಾದ್ಧಮೇವ ಹಿ ।
ಶ್ರಾವಣೀ ಚಾಗ್ರಹಾಯಣೀ ಚೈತ್ರೀ ಚಾಶ್ವಯುಜೀ ತಥಾ ॥ ೧೪೯ ॥

ಪಾಕಯಜ್ಞಾಸ್ತಥಾ ಸಪ್ತ ಅಗ್ನ್ಯಾಧಾನಂ ಚ ಸತ್ಕ್ರಿಯಾಃ ।
ಅಗ್ನಿಹೋತ್ರಂ ತಥಾ ರಾಜನ್ ದರ್ಶಂ ಚ ವಿಧುಸಂಕ್ಷಯೇ ॥ ೧೫೦ ॥

ಪೌರ್ಣಮಾಸಂ ಚ ರಾಜೇಂದ್ರ ಚಾತುರ್ಮಾಸ್ಯಾನಿ ಚಾಪಿ ಹಿ ।
ನಿರೂಪಣಂ ಪಶುವಧಂ ತಥಾ ಸೌತ್ರಾಮಣೀತಿ ಚ ॥ ೧೫೧ ॥

ಹವಿರ್ಯಜ್ಞಾಸ್ತಥಾ ಸಪ್ತ ತೇಷಾಂ ಚಾಪಿ ಹಿ ಸತ್ಕ್ರಿಯಾಃ ।
ಅಗ್ನಿಷ್ಟೋಮೋತ್ಯಗ್ನಿಷ್ಟೋಮಸ್ತಥೋಕ್ಥಃ ಷೋಡಶೀ ವಿದುಃ ॥ ೧೫೨ ॥

ವಾಜಪೇಯೋತಿರಾತ್ರಶ್ಚ ಆಪ್ತೋರ್ಯಾಮೇತಿ ವೈ ಸ್ಮೃತಃ ।
ಸಂಸ್ಕಾರೇಷು ಸ್ಥಿತಾಸ್ಸಪ್ತ ಸೋಮಾಃ ಕುರುಕುಲೋದ್ವಹ ॥ ೧೫೩ ॥

---

೧೪೯. ಅಷ್ಟಕಾಶ್ರಾದ್ಧ, ಕರ್ಮಾಂಗಶ್ರಾದ್ಧ, (ಪಿತೃ, ಪಿತಾಮಹ, ಪ್ರಪಿತಾಮಹರೆಂಬ ತ್ರಿಪುರುಷೋಚ್ಚಾರಣಮಾಡಿ ಮಾಡುವ) ಪಾರ್ವಣಶ್ರಾದ್ಧ, ಶ್ರಾವಣ, ಆಶ್ವಯುಜ, ಮಾರ್ಗಶಿರ, ಚೈತ್ರ ಈ ನಾಲ್ಕು ಮಾಸಗಳಲ್ಲಿ ಶ್ರದ್ಧೆಯಿಂದ ನಡೆಯಿಸಬೇಕಾದ ಆರಾಧನ ಎಂಬ ಸಪ್ತಹವಿರ್ಯಜ್ಞಗಳು.

೧೫೦-೧೫೧. ಅಗ್ನ್ಯಾಧಾನ, ಅಗ್ನಿಹೋತ್ರ, (ಪ್ರತಿ ಅಮಾವಾಸ್ಯೆಯಲ್ಲಿಯೂ ಮಾಡಬೇಕಾದ) ದರ್ಶೇಷ್ಟಿ, (ಪ್ರತಿ ಪೂರ್ಣಿಮೆಯಲ್ಲಿ ಮಾಡುವ) ಪೂರ್ಣಮಾಸೇಷ್ಟಿ, ಚಾತುರ್ಮಾಸೇಷ್ಟಿ, ಮತ್ತು ನಿರೂಢಪಶುಬಂಧ, ಸೌತ್ರಾಮಣಿ, ಎಂಬ ಸಪ್ತಪಾಕಯಜ್ಞಗಳು ಇವು ಸಂಸ್ಕಾರಕ್ಕೆ ಸಂಬಂಧಿಸಿದ ಕರ್ಮಗಳು.

೧೫೨-೧೫೩. ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ್ಯ, ಷೋಡಶೀ, ವಾಜಪೇಯ, ಅತಿರಾತ್ರ, ಆಪ್ತೋರ್ಯಾಮ ಎಂಬ ಈ ಸಪ್ತಸೋಮಯಾಗಗಳೂ ಬ್ರಾಹ್ಮಣನಿಗೆ ಆಗಬೇಕಾದ ಸಂಸ್ಕಾರಕ್ಕೆ ಸಂಬಂಧಪಟ್ಟುವು ಎಂದು ಪ್ರಸಿದ್ಧಿಯಾಗಿದೆ. ಅಯ್ಯಾ ರಾಜನೇ ! ಈರೀತಿ ಬ್ರಾಹ್ಮಣ ಸಂಸ್ಕಾರಗಳು ನಲವತ್ತು ಇವೆ.

**ಇತ್ಯೇತೇ ದ್ವಿಜಸಂಸ್ಕಾರಾಶ್ಚತ್ವಾರಿಂಶನ್ನೃಪೋತ್ತಮ ।**
**ಅಷ್ಟೌಚಾತ್ಮಗುಣಾಸ್ತಾತ ಶೃಣು ತಾನಪಿ ಭಾರತ ॥ ೧೫೪ ॥**

**ಅನಸೂಯಾ ದಯಾ ಕ್ಷಾಂತಿರನಾಯಾಸಂ ಚ ಮಂಗಲಂ ।**
**ಅಕಾರ್ಪಣ್ಯಂ ತಥಾ ಶೌಚಮಸ್ಪೃಹಾ ಚ ಕುರೂದ್ವಹ ॥ ೧೫೫ ॥**

**ಯ ಏತೇಷ್ಟಗುಣಾಸ್ತಾತ ಕೀರ್ತ್ಯತೇ ವೈ ಮನೀಷಿಭಿಃ ।**
**ಏತೇಷಾಂ ಲಕ್ಷಣಂ ವೀರ ಶೃಣು ಸರ್ವಮಶೇಷತಃ ॥ ೧೫೬ ॥**

**ನ ಗುಣಾನ್ ಗುಣಿನೋ ಹಂತಿ ನಸ್ತೌತ್ಯಾತ್ಮಗುಣಾನಿ ಚ ।**
**ಪ್ರಹೃಷ್ಯತೇ ನಾನ್ಯದೋಷೈರನಸೂಯಾ ಪ್ರಕೀರ್ತಿತಾ ॥ ೧೫೭ ॥**

**ಅಪರೇ ಬಂಧುವರ್ಗೇ ವಾ ಮಿತ್ರೇ ದ್ವೇಷ್ಟರಿ ವಾ ಸದಾ ।**
**ಆತ್ಮವದ್ವರ್ತನಂ ಯತ್ಸ್ಯಾತ್ ಸಾ ದಯಾ ಪರಿಕೀರ್ತಿತಾ ॥ ೧೫೮ ॥**

**ವಾಚಾ ಮನಸಿ ಕಾಯೇ ಚ ದುಃಖೇನೋತ್ಪಾದಿತೇನ ಚ ।**
**ನ ಕುಪ್ಯತಿ ನ ಚಾಪ್ರೀತಿಃ ಸಾ ಕ್ಷಮಾ ಪರಿಕೀರ್ತಿತಾ ॥ ೧೫೯ ॥**

---

೧೫೪-೧೫೫. ಅಯ್ಯಾ ಕುರುವಂಶೋದ್ಭವನೇ! ಅನಸೂಯೆ, ದಯೆ, ಕ್ಷಮೆ, ಅನಾಯಾಸ, ಮಂಗಲ, ಅಕಾರ್ಪಣ್ಯ, ಶೌಚ, ಅಸ್ಪೃಹಾ ಎಂಬೀ ಎಂಟು ಬ್ರಾಹ್ಮಣನಲ್ಲಿರಬೇಕಾದ ಆತ್ಮಗುಣಗಳು.

೧೫೬. ವಿದ್ವಾಂಸರು ಇವನನ್ನು ಬಹಳವಾಗಿ ಶ್ಲಾಘಿಸುವರು. ಓ ರಾಜನೇ! ಇವುಗಳ ಲಕ್ಷಣವನ್ನೆಲ್ಲಾ ಹೇಳುವೆನು ಸಮಗ್ರವಾಗಿ ಕೇಳು.

೧೫೭. ಗುಣವಂತರ ಗುಣಗಳಲ್ಲಿ ದೋಷಾರೋಪ ಮಾಡದೆಯೂ, ತನ್ನ ಗುಣವನ್ನು ಹೊಗಳಿಕೊಳ್ಳದೆಯೂ, ಅನ್ಯರಲ್ಲಿನ ದೋಷಗಳನ್ನು ಕೇಳಿ ಹರ್ಷಿಸದೆಯೂ ಇರುವುದಕ್ಕೆ ಅನಸೂಯೆ ಎಂದು ಹೆಸರು.

೧೫೮. ನೆಂಟರು, ನೆಂಟರಲ್ಲದವರು, ಮಿತ್ರರು, ಶತ್ರುಗಳು, ಇವರೆಲ್ಲರನ್ನೂ ತನ್ನಂತೆ ಎಂದು ಭಾವಿಸಿ ಯಾವಾಗಲೂ ನಡೆದುಕೊಳ್ಳುವಿಕೆಯು ದಯೆ ಎನಿಸುವುದು.

೧೫೯. ಮಾತಿನಲ್ಲಿಯಾಗಲಿ, ಮನಸ್ಸಿನಲ್ಲಿಯಾಗಲಿ, ಶರೀರದಲ್ಲಿಯಾಗಲಿ ಉಂಟಾದ ದುಃಖಕ್ಕಾಗಿ ಯಾರಮೇಲೂ ಕೋಪಗೊಳ್ಳದೆಯೂ ಪ್ರೀತಿರಹಿತನಾಗದೆಯೂ ಇರುವಿಕೆಯೇ ಕ್ಷಮೆ ಎನ್ನಿಸುವುದು.

**ಅಭಕ್ಷ್ಯ ಪರಿಹಾರಶ್ಚ ಸಂಸರ್ಗಶ್ಚಾಪ್ಯನಿಂದಿತೈಃ ।**
**ಆಚಾರೇ ಚ ವ್ಯವಸ್ಥಾನಂ ಶೌಚಮೇತತ್ಪ್ರಕೀರ್ತಿತಂ ॥ ೧೬೦ ॥**

**ಶರೀರಂ ಪೀಡ್ಯತೇ ಯೇನ ಶುಭೇನಾ ಪಿ ಚ ಕರ್ಮಣಾ ।**
**ಅತ್ಯಂತಂ ತನ್ನಕುರ್ವೀತ ಅನಾಯಾಸ ಸ್ಸ ಉಚ್ಯತೆ ॥ ೧೬೧ ॥**

**ಪ್ರಶಸ್ತಾಚರಣಂ ನಿತ್ಯಂ ಅಪ್ರಶಸ್ತ ವಿವರ್ಜನಂ ।**
**ಏತದ್ಧಿ ಮಂಗಲಂ ಪ್ರೋಕ್ತಂ ಮುನಿಭಿರ್ಬ್ರಹ್ಮವಾದಿಭಿಃ ॥ ೧೬೨ ॥**

**ಸ್ತೋಕಾದಪಿ ಪ್ರದಾತವ್ಯಮದೀನೇನಾಂತರಾತ್ಮನಾ ।**
**ಅಹನ್ಯಹನಿ ಯತ್ಕಿಂಚಿದಕಾರ್ಪಣ್ಯಂ ತದುಚ್ಯತೇ ॥ ೧೬೩ ॥**

**ಯಥೋತ್ಪನ್ನೇನ ಸಂತುಷ್ಟಃ ಸ್ವಲ್ಪೇನಾಪ್ಯಥ ವಸ್ತುನಾ ।**
**ಅಹಿಂಸಯಾ ಪರಸ್ವೇಷು ಸ್ವಾಸ್ಸ್ಪೃಹಾ ಪರಿಕೀರ್ತಿತಾ ॥ ೧೬೪ ॥**

---

೧೬೦. ತಿನ್ನಬಾರದೇ ಇರುವುದನ್ನು ತಿನ್ನದೇ ಇರುವುದು, ದೋಷವಿಲ್ಲದವರ ಸಂಗಡ ಸೇರುವುದು, ಉಕ್ತವಾದ ಆಚಾರವನ್ನು ನಡೆಸುವುದು, ಇವೆಲ್ಲಾ ಶೌಚವೆಂದು ಹೇಳಲ್ಪಡುತ್ತದೆ.

೧೬೧. ಉಕ್ತವಾದ ಶುಭಕರ್ಮಗಳನ್ನಾದರೂ ಶರೀರಕ್ಕೆ ಆಯಾಸವಾಗುವಂತೆ ಮಿತಿಮೀರಿ ನಡೆಯಿಸದೇ ಇರುವುದಕ್ಕೆ ಅನಾಯಾಸವೆಂದು ಹೆಸರು.

೧೬೨. ಶ್ರೇಷ್ಠವಲ್ಲದ ನಡವಳಿಕೆಗಳನ್ನು ಒತ್ತರಿಸಿ ಸ್ತುತ್ಯವಾದುವುಗಳನ್ನು ಆಚರಿಸುತ್ತಾ ನಡೆದುಕೊಳ್ಳುವಿಕೆಯನ್ನು ಮಂಗಳವೆನ್ನುವರು.

೧೬೩. ಯಾವುದಾದರೊಂದನ್ನು ತನ್ನಲ್ಲಿದ್ದ ಸ್ವಲ್ಪದಲ್ಲಿಯೇ ದೈನ್ಯವನ್ನು ಬಿಟ್ಟು ಅರ್ಥಿಗಳಿಗೆ ದಾನಕೊಡುವುದನ್ನು ಅಕಾರ್ಪಣ್ಯವೆನ್ನುವರು.

೧೬೪. ಇತರರಿಗೆ ತೊಂದರೆಕೊಡದೆ ತನಗೆ ದೊರೆತ ಸ್ವಲ್ಪ ವಸ್ತುವಿನಿಂದಲೇ ಸಂತೋಷಪಡುತ್ತಾ ಪರಸ್ವತ್ತಿಗೆ ಆಸೆಪಡದೇ ಇರುವಿಕೆಗೆ ಅಸ್ಪೃಹಾ ಎಂದು ಹೆಸರು.

ವಪುರ್ಯಸ್ಯ ತು ಇತ್ಯೇತೈಃ ಸಂಸ್ಕಾರೈಃ ಸಂಸ್ಕೃತಂ ದ್ವಿಜೈಃ ।
ಬ್ರಹ್ಮತ್ವಮಿಹ ಸಂಪ್ರಾಪ್ಯ ಬ್ರಹ್ಮಲೋಕಂ ಚ ಗಚ್ಛತಿ ॥ ೧೬೫ ॥

ವೈದಿಕೈಃ ಕರ್ಮಭಿಃ ಪುಣ್ಯೈಃ ನಿಷೇಕಾದ್ಯೈರ್ದ್ವಿಜನ್ಮನಾಂ ।
ಕಾರ್ಯಶ್ಶರೀರಸಂಸ್ಕಾರಃ ಪಾವನಃ ಪ್ರೇತ್ಯಚೇಹ ಚ ॥ ೧೬೬ ॥

ಗರ್ಭಶುದ್ಧಿಂ ತತಃ ಪ್ರಾಪ್ಯ ಧರ್ಮಂಚಾಶ್ರಮ ಲಕ್ಷಣಂ ।
ಯಾತಿ ಮುಕ್ತಿಂ ನ ಸಂದೇಹಃ ಪುರಾಣೇಸ್ಮಿನ್ನ್ಯುಪೋತ್ತಮ ॥ ೧೬೭ ॥

ಉಶಂತಿ ಕುರುಶಾರ್ದೂಲ ಬ್ರಾಹ್ಮಣಾ ನಾತ್ರ ಸಂಶಯಃ
ಆಶ್ರಿತಾನಾಂ ವಿಶೇಷೇಣ ಯೇ ನಿತ್ಯಂ ಸ್ವಸ್ತಿವಾದಿನಃ ॥ ೧೬೮ ॥

---

೧೬೫. ಯಾವನ ಶರೀರಕ್ಕೆ ಈ ಸಂಸ್ಕಾರಗಳು ನಡೆದಿರುತ್ತವೆಯೋ ಅಂತಹ ಬ್ರಾಹ್ಮಣನು ಈ ಲೋಕದಲ್ಲಿ ಬ್ರಹ್ಮತ್ವವನ್ನು ಪಡೆದು ಬ್ರಹ್ಮಲೋಕವನ್ನು ಸೇರುತ್ತಾನೆ.

೧೬೬. ಗರ್ಭಾಧಾನ (ನಿಷೇಕ) ವೆಂಬಿವೇ ಮೊದಲಾದ ವೇದೋಕ್ತವಾದ ಸಂಸ್ಕಾರಗಳು ಇಹದಲ್ಲೂ, ಪ್ರೇತ ಸಂಸ್ಕಾರಾದಿಗಳು ಪರಲೋಕದಲ್ಲಿಯೂ, ಪಾವನ ವಾದುವುಗಳಾಗಿವೆ.

೧೬೭. ಎಲೈ ಕುರುವಂಶದ ರಾಜಶ್ರೇಷ್ಠನೇ! ಹೀಗೆ ಸಂಸ್ಕಾರ ಮಾಡುವು ದರಿಂದ ವಿಪ್ರರು ಗರ್ಭಾವಸ್ಥೆಯಿಂದಲೂ ಶುದ್ಧಿಯನ್ನು ಪಡೆಯುವರಲ್ಲದೆ ಬ್ರಹ್ಮ ಚಾರಿ, ಗೃಹಿ ಮುಂತಾದ ಆಶ್ರಮಧರ್ಮಗಳನ್ನೂ ಆಚರಿಸಿಕೊಂಡಿದ್ದು ಕೊನೆಯಲ್ಲಿ ಮುಕ್ತಿಯನ್ನು ಪಡೆಯುವರು. ಈ ವಿಚಾರದಲ್ಲಿ ಏನೂ ಸಂಶಯವಿಲ್ಲ ಎಂಬುದು ಈ ಪುರಾಣದಲ್ಲಿ ಉಕ್ತವಾಗಿದೆ.

೧೬೮. ಬಹುಮಟ್ಟಿಗೂ ಆಶ್ರಿತ ಜನರಿಗೆ ಕ್ಷೇಮವನ್ನು ಬಯಸುವ ಯೋಗ್ಯ ರಾದ ಬ್ರಾಹ್ಮಣರು ತಮ್ಮ ಸಮೀಪದಲ್ಲಿರುತ್ತಿದ್ದರೂ ಆ ಪೂಜ್ಯ ವಿಪ್ರರನ್ನು ಬಿಡುವರು.

**ನಿಕಟಸ್ಥಾನ್ ದ್ವಿಜಾನ್ ಹಿತ್ವಾ ಯೋನ್ಯಾನ್ ಪೂಜಯತಿ ದ್ವಿಜಂ ।**
**ಸಿದ್ಧಂ ಪಾಪಂ ತದಪಮಾನಾತ್ ತದ್ವಕ್ತುಂ ನೈವ ಶಕ್ಯತೆ ॥ ೧೬೯ ॥**

**ತಸ್ಮಾತ್ಸದಾ ಸಮೀಪಸ್ಥಃ ಸಂಪೂಜ್ಯೋ ವಿಧಿವನ್ನೃಪ ।**
**ಪೂಜಯೇದತಿಥೀನ್ ತದ್ವತ್ ಅನ್ನಪಾನಾದಿ ದಾನತಃ ॥ ೧೭೦ ॥**

**ಬ್ರಾಹ್ಮಣಃ ಸರ್ವವರ್ಣಾನಾಂ ಜ್ಯೇಷ್ಠಃ ಶ್ರೇಷ್ಠಸ್ತಥೋತ್ತಮಃ ।**
**ಏವಮಸ್ಮಿನ್ ಪುರಾಣೇ ತು ಸಂಸ್ಕಾರಾನ್ ಬ್ರಾಹ್ಮಣಸ್ಯ ತು ॥ ೧೭೧ ॥**

**ಶೃಣೋತಿ ಯಶ್ಚ ಜಾನಾತಿ ಯಶ್ಚಾಪಿ ಪಠತೇ ಸದಾ ।**
**ಋದ್ಧಿಂ ವೃದ್ಧಿಂ ತಥಾ ಕೀರ್ತಿಂ ಪ್ರಾಪ್ನೋತಿ ಶ್ರಿಯಮುತ್ತಮಾಂ॥ ॥೧೭೨॥**

---

೧೬೯. ಅವರನ್ನು ಬಿಟ್ಟು ದೂರದಲ್ಲಿರುವ ಬೇರೇ ವಿಪ್ರರನ್ನು ಕರೆತಂದು ದಾನಾದಿಗಳನ್ನು ಕೊಡುವುದರಿಂದ ಸಮೀಪಸ್ಥ ಬ್ರಾಹ್ಮಣನನ್ನು ಅತಿಕ್ರಮ ಮಾಡಿ ದಂತೆ ಆಗುವುದು. ಅಂತಹವರಿಗೆ ಎಂತಹ ಪಾಪಸಂಘಟನೆಯಾಗುವುದೆಂಬುದನ್ನು ವಿವರಿಸುವುದಕ್ಕೇ ಸಾಧ್ಯವಿಲ್ಲ.

೧೭೦. ಅಯ್ಯಾ ರಾಜನೇ! ಈ ಕಾರಣದಿಂದ ಸಾಧ್ಯವಾದ ಮಟ್ಟಿಗೂ ಸಮೀಪದಲ್ಲಿರುವ ವಿಪ್ರೋತ್ತಮನಿಗೇ ಅನ್ನಪಾನ ಮೊದಲಾದುವನ್ನು ದಾನಮಾಡಿ ವಿಧಿವತ್ತಾಗಿ ಪೂಜಿಸಬೇಕು.

೧೭೧-೧೭೨. ಬ್ರಾಹ್ಮಣನು ಮಿಕ್ಕ ಮೂರು ವರ್ಣಗಳವರಿಗಿಂತ ವಯಸ್ಸಿನಿಂದಲೂ, ಜಾತಿಯಿಂದಲೂ, ಶ್ರೇಷ್ಠನೂ, ಪೂಜ್ಯನೂ ಆಗಿರುವನು. ಈ ಪುರಾಣದಲ್ಲಿ ನಿರೂಪಿತವಾಗಿರುವ ಪ್ರಕಾರ ಬ್ರಾಹ್ಮಣರಿಗೆ ನಡೆಯಬೇಕಾದ ಎಲ್ಲ ಸಂಸ್ಕಾರಗಳನ್ನೂ ಕೇಳಿ ತಿಳಿದುಕೊಳ್ಳುವವರಿಗೂ ಸ್ವಂತವಾಗಿ ಓದಿಕೊಳ್ಳುವವರಿಗೂ, ಸರ್ವ ಸಮೃದ್ಧಿಯೂ ಯಶೋಲಾಭವೂ ಉತ್ತಮವಾದ ಸಂಪತ್ತೂ ಲಭಿಸುವುವು.

**ಧನಂ ಧಾನ್ಯಂ ಯಶಶ್ಚಾಪಿ ಪುತ್ರಾನ್ ಬಂಧೂನ್ ಸುರೂಪತಾಂ ।**
**ಸಾವಿತ್ರಂ ಲೋಕಮಾಸಾದ್ಯ ಬ್ರಹ್ಮಲೋಕಮವಾಪ್ನುಯಾತ್ ॥ ೧೭೩ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ**
**ದ್ವಿತೀಯೋಽಧ್ಯಾಯಃ.**



---

೧೭೩. ಆತನಿಗೆ ದ್ರವ್ಯ, ದವಸ, ಕೀರ್ತಿ ಇವುಗಳು ಲಭಿಸುತ್ತವೆ. ಆತನು ಸೌಂದರ್ಯವನ್ನೂ, ಸುಪುತ್ರನನ್ನೂ, ಬಂಧುಗಳನ್ನೂ ಪಡೆಯುವನು. ಕೊನೆಗೆ ಆತನು ಸೂರ್ಯಲೋಕವನ್ನು ಸೇರಿ ಅಲ್ಲಿಂದ ಬ್ರಹ್ಮಲೋಕವನ್ನು ಸೇರುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ
ಎರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ತೃತೀಯೋಽಧ್ಯಾಯಃ

॥ ಶತಾನೀಕ ಉವಾಚ ॥

**ಜಾತಕರ್ಮಾದಿ ಸಂಸ್ಕಾರಾನ್ ವರ್ಣಾನಾಮನುಪೂರ್ವಶಃ ।**
**ಆಶ್ರಮಾಣಾಂ ಚ ಮೇ ಧರ್ಮಂ ಕಥಯಸ್ವ ದ್ವಿಜೋತ್ತಮ ॥ ೧ ॥**

॥ ಸುಮಂತುರುವಾಚ ॥

**ಗರ್ಭಾಧಾನಂ ಪುಂಸವನಂ ಸೀಮಂತೋನ್ನಯನಂ ತಥಾ ।**
**ಜಾತಕರ್ಮಾನ್ನಪ್ರಾಶಶ್ಚ ಚೂಡಾ ಮೌಂಜೀ ನಿಬಂಧನಂ ॥ ೨ ॥**

---

## ಎರಡನೆಯ ಅಧ್ಯಾಯವು

೧. ಶತಾನೀಕರಾಜನು ಪ್ರಶ್ನೆ ಮಾಡುತ್ತಾನೆ.—"ಸ್ವಾಮೀ, ಸುಮಂತು ಮುನಿವರ್ಯರೇ! ಬ್ರಾಹ್ಮಣಾದಿ ವರ್ಣಗಳಿಗೆ ಕ್ರಮವಾಗಿ ಮಾಡಬೇಕಾದ ಜಾತಕರ್ಮಾದಿ ಸಂಸ್ಕಾರಗಳನ್ನೂ, ಬ್ರಹ್ಮಚರ್ಯಾದ್ಯಾಶ್ರಮಗಳ ಧರ್ಮಗಳನ್ನೂ ನನಗೆ ಹೇಳಿ" ಎಂದು ಕೇಳಿದನು.

೨ ಆಗ ಸುಮಂತು ಮುನಿವ್ಯರು ಹೇಳುತ್ತಾರೆ—ಪುಂಸವನ, ಸೀಮಂತೋನ್ನಯನ, ಇವು ಗರ್ಭಸ್ಥವಾದ ಶಿಶುವಿಗೂ ಜಾತಕರ್ಮ, ಅನ್ನಪ್ರಾಶನ, ಚೌಲ, ಉಪನಯನ ಇವು ಉತ್ಪನ್ನವಾದ ಶಿಶುವಿಗೂ ಆಗಬೇಕಾದ ಸಂಸ್ಕಾರಗಳು.

ಬೈಜಿಕಂ ಗಾರ್ಭಿಕಂ ಚೈನೋ ದ್ವಿಜಾನಾಮುಪಸೃಜ್ಯತೇ ।
ಸ್ವಾಧ್ಯಾಯೇನ ವ್ರತೈರ್ಹೋಮೈಃ ತ್ರೈವಿದ್ಯೇನೇಜ್ಯಯಾ ಶ್ರುತೈಃ ॥ ೩ ॥

ಮಹಾ ಯಜ್ಞೈಶ್ಚ ಬ್ರಾಹ್ಮೀಯಂ ಯಜ್ಞೈಶ್ಚ ಕ್ರಿಯತೇ ತನುಃ ।
ಶೃಣುಷ್ವೈಕಮನಾ ರಾಜನ್ ಯಥಾ ಸಾ ಕ್ರಿಯತೇ ತನುಃ ॥ ೪ ॥

ಪ್ರಾಙ್ ನಾಭಿ ಕರ್ತನಾತ್ ಪುಂಸೋ ಜಾತಕರ್ಮ ವಿಧೀಯತೇ ।
ಮಂತ್ರವತ್ ಪ್ರಾಶನಂ ಚಾಸ್ಯ ಹಿರಣ್ಯಮಧುಸರ್ಪಿಷಾಂ ॥ ೫ ॥

ನಾಮಧೇಯಂ ದಶಮ್ಯಾಂ ತು ಕೇಚಿದಿಚ್ಛಂತಿ ಪಾರ್ಥಿವ ।
ದ್ವಾದಶ್ಯಾಮಪರೇ ರಾಜನ್ ಮಾಸಿಪೂರ್ಣೇ ತಥಾ ಪರೇ ॥ ೬ ॥

ಅಷ್ಟಾದಶೇಽಹನಿ ತಥಾಽನ್ಯೇ ವದಂತಿ ಮನೀಷಿಣಃ ।
ಪುಣ್ಯೇ ತಿಥೌ ಮುಹೂರ್ತೇ ಚ ನಕ್ಷತ್ರೇ ಚ ಗುಣಾನ್ವಿತೇ ॥ ೭ ॥

---

೩. ಶಿಶುವಿಗೆ ಬೀಜಸಂಬಂಧವಾದ ಮತ್ತು ಗರ್ಭಸಂಬಂಧವಾದ ಪಾಪಗಳು ಸಂಪರ್ಕವಾಗಿರುತ್ತವೆ. ಅವು ಉಪಾಕರ್ಮ, ವೇದಾಧ್ಯಯನ, ವ್ರತಹೋಮಾದಿಗಳು, ಶ್ರುತ್ಯುಕ್ತವಾದ ಯಾಗಗಳು, ಇವುಗಳಿಂದಲೂ, ಶಾಸ್ತ್ರಶ್ರವಣಗಳಿಂದಲೂ ನಾಶವಾಗುತ್ತವೆ.

೪. ಅಯ್ಯಾ ಪ್ರಭುವೇ! ಗರ್ಭಸ್ಥವಾದ ಶರೀರವು ಬ್ರಾಹ್ಮೀಯವಾಗಲು ಮಹಾಯಜ್ಞಗಳೂ ಯಜ್ಞಗಳೂ ಹೇಗೆ ಸಾಧಕವಾಗುವುದು ಎಂಬ ವಿಚಾರವನ್ನು ಒಂದೇ ಮನಸ್ಸಿನಿಂದ ಕೇಳು.

೫. ಹೊಕ್ಕಳಿನ ನಾಳವನ್ನು ಕುಯ್ಯುವುದಕ್ಕೆ ಮೊದಲು ಜಾತಕರ್ಮವು ವಿಹಿತವಾಗಿದೆ. ಮಂತ್ರಪೂರ್ವಕವಾಗಿ ತುಪ್ಪ, ಜೇನು ಇದನ್ನು ಬೆರಸಿ ಚಿನ್ನದಿಂದ ಶಿಶುವಿಗೆ ಚೀಪಿಸುವುದು. ಆ ಜಾತಕರ್ಮದಲ್ಲಿ ನಡೆಯಿಸುವ ಮುಖ್ಯ ಕರ್ಮ.

೬–೭. ಜನನವಾದ ಹತ್ತನೆಯ ದಿವಸದಲ್ಲಿ ನಾಮಕರಣ ವ[illegible]ಬೇಕೆಂಬದಾಗಿ ಕೆಲವರೂ, ಮತ್ತೆ ಕೆಲವರು ಹನ್ನೆರಡನೆಯ ದಿನದಲ್ಲಿ ಆಗಬೇಕಾದ್ದು ಎಂದೂ, ಹಲವರು ತಿಂಗಳಾದಮೇಲೆ ಮಾಡಬೇಕೆಂದೂ ಇನ್ನು ಕೆಲವರು ಹದಿನೆಂಟನೆಯ ದಿನದಲ್ಲಿ ಮಾಡತಕ್ಕದ್ದೆಂದೂ ಹೇಳುತ್ತಾರೆ. ಯಾವಾಗ ಮಾಡಬೇಕಾದರೂ ತಿಥಿ ನಕ್ಷತ್ರಾದಿಗಳೂ, ಮುಹೂರ್ತವೂ ಗುಣಯುಕ್ತವಾಗಿ ಶುಭವಾಗಿರಬೇಕು.

ಮಂಗಲ್ಯಂ ತಾತ ವಿಪ್ರಸ್ಯ ಶಿವಶರ್ಮೇತಿ ಪಾರ್ಥಿವ ।
ರಾಜನ್ಯಸ್ಯ ವಿಶಿಷ್ಟಂ ತು ಇಂದುವರ್ಮೇತಿ ಕಥ್ಯತೆ ॥ ೮ ॥

ವೈಶ್ಯಸ್ಯ ಧನಸಂಯುಕ್ತಂ ಶೂದ್ರಸ್ಯ ಚ ಜುಗುಪ್ಸಿತಂ ।
ಧನವರ್ಧನೇತಿ ವೈಶ್ಯಸ್ಯ ಸರ್ವದಾಸೇತಿ ಹೀನಜೇ ॥ ೯ ॥

ಮನುನಾ ಚ ತಥಾ ಪ್ರೋಕ್ತಂ ನಾಮ್ನೋ ಲಕ್ಷಣಮುತ್ತಮಂ ।
ಶರ್ಮವದ್ಬ್ರಾಹ್ಮಣಸ್ಯ ಸ್ಯಾತ್ ರಾಜ್ಞೋ ರಕ್ಷಾಸಮನ್ವಿತಂ ॥ ೧೦ ॥

ವೈಶ್ಯಸ್ಯ ಪುಷ್ಟಿಸಂಯುಕ್ತಂ ಶೂದ್ರಸ್ಯ ಪ್ರೇಷ್ಯ ಸಂಯುತಂ ।
ಸ್ತ್ರೀಣಾಂ ಸುಖೋದ್ಯಮಕ್ರೂರಂ ವಿಸ್ಪಷ್ಟಾರ್ಥಮನೋಹರಮಂ ॥ ೧೧ ॥

---

೮. ಅಪ್ಪಾ ರಾಜನೇ! ಬ್ರಾಹ್ಮಣನಿಗೆ ಶಿವಶರ್ಮ ಎಂದು ಮೊದಲಾಗಿ ಶರ್ಮಶಬ್ದಾಂತನಾಮಗಳು ಮಂಗಳಕರಗಳು. ರಾಜಶ್ರೇಷ್ಠರಿಗೆ ಇಂದುವರ್ಮಾ, ರಾಜವರ್ಮಾ ಮೊದಲಾದ ವರ್ಮಶಬ್ದಾಂತ ನಾಮಗಳು ವಿಶೇಷಗುಣವುಳ್ಳವು ಗಳೆಂದು ಹೇಳಿದೆ.

೯. ವೈಶ್ಯನಿಗೆ ಧನಸಂಯುಕ್ತವಾದ ಧನಗುಪ್ತ, ಧನವರ್ಧನ ಮೊದಲಾದ ರಕ್ಷಾತ್ಮಕವಾದ ನಾಮವೂ ಶೂದ್ರನಿಗೆ ದಾಸಶಬ್ದಾಂತವಾದ ನಾಮವೂ ಉಕ್ತವಾಗಿದೆ.

೧೦. ಹೀಗೆ ಮನುವು ನಾಮಗಳ ಉತ್ತಮ ಲಕ್ಷಣವನ್ನು ಹೀಗೆ ಹೇಳಿದ್ದಾನೆ. ಈ ಲಕ್ಷಣವನ್ನು ಅನುಸರಿಸಿ ಶರ್ಮನೆಂದು ನಾಮಕರಣಮಾಡುವುದು ಬ್ರಾಹ್ಮಣನಿಗೆ ಸುಖಪ್ರದವು; ವರ್ಮನೆಂದು ನಾಮಕರಣಮಾಡಿದರೆ ರಾಜನಿಗೆ ರಕ್ಷಾಕರವು.

೧೧. ವೈಶ್ಯನಿಗೆ ಗುಪ್ತನೆಂದು ನಾಮಕರಣಮಾಡಿದರೆ ಧನಪುಷ್ಟಿಯು, ಶೂದ್ರನಿಗೆ ದಾಸನೆಂದು ನಾಮಕರಣಮಾಡಿದರೆ ದಾಸತ್ವವು ಫಲವಾಗಿ ಬರುವುದು. ಸ್ತ್ರೀಯರಿಗೆ ನಾಮ ಉಚ್ಚರಿಸಲು ಸುಖವಾಗಿರುವಂಥದ್ದೂ ಕ್ರೂರವಲ್ಲದುದೂ ಬಹು ಸ್ಪಷ್ಟಾರ್ಥವುಳ್ಳದೂ ಮನೋಹರವೂ ಆದ ಹೆಸರು ಇಡಬೇಕು.

೧೨. ಅಯ್ಯಾ ರಾಜೇಂದ್ರನೇ! ಕೊನೆಯಲ್ಲಿ ದೀರ್ಘವರ್ಣವುಳ್ಳದೂ ಆಶೀರ್ವಾದ ರೂಪಾರ್ಥಬೋಧಕವೂ ಆದ ನಾಮಕರಣವು ಶಿಶುವಿಗೆ ಹುಟ್ಟಿದ ಹನ್ನೆರಡ

ಮಂಗಲ್ಯಂ ದೀರ್ಘವರ್ಣಾಂತಮಾಶೀರ್ವಾದಾಭಿಧಾನವತ್ ।
ದ್ವಾದಶೇಽಹನಿ ರಾಜೇಂದ್ರ ಶಿಶೋರ್ನಿಷ್ಕ್ರಮಣಂ ಗೃಹಾತ್ ॥ ೧೨ ॥

ಚತುರ್ಥೇ ಮಾಸಿ ಕರ್ತವ್ಯಂ ತಥಾನ್ಯೇಷಾಂ ಮತಂ ವಿಭೋ ।
ಷಷ್ಠೇಽನ್ನಪ್ರಾಶನಂ ಮಾಸಿ ಯಥೇಷ್ಟಂ ಮಂಗಲಂ ಕುಲೇ ॥ ೧೩ ॥

ಚೂಡಾಕರ್ಮ ದ್ವಿಜಾತೀನಾಂ ಸರ್ವೇಷಾಮನುಪೂರ್ವಶಃ ।
ಪ್ರಥಮೇಽಬ್ದೇ ತೃತೀಯೇ ವಾ ಕರ್ತವ್ಯಂ ಕುರುನಂದನ ॥ ೧೪ ॥

ಗರ್ಭಾಷ್ಟಮೇಽಬ್ದೇ ಕುರ್ವೀತ ಬ್ರಾಹ್ಮಣಸ್ಯೋಪನಾಯನಂ ।
ಗರ್ಭಾದೇಕಾದಶೇ ರಾಜನ್ ಕ್ಷತ್ರಿಯಸ್ಯ ವಿನಿರ್ದಿಶೇತ್ ॥ ೧೫ ॥

ದ್ವಾದಶೇಽಬ್ದೇಪಿ ಗರ್ಭಾತ್ತು ವೈಶ್ಯಸ್ಯ ವ್ರತಮಾದಿಶೇತ್ ।
ಬ್ರಹ್ಮವರ್ಚಸಕಾಮೇನ ಕಾರ್ಯಂ ವಿಪ್ರಸ್ಯ ಪಂಚಮೇ ॥ ೧೬ ॥

---

ನೆಯದಿನ ನಡೆಯುವುದು ಶುಭಕರವು. ಮನೆಯಿಂದ ಮಗುವು ಅಂಬೆಗಾಲಿಟ್ಟು ಹೊರಗೆ ದಾಟುವುದು ನಿಷ್ಕ್ರಮಣ ಸಂಸ್ಕಾರವು.

೧೩. ಇದನ್ನು ನಾಲ್ಕನೆಯ ತಿಂಗಳಲ್ಲಿ ನಡೆಸಬೇಕೆಂದು ಹಲವರ ಮತ. ಆರನೆಯ ತಿಂಗಳಲ್ಲಿ ಅನ್ನಪ್ರಾಶನ ಮಂಗಳವನ್ನು ತಮ್ಮ ಇಷ್ಟಬಂದಂತೆ ಮನೆಯಲ್ಲಿ ನಡೆಸಬಹುದು.

೧೪. ಎಲ್ಲಾ ದ್ವಿಜರಿಗೂ (ಎಂದರೆ ಬ್ರಹ್ಮ, ಕ್ಷತ್ರಿಯ, ವೈಶ್ಯರಿಗೆ) ಕ್ರಮವಾಗಿ ಮೊದಲನೆಯ ಅಥವಾ ಮೂರನೆಯ ವರ್ಷದಲ್ಲಿ ಚೂಡಾಕರ್ಮ (ಜುಟ್ಟುಬಿಡಿಸುವುದು) ಎಂಬ ಸಂಸ್ಕಾರವನ್ನು ಮಾಡಬೇಕು.

೧೫. ಬ್ರಾಹ್ಮಣನಿಗೆ ಗರ್ಭಾಷ್ಟಮದಲ್ಲಿ ಎಂದರೆ ಹುಟ್ಟಿದಮೇಲೆ ಏಳನೆಯ ವರ್ಷದಲ್ಲಿ ಉಪನಯನವೆಂಬ ಸಂಸ್ಕಾರವನ್ನು ಮಾಡಬೇಕು. ಕ್ಷತ್ರಿಯನಿಗೆ ಗರ್ಭೈಕಾದಶದಲ್ಲಿ ಎಂದರೆ ಹುಟ್ಟಿದ ಹತ್ತನೆಯ ವರ್ಷದಲ್ಲಿ ಮಾಡಬೇಕೆಂದು ವಿಧಿಯಿದೆ.

೧೬. ಗರ್ಭದ್ವಾದಶದಲ್ಲಿ ಎಂದರೆ ಜನ್ಮತಃ ಹನ್ನೊಂದುವರ್ಷ ತುಂಬಿದ ಮೇಲೆ ವೈಶ್ಯನಿಗೆ ಉಪನಯನ ಸಂಸ್ಕಾರವನ್ನು ಮಾಡಬೇಕು. ಬ್ರಹ್ಮವರ್ಚಸ್ಸು ವಟುವಿಗೆ ಉಂಟಾಗಬೇಕೆಂಬ ಅಪೇಕ್ಷೆಯುಳ್ಳ ಬ್ರಾಹ್ಮಣನು ಐದನೇವರ್ಷದಲ್ಲೇ ಉಪನಯನವನ್ನು ಮಾಡಬೇಕು.

**ಬಲಾರ್ಥಿನಾ ತಥಾ ರಾಜ್ಞಃ ಷಷ್ಠ್ಯೇಽಬ್ದೇ ಕಾರ್ಯಮೇವ ಹಿ ।**
**ಅರ್ಥಕಾಮೇನ ವೈಶ್ಯಸ್ಯ ಅಷ್ಟಮೇ ಕುರುನಂದನ ॥ ೧೭ ॥**

**ಆಷೋಡಶಾತ್ ಬ್ರಾಹ್ಮಣಸ್ಯ ಸಾವಿತ್ರೀ ನಾತಿವರ್ತತೇ ।**
**ದ್ವಾವಿಂಶತೇಃ ಕ್ಷತ್ರಬಂಧೋರಾಚತುರ್ವಿಂಶತೇರ್ವಿಶಃ ॥ ೧೮ ॥**

**ಅತ ಊರ್ಧ್ವಂ ತು ಯೇ ರಾಜನ್ ಯಥಾ ಕಾಲಮಸಂಸ್ಕೃತಾಃ ।**
**ಸಾವಿತ್ರೀಪತಿತಾ ವ್ರಾತ್ಯಾ ವ್ರಾತ್ಯಸ್ತೋಮಾದೃತೇ ಕ್ರತೋಃ ॥ ೧೯ ॥**

**ನ ಚಾಪ್ಯೇಭಿರಪೂತೈಸ್ತು ಆಪದ್ಯಪಿ ಹಿ ಕರ್ಹಿಚಿತ್ ।**
**ಬ್ರಾಹ್ಮಂ ಯೌನಂ ಚ ಸಂಬಂಧಮಾಚರೇತ್ ಬ್ರಹ್ಮಣಾ ಸಹ ॥ ೨೦ ॥**

**ಭವಂತಿ ರಾಜಂಶ್ಚರ್ಮಾಣಿ ವ್ರತಿನಾಂ ತ್ರಿವಿಧಾನಿ ಚ ।**
**ಕಾರ್ಷ್ಣರೌರವಬಾಸ್ತಾನಿ ಬ್ರಹ್ಮಕ್ಷತ್ರವಿಶಾಂ ನೃಪ ॥ ೨೧ ॥**

---

೧೭. ವಟುವಿಗೆ ಬಲವುಂಟಾಗಲೆಂದು ಅಪೇಕ್ಷಿಸುವ ಕ್ಷತ್ರಿಯನು ಆರನೆಯ ವರ್ಷದಲ್ಲಿ ಉಪನಯನಮಾಡಲಿ. ವೈಶ್ಯನು ವಟುವಿಗೆ ಧನವೃದ್ಧಿಯಾಗಲಿ ಎಂಬ ಆಶೆಯಿದ್ದರೆ ಎಂಟನೆಯ ವರ್ಷದಲ್ಲಿ ಉಪನಯನ ಮಾಡಬೇಕು.

೧೮. ಎಲೈ ರಾಜನೇ ! ಬ್ರಾಹ್ಮಣನಿಗೆ ಹದಿನಾರನೆಯವರ್ಷ ತುಂಬುವ ವರೆಗೂ ಕ್ಷತ್ರಿಯನಿಗೆ ಇಪ್ಪತ್ತೆರಡನೆಯವರ್ಷ ತುಂಬುವವರೆಗೂ, ವೈಶ್ಯನಿಗೆ ಇಪ್ಪತ್ತ ನಾಲ್ಕನೇವರ್ಷ ತುಂಬುವವರೆಗೂ ಗಾಯತ್ರೀ ಗ್ರಹಣಕಾಲವು ಮೀರುವುದಿಲ್ಲ.

೧೯. ಎಲೈ ರಾಜನೇ ! ಈ ವಯಸ್ಸುಗಳು ಅತಿಕ್ರಮಿಸಿದರೂ ಯಾರಿಗೆ ಉಪನಯನ ಸಂಸ್ಕಾರವಾಗುವುದಿಲ್ಲವೋ ಅವರು ಪತಿತಸಾವಿತ್ರೀಕರಾಗುವರು. ಎಂದರೆ ಯಜ್ಞಾದಿಗಳಿಗೆ ಸೇರಿಸಲು ಅರ್ಹರಲ್ಲದ ವ್ರಾತ್ಯರಾಗುವರು.

೨೦. ಬ್ರಾಹ್ಮಣನು ಎಂತಹ ವಿಪತ್ಕಾಲದಲ್ಲಾದರೂ ಅಪರಿಶುದ್ಧರಾದ ಈ ಪತಿತರೊಡನೆ ವಿವಾಹ ಸಂಬಂಧವನ್ನೂ, ವೇದಾಧ್ಯಯನವನ್ನೂ ಆಚರಿಸ ಬಾರದು.

೨೧. ಅಯ್ಯಾ ರಾಜನೇ ! ಬ್ರಾಹ್ಮಣವರ್ಣ, ಕ್ಷತ್ರಿಯವರ್ಣ, ವೈಶ್ಯವರ್ಣ ಗಳ ವಟುಗಳು ಬೇರೆ ಬೇರೆ ಮೂರು ಬಗೆಯ ಚರ್ಮಗಳನ್ನು ಧರಿಸತಕ್ಕದೆಂದು

ವಸೀರಂಶ್ಚಾನುಪೂರ್ವ್ಯೇಣ ವಸ್ತ್ರಾಣಿ ವಿವಿಧಾನಿ ಚ ।
ಬ್ರಹ್ಮಕ್ಷತ್ರವಿಶೋ ರಾಜನ್ ಶಾಣಕ್ಷೌಮಾದಿಕಾನಿ ಚ ॥ ೨೨ ॥

ಮೌಂಜೀ ತ್ರಿವೃತ್ಸಮಾ ಶ್ಲಕ್ಷ್ಣಾ ಕಾರ್ಯಾ ವಿಪ್ರಸ್ಯ ಮೇಖಲಾ ।
ಕ್ಷತ್ರಿಯಸ್ಯ ಚ ಮೌರ್ವೀಜ್ಯಾ ವೈಶ್ಯಸ್ಯ ಶಣತಾಂತವೀ ॥ ೨೩ ॥

ಮುಂಜಾಲಾಭೇ ತು ಕರ್ತವ್ಯಾ ಕುಶಾಶ್ಮಂತಕ ಬಲ್ವಜೈಃ ।
ತ್ರಿವೃತಾ ಗ್ರಂಥಿನೈಕೇನ ತ್ರಿಭಿಃ ಪಂಚಭಿರೇವ ಚ ॥ ೨೪ ॥

ಕಾರ್ಪಾಸಮುಪವೀತಂ ಸ್ಯಾತ್ ವಿಪ್ರಸ್ಯೋರ್ಧ್ವವೃತಂ ತ್ರಿವೃತ್ ।
ಶಣಸೂತ್ರಮಯಂ ರಾಜ್ಞೋ ವೈಶ್ಯಸ್ಯಾವಿಕ ಸೌತ್ರಿಕಂ ॥ ೨೫ ॥

---

ಹೇಳಿದೆ. ಕೃಷ್ಣಮೃಗ ಎಂದರೆ ಜಿಂಕೆ (ರುರು ಎಂದರೆ ಕಡವೆ, ಬಸ್ತಾ ಎಂದರೆ ಕುರಿ) ಇವುಗಳ ಚರ್ಮಗಳು ಆ ವರ್ಣದ ವಟುಗಳಿಗೆ ಕ್ರಮವಾಗಿ ಧಾರಣಯೋಗ್ಯಗಳು.

೨೨. ಆ ವಟುಗಳು ಹೀಗೆಯೇ ಬಗೆಬಗೆಯ ವಸ್ತ್ರಗಳನ್ನು ಧರಿಸಬೇಕು ಎಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ವಟುಗಳು ಕ್ರಮವಾಗಿ ಕಿತ್ತಾನಾರಿನ ಬಟ್ಟೆ, ರೇಷ್ಮೆಯ ಬಟ್ಟೆ, ಮೊದಲಾದುವುಗಳನ್ನು ಧರಿಸಬೇಕು.

೨೩. ನೊಜೆ ಹುಲ್ಲನ್ನು ಹೆಣೆದು ನಯವಾಗಿಯೂ ಮೃದುವಾಗಿಯೂ ಸೊಂಟದಸುತ್ತ ಸರಿಯಾಗಿ ಮೂರುಸುತ್ತು ಆಗುವಂತೆಯೂ ಮಾಡಿರುವ ಮೇಖಲೆಯನ್ನು ಬ್ರಾಹ್ಮಣವಟು ಧರಿಸಬೇಕು. ಅದೇ ಅಳತೆಯ ಧನುಸ್ಸಿನ ಹೆದೆಯನ್ನು ಕ್ಷತ್ರಿಯನಿಗೂ ಶಣಬಿನ ಹುರಿಯನ್ನು ವೈಶ್ಯನಿಗೂ ಮೇಖಲೆಯನ್ನಾಗಿ ಮಾಡಬೇಕು.

೨೪. ನೊಜೇ ಹುಲ್ಲು ಸಿಕ್ಕದಿದ್ದರೆ ದರ್ಭೆಗಳಿಂದಲಾದರೂ ಕಲ್ಲುಹೂ, ಬಿಲ್ವ ಇವುಗಳ ನೂಲಿನಿಂದಾದರೂ ಸೊಂಟದಸುತ್ತಲೂ ಮೂರುಸುತ್ತುಗಳು ಮತ್ತು ಒಂದು ಗ್ರಂಥಿಯೂ ಬರುವಂತೆ ಮಾಡಬೇಕು. ಐದು ಸುತ್ತುಗಳು ಬರುವಂತೆಯೂ ಮಾಡಬಹುದು.

೨೫. ಬ್ರಾಹ್ಮಣನು ಮೂರುಸುತ್ತುಗಳುಳ್ಳದಾಗಿ ಹತ್ತಿಯಿಂದ ಮಾಡಿದ ಯಜ್ಞೋಪವೀತವನ್ನು ಶರೀರದ ಮೇಲ್ಭಾಗದಿಂದ ಧರಿಸತಕ್ಕದ್ದು ಕ್ಷತ್ರಿಯನಿಗೆ ಶಣಬಿನ ನೂಲಿನ ಉಪವೀತವನ್ನೂ ವೈಶ್ಯನಿಗೆ ಕುರಿಯ ಉಣ್ಣೆಯ ದಾರದಿಂದ ಮಾಡಿದ ಉಪವೀತವನ್ನೂ ಉಪಯೋಗಿಸಬೇಕು.

ಪುಷ್ಕರಾಣಿ ತಥಾ ಚೈಷಾಂ ಭವಂತಿ ತ್ರಿವಿಧಾನಿ ತು ।
ಬ್ರಹ್ಮಣೋ ಬೈಲ್ವಪಾಲಾಶೌ ತೃತೀಯಂ ಪ್ಲಕ್ಷಜಂ ನೃಪ　　॥ ೨೬ ॥

ವಾಟಖಾದಿರೌ ಕ್ಷತ್ರಿಯಸ್ಸ್ತು ತಥಾನ್ಯಂ ವೇತಸೋದ್ಭವಂ ।
ಪೈಲವೋದುಂಬರೌ ವೈಶ್ಯಃ ತಥಾಶ್ವತ್ಥಜಮೇವ ಹಿ　　॥ ೨೭ ॥

ದಂಡಾನೇತಾನ್ ಮಹಾಬಾಹೋ ಧರ್ಮತೋಽರ್ಹಂತಿ ಧಾರಿತುಂ ।
ಕೇಶಾಂತಿಕೋ ಬ್ರಾಹ್ಮಣಸ್ಯ ದಂಡಃ ಕಾರ್ಯಃ ಪ್ರಮಾಣತಃ　　॥ ೨೮ ॥

ಲಲಾಟಸಂಮಿತೋ ರಾಜ್ಞಃ ಸ್ಯಾತ್ತು ನಾಸಾಂತಿಕೋ ವಿಶಃ ।
ಋಜವಸ್ತೇ ತು ಸರ್ವೇ ಸ್ಯುಃ ಬ್ರಹ್ಮಣಾಂ ಸೌಮ್ಯ ದರ್ಶನಾಃ　　॥ ೨೯ ॥

---

೨೬. ಹೀಗೆಯೇ ಇವರಿಗೆ ಮೂರು ಬಗೆಯಾದ ದಂಡಗಳು ಕ್ಲೃಪ್ತವಾಗಿವೆ. ಬ್ರಾಹ್ಮಣನಿಗೆ ಬಿಲ್ವದಂಡ, ಪಲಾಶದಂಡ ಅಥವಾ ಮೂರನೆಯದು ಪ್ಲಕ್ಷ (ಬಸರಿಯ ಗಿಡದ) ದಂಡವಾದರೂ ಆಗಬಹುದು.

೨೭. ಕ್ಷತ್ರಿಯನಿಗೆ ಆಲದದಂಡ ಅಥವಾ ಕಗ್ಗಲಿಯ ದಂಡವೋ ನೀರಂಜಿಯ ದಂಡವೋ ಆಗಬೇಕು. ವೈಶ್ಯನಿಗೆ ಬಗಿನಿಯದಂಡ, ಅತ್ತಿಯದಂಡ ಅಥವಾ ಅಶ್ವತ್ಥ ದಂಡ ಇವುಗಳಲ್ಲೊಂದು ಆಗಬಹುದು.

೨೮. ಎಲೈ ಮಹಾಬಾಹುವೇ ! ಈ ದಂಡಗಳನ್ನು ಧರಿಸಲು ಅರ್ಹವಾದ ಒಂದು ಪ್ರಮಾಣವೂ ಇರುತ್ತದೆ. ಬ್ರಾಹ್ಮಣನು ಧರಿಸುವ ದಂಡವು ಪಾದದಿಂದ ಹಿಡಿದು ತಲೆಯವರೆಗೆ ಎತ್ತರವಾಗಿರಬೇಕು. ರಾಜನಿಗೆ ಹಣೆಯ ಮಟ್ಟದ ದೊಣ್ಣೆಯೂ, ವೈಶ್ಯನಿಗೆ ಪಾದದಿಂದ ಮೂಗಿನವರೆಗೆ ಎತ್ತರವಾದ ಡಂಡವೂ ಇರ ಬೇಕು. ಇವೆಲ್ಲವೂ ಡೊಂಕಿಲ್ಲದೆ ನೇರವಾಗಿರಬೇಕು.

೨೯. ಬ್ರಾಹ್ಮಣನಿಗೆ ಉಕ್ತಗಳಾಗಿರುವ ದಂಡಗಳು ನೇರವಾಗಿಯೂ ನೋಡು ವುದಕ್ಕೆ ಸೌಮ್ಯಗಳಾಗಿಯೂ ಮನುಷ್ಯ ಪ್ರಾಣಿಗಳಿಗೆ ಗಾಬರಿಯನ್ನುಂಟುಮಾಡದವು ಗಳಾಗಿಯೂ ಮೇಲಣ ತೊಗಟೆಯಿಂದ ಕೂಡಿದವುಗಳಾಗಿಯೂ ಬೆಂಕಿ ಸೋಕದವು ಗಳಾಗಿಯೂ ಇರಬೇಕು.

ಅನುದ್ವೇಗಕರಾ ನ್ನ್ಯಾಣಾಂ ಸತ್ವಚೋ ನಾಗ್ನಿದೂಷಿತಾಃ ।
ಪ್ರಗೃಹ್ಯ ಚೇಪ್ಸಿತಂ ದಂಡಂ ಉಪಸ್ಥಾಯ ಚ ಭಾಸ್ಕರಂ ॥ ೩೦ ॥

ಸಮ್ಯಗ್ಗುರುಂ ತಥಾ ಪೂಜ್ಯ ಚರೇದ್ಭೈಕ್ಷ್ಯಂ ಯಥಾವಿಧಿ ।
ಭವತ್ಪೂರ್ವಂ ಚರೇದ್ಭೈಕ್ಷ್ಯಂ ಉಪನೀತೋ ದ್ವಿಜೋತ್ತಮಃ ॥ ೩೧ ॥

ಭವನ್ಮಧ್ಯಂ ತು ರಾಜನ್ಯೋ ವೈಶ್ಯಸ್ಯ ಭವದುತ್ತರಂ ।
ಮಾತರಂ ವಾ ಸ್ವಸಾರಂ ವಾ ಮಾತುರ್ವಾ ಭಗಿನೀಂ ನಿಜಾಂ ॥ ೩೨ ॥

ಭಿಕ್ಷೇತ ಭೈಕ್ಷ್ಯಂ ಪ್ರಥಮಂ ಯಾ ಚೈನಂ ನಾವಮಾನಯೇತ್ ।
ಸುವರ್ಣಂ ರಜತಂಚಾನ್ನಂ ಸಾಪಾತ್ರೇಽಸ್ಯ ವಿನಿರ್ದಿಶೇತ್ ॥ ೩೩ ॥

ಸಮಾಹೃತ್ಯ ತತೋ ಭೈಕ್ಷ್ಯಂ ಯಾವದರ್ಥಮಮಾಯಯಾ ।
ನಿವೇದ್ಯ ಗುರವೇಽಶ್ನೀಯಾದಾಚಮ್ಯ ಪ್ರಾಙ್ಮುಖಃ ಶುಚಿಃ ॥ ೩೪ ॥

---

೩೦. ಈ ಲಕ್ಷಣಗಳಿಂದ ಕೂಡಿ ತನಗೆ ಇಷ್ಟವಾದ ದಂಡಗಳನ್ನು ಹಿಡಿದು ಸೂರ್ಯೋಪಸ್ಥಾನವನ್ನು ಮಾಡಿ ಮತ್ತು ಚೆನ್ನಾಗಿ ಗುರುಪೂಜೆಯನ್ನೂ ನೆರವೇರಿಸಿ ವಿಧಿಗನುಸಾರವಾಗಿ ಭಿಕ್ಷಾಚರಣೆಯನ್ನು ಮಾಡಬೇಕು

೩೧. ಉತ್ತಮನಾದ ಬ್ರಾಹ್ಮಣನು ಭವಚ್ಛಬ್ದಪೂರ್ವಕವಾಗಿ "ಭವತಿ ಭಿಕ್ಷಾಂ ದೇಹಿ" ಎಂಬದಾಗಿ ಭಿಕ್ಷೆಯನ್ನು ಕೇಳಬೇಕು.

೩೨. ಕ್ಷತ್ರಿಯನು ಭವಚ್ಛಬ್ದವು ಮಧ್ಯಕ್ಕೆ ಬರುವಂತೆ "ಭಿಕ್ಷಾಂ ಭವಾನ್ ದದಾತು" ಎನ್ನಬೇಕು. ವೈಶ್ಯನು "ಭಿಕ್ಷಾಂದೇಹಿ ಭವತಿ" ಎಂದು ಭವತ್ ಶಬ್ದವು ಕಡೆಗೆ ಬರುವಂತೆ ಹೇಳಬೇಕು.

೩೩. ಪ್ರಥಮ ಭಿಕ್ಷೆಯನ್ನು ತಾಯಿಯಿಂದಲೋ, ಸಹೋದರಿಯಿಂದಲೋ, ತನ್ನ ತಾಯಿಯ ಸಹೋದರಿಯಿಂದಲೋ, ಅಂತು ತನಗೆ ಅವಮಾನಮಾಡದೆ ಇರುವ ಸ್ತ್ರೀಯನ್ನು ಕೇಳಿ ಸ್ವೀಕರಿಸಬಹುದು. ಆಕೆಯು ಚಿನ್ನ, ಬೆಳ್ಳಿ ಇವನ್ನೂ, ಆಹಾರ ದ್ರವ್ಯಗಳನ್ನೂ ಇವನ ಪಾತ್ರೆಗೆ ಹಾಕಬೇಕು.

೩೪. ಭಿಕ್ಷಾನ್ನವನ್ನು ತಂದಮೇಲೆ ಮೋಸವಿಲ್ಲದಂತೆ ದ್ರವ್ಯರೂಪವಾದ್ದನ್ನು ಗುರುವಿಗೆ ಒಪ್ಪಿಸಿ ಆಹಾರರೂಪವಾದುದನ್ನು ತಾನು ಇಟ್ಟುಕೊಂಡು ಪೂರ್ವಾಭಿಮುಖವಾಗಿ ಕುಳಿತು ಆಚಮನಮಾಡಿ ಶುದ್ಧನಾಗಿ ಭೋಜನಮಾಡಬೇಕು.

ಆಯುಷ್ಯಂ ಪ್ರಾಙ್ಮುಖೋ ಭುಂಕ್ತೇ ಯಶಸ್ಯಂ ದಕ್ಷಿಣಾಮುಖಃ ।
ಶ್ರಿಯಂ ಪ್ರತ್ಯಙ್ಮುಖೋ ಭುಂಕ್ತೇ ಋತಂ ಭುಂಕ್ತೇ ಉದಙ್ಮುಖಃ॥ ೩೫ ॥

ಉಪಸ್ಪೃಶ್ಯ ದ್ವಿಜೋ ರಾಜನ್ ಅನ್ನಮದ್ಯಾತ್ ಸಮಾಹಿತಃ ।
ಭುಕ್ತ್ವಾಚೋಪಸ್ಪೃಶೇತ್ಸಮ್ಯಗದ್ಭಿಃ ಖಾನಿ ಚ ಸಂಸ್ಪೃಶೇತ್ ॥ ೩೬ ॥

ತಥಾನ್ನಂ ಪೂಜಯೇನ್ನಿತ್ಯಂ ಅದ್ಯಾಚ್ಚೈತದಕುತ್ಸಯನ್ ।
ದರ್ಶನಾತ್ತಸ್ಯ ಹೃಷ್ಯೇದ್ವೈ ಪ್ರಸೀದೇಚ್ಚಾಪಿ ಭಾರತ ॥ ೩೭ ॥

ಅಭಿನಂದ್ಯ ತತೋಽಶ್ನೀಯಾದಿತ್ಯೇವಂ ಮನುರಬ್ರವೀತ್ ।
ಪೂಜಿತಂತ್ವಶನಂ ನಿತ್ಯಂ ಬಲಮೋಜಶ್ಚ ಯಚ್ಛತಿ ॥ ೩೮ ॥

---

೩೫. ಪೂರ್ವಮುಖನಾಗಿ ಭುಂಜಿಸಿದರೆ ಆಯುರ್ವೃದ್ಧಿಯಾಗುವುದು. ದಕ್ಷಿಣಮುಖವಾಗಿ ಭುಂಜಿಸಿದರೆ ಕೀರ್ತಿವಂತನಾಗುವನು. ಪಶ್ಚಿಮಾಭಿಮುಖವಾಗಿ ಭುಂಜಿಸಿದರೆ ಶ್ರೀಮಂತನಾಗುವನು. ಉತ್ತರಾಭಿಮುಖನಾಗಿ ಭುಂಜಿಸಿದರೆ ಸತ್ಯಶೀಲನಾಗುವನು.

೩೬. ಅಯ್ಯಾ ರಾಜನೇ! ಬ್ರಾಹ್ಮಣನು ಆಚಮನವನ್ನುಮಾಡಿ ಮನಸ್ಸಮಾಧಾನದಿಂದ ಎಂದರೆ ಬೇರೆ ಆಲೋಚನೆಗಳಿಂದ ಮನಸ್ಸು ಚಂಚಲವಾಗದಂತೆ ಮಾಡಿಕೊಂಡು ಅನ್ನವನ್ನು ಭುಂಜಿಸಬೇಕು. ಭೋಜನ ಮಾಡಿದಮೇಲೆ ಆಚಮನವನ್ನು ಮಾಡಿ ಜಲದಿಂದ ಕಣ್ಣು, ಮೂಗು ಮೊದಲಾದ ಇಂದ್ರಿಯಗಳನ್ನು ಚೆನ್ನಾಗಿ ಸ್ಪರ್ಶಮಾಡಿಕೊಳ್ಳಬೇಕು.

೩೭. ಅಡಿಗೆಯ ಗುಣದೋಷ ವಿಮರ್ಶೆಮಾಡದೆ ನಿತ್ಯವೂ ಅನ್ನವನ್ನು ಪೂಜಿಸಿ ಭುಂಜಿಸಬೇಕು. ಆ ಅನ್ನವನ್ನು ನೋಡುವುದರಿಂದ ಸಂತೋಷಹೊಂದಿ ಪ್ರಸನ್ನನೂ ಆಗಬೇಕು.

೩೮. ಆಮೇಲೆ ಅನ್ನದ ಗುಣವನ್ನು ಹೊಗಳುತ್ತಾ ಭೋಜನಮಾಡಬೇಕು. ಹೀಗೆ ಮಾಡಬೇಕೆಂದು ಮನುವು ಹೇಳಿದ್ದಾನೆ. ಹೀಗೆ ಪೂಜಿತವಾದ ಅನ್ನವನ್ನು ಸೇವಿಸಿದರೆ ಅದು ಯಾವಾಗಲೂ ಬಲವನ್ನೂ, ಕಾಂತಿಯನ್ನೂ ಕೊಡುತ್ತದೆ.

**ಅಪೂಜಿತಂ ತು ತದ್ಭುಕ್ತಮುಭಯಂ ನಾಶಯೇದಿದಂ ।**
**ನೋಚ್ಛಿಷ್ಟಂ ಕಸ್ಯಚಿದ್ದದ್ಯಾತ್ ನಾದ್ಯಾಚ್ಚೈತತ್ತಥಾಂತರಾ ॥ ೩೯ ॥**

**ಯಸ್ತ್ವನ್ನಮಂತರಾ ಕೃತ್ವಾ ಲೋಭಾದತ್ತಿ ನೃಪೋತ್ತಮ ।**
**ವಿನಾಶಂ ಯಾತಿ ಸ ನರಃ ಇಹಲೋಕೇ ಪರತ್ರ ಚ ।**
**ಯಥಾಭವತ್ಪುರಾ ವೈಶ್ಯೋ ಧನವರ್ಧನಸಂಜ್ಞಿತಃ ॥ ೪೦ ॥**

**॥ ಶತಾನೀಕ ಉವಾಚ ॥**

**ಸ ಕಥಮಂತರಂ ಪೂರ್ವಮನ್ನಸ್ಯ ದ್ವಿಜಸತ್ತಮ ।**
**ಕಿಮಂತರಂ ತಥಾನ್ನಸ್ಯ ಕಥಂ ವಾ ತತ್ಕೃತಂ ಭವೇತ್ ॥ ೪೧ ॥**

**॥ ಸುಮಂತು ರುವಾಚ ॥**

**ಪುರಾ ಕೃತಯುಗೇ ರಾಜನ್ ವೈಶ್ಯೋ ವಸತಿ ಪುಷ್ಕರೇ ।**
**ಧನವರ್ಧನನಾಮಾ ವೈ ಸಮೃದ್ಧೋ ಧನಧಾನ್ಯತಃ ॥ ೪೨ ॥**

---

೩೯. ಅದನ್ನು ಪೂಜಿಸದೆ ನಿಂದಿಸುತ್ತಾ ಭುಜಿಸಿದರಂತೂ ಅದು ಬಲ ಓಜಸ್ಸುಗಳೆರಡನ್ನೂ ನಾಶಮಾಡುವುದು. ತಿಂದು ಮಿಕ್ಕ ಎಂಜಲನ್ನು ಯಾರಿಗೂ ಕೊಡಬಾರದು. ಮತ್ತು ಊಟದ ಮಧ್ಯದಲ್ಲಿ ಅನ್ನವನ್ನು ಬಿಟ್ಟು ಎದ್ದು ಪುನಃ ಅದೇ ಎಲೆಯಲ್ಲಿ ಊಟಮಾಡಬಾರದು.

೪೦. ಎಲೈ ರಾಜೇಂದ್ರನೇ! ಯಾವನು ಒಂದುಸಾರಿ ಊಟಕ್ಕೆ ಕುಳಿತು ಕೊಂಡು ತಿನ್ನುತ್ತಿದ್ದ ಆಹಾರವನ್ನು ಬಿಟ್ಟು ಎದ್ದು ಬಹಳ ಕಾಲಾನಂತರದಲ್ಲಿ ಲೋಭ ದಿಂದ ಪುನಃ ಅದನ್ನೇ ತಿನ್ನುತ್ತಾನೋ ಅವನು ಇಹಪರಲೋಕಗಳಲ್ಲಿ ನಾಶ ಹೊಂದು ತ್ತಾನೆ. ಪೂರ್ವದಲ್ಲಿ ಧನವರ್ಧನನೆಂಬ ವೈಶ್ಯನು ಹೀಗೆಯೇ ಮಾಡಿ ನಾಶವಾದನು ಎಂದನು.

೪೧. ಶತಾನೀಕರಾಜನು ಕೇಳಿದನು—ಎಲೈಬ್ರಾಹ್ಮಣ ಶ್ರೇಷ್ಠನೇ! ಪೂರ್ವ ದಲ್ಲಿ ಆ ವೈಶ್ಯನು ಹೇಗೆ ಕಾಲಾವಕಾಶಮಾಡಿ ತಿಂದನು. ಅನ್ನಕ್ಕೆ ಅಂತರ ಮಾಡುವು ದೆಂದರೇನು ? ಅದನ್ನು ಹೇಗೆ ಮಾಡಿದನು.

೪೨. ಆಗ ಸುಮಂತು ಋಷಿವರ್ಯರು ಹೇಳುತ್ತಾರೆ—ಎಲೈ ರಾಜನೇ! ಪೂರ್ವದಲ್ಲಿ ಕೃತಯುಗದಲ್ಲಿ ಪುಷ್ಕರದ್ವೀಪದಲ್ಲಿ ಧನವರ್ಧನನೆಂಬ ಧನಧಾನ್ಯ ಸಮೃದ್ಧನಾದ ವೈಶ್ಯನಿದ್ದನು. ಅವನು ಮಿತ್ರರಿಂದಲೂ, ಬಂಧುಗಳಿಂದಲೂ ಕೂಡಿ ಸುಖವಾಗಿದ್ದನು.

ನಿದಾಘ ಕಾಲೇ ರಾಜೇಂದ್ರ ಸಕೃತ್ವಾ ವೈಶ್ವದೇವಿಕಂ ।
ಸಪುತ್ರಭ್ರಾತೃಭಿಃ ಸಾರ್ಧಂ ತಥಾ ನ್ಯೈ ಮಿತ್ರ ಬಂಧುಭಿಃ ॥ ೪೩ ॥

ಆಹಾರಂ ಕುರುತೇ ರಾಜನ್ ಭಕ್ಷ್ಯ ಭೋಜ್ಯಸಮನ್ವಿತಂ ।
ಅಥ ತದ್ಭುಂಜತಸ್ತಸ್ಯ ಅನ್ನಂ ಶಬ್ದೋ ಮಹಾನಭೂತ್ ।
ಕರುಣಂ ಕುರು ಶಾರ್ದೂಲ ಅಥ ತಂ ಸಂಪ್ರಧಾವಿತಃ ॥ ೪೪ ॥

ತ್ಯಕ್ತ್ವಾ ಸ ಭೋಜನಂ ಯಾವತ್ ನಿಷ್ಕ್ರಾಂತೋ ಗೃಹಬಾಹ್ಯತಃ ।
ಅಥ ಶಬ್ದಸ್ತಿರೋಭೂತಃ ಸ ಭೂಯೋ ಗೃಹಮಾಗತಃ ॥ ೪೫ ॥

ತಮೇವ ಭಾಜನಂ ಗೃಹ್ಯ ಆಹಾರಂ ಕೃತವಾನ್ ನೃಪ ।
ಭುಕ್ತಶೇಷಂ ಮಹಾಬಾಹೋ ಆಹಾರಂ ಸ ತು ಭುಕ್ತವಾನ್ ॥ ೪೬ ॥

ಭುಕ್ತ್ವಾ ಸ ಶತಧಾ ಜಾತಃ ತಸ್ಮಿನ್ನೇವ ಕ್ಷಣೇ ನೃಪ ।
ತಸ್ಮಾದನ್ನಂ ನ ರಾಜೇಂದ್ರ ಅಶ್ನೀಯಾದಂತರಾ ಕ್ವಚಿತ್ ॥ ೪೭ ॥

---

೪೩-೪೪. ಅಯ್ಯಾ ರಾಜೇಂದ್ರ! ಅವನು ಬೇಸಿಗೆಯಲ್ಲಿ ಪುತ್ರಮಿತ್ರ ಬಂಧುಗಳೊಡಗೂಡಿ ವೈಶ್ವದೇವವೆಂಬ ಕರ್ಮವನ್ನು ಮಾಡಿ ಭೋಜನಪಾತ್ರದಲ್ಲಿ ಭಕ್ಷ್ಯ ಭೋಜ್ಯಯುಕ್ತವಾದ ಅಹಾರವನ್ನು ಸೇವಿಸುತ್ತಿದ್ದನು. ಹಾಗೆ ಅವನು ಅನ್ನವನ್ನು ಭುಜಿಸುತ್ತಿದ್ದಾಗ "ಅಯ್ಯೋ" ಎಂಬದಾಗಿ ದೊಡ್ಡ ಶಬ್ದವಾಯಿತು.

೪೫. ಹಾಗೆ ಶಬ್ದವಾದ ಕೂಡಲೆ ಆ ತರುಣನು ಊಟಮಾಡುವುದನ್ನು ಬಿಟ್ಟು ಎದ್ದು ಆ ಶಬ್ದವಾದ ಸ್ಥಳಕ್ಕೇ ಓಡಿದನು. ಅವನು ಯಾವಾಗ ಊಟವನ್ನು ಬಿಟ್ಟು ಮನೆಯ ಹೊರಗಡೆಯ ಪ್ರದೇಶಕ್ಕೆ ಓಡಿದನೋ ಆಗ ಆ ಸದ್ದು ಕೇಳಿಸದೆ ಹೋಯಿತು. ಅವನು ಮತ್ತೆ ಮನೆಗೆ ಬಂದು ಮೊದಲು ಭೋಜನಮಾಡುತ್ತಿದ್ದು ಬಿಟ್ಟು ಎದ್ದಿದ್ದ ಆ ಭೋಜನಪಾತ್ರೆಯಲ್ಲೇ ಮತ್ತೆ ಊಟಕ್ಕೆ ಕುಳಿತನು.

೪೬-೪೭. ಎಲೈ ಮಹಾಬಾಹುವೇ! ಹೀಗೆ ಒಂದುಸಾರಿ ತಿಂದು ಮಿಕ್ಕಿದ್ದ ಆಹಾರವನ್ನೇ ಪುನಃ ಅವನು ತಿಂದನು. ತಿಂದಕ್ಷಣದಲ್ಲೇ ಅವನು ನೂರುಪಾಲಾಗಿ ಬಿರಿದುಹೋದನು. ಎಲೈ ರಾಜೇಂದ್ರನೇ! ಈ ಕಾರಣದಿಂದಲೇ ಯಾವಾಗಲೂ ಊಟದ ಮಧ್ಯದಲ್ಲಿ ಬಿಟ್ಟು ಎದ್ದು ಸ್ವಲ್ಪ ಕಾಲಾನಂತರ ಅದೇ ಎಲೆಯಲ್ಲಿ ಪುನಃ ಊಟ ಮಾಡಬಾರದು.

ನಚೈವಾತ್ಯಶನಂ ಕುರ್ಯಾತ್ ನಚೋಚ್ಛಿಷ್ಟಂ ಕ್ವಚಿದ್ವ್ರಜೇತ್ ।
ರಸೋ ಭವತ್ಯತ್ಯಶನಾತ್ ರಸಾದ್ರೋಗಃ ಪ್ರವರ್ತತೇ ॥ ೪೮ ॥

ಸ್ನಾನಂ ದಾನಂ ಜಪೋ ಹೋಮಃ ಪಿತೃದೇವಾಭಿಪೂಜನಂ ।
ನ ಭವಂತಿ ರಸೇ ಜಾತೇ ನರಾಣಾಂ ಭರತರ್ಷಭ ॥ ೪೯ ॥

ಅನಾರೋಗ್ಯಮನಾಯುಷ್ಯಮಸ್ವರ್ಗ್ಯಂ ಚಾತಿಭೋಜನಂ ।
ಅಪುಣ್ಯಂ ಲೋಕವಿದ್ವಿಷ್ಟಂ ತಸ್ಮಾತ್ತತ್ಪರಿವರ್ಜಯೇತ್ ॥ ೫೦ ॥

ಯಕ್ಷಭೂತಪಿಶಾಚಾನಾಂ ರಕ್ಷಸಾಂ ಚ ನೃಪೋತ್ತಮ ।
ಗಮ್ಯೋ ಭವತಿ ವೈ ವಿಪ್ರ ಉಚ್ಛಿಷ್ಟೋ ನಾತ್ರ ಸಂಶಯಃ ॥ ೫೧ ॥

ಶುಚಿತ್ವಮಾಶ್ರಯೇತ್ತಸ್ಮಾತ್ ಶುಚಿತ್ವಾನ್ಮೋದತೇ ದಿವಿ ।
ಸುಖೇನ ಚೇಹ ರಮತೇ ಇತೀಯಂ ವೈದಿಕೀ ಶ್ರುತಿಃ ॥ ೫೨ ॥

---

೪೮. ಮಿತಿಮೀರಿ ಊಟಮಾಡಬಾರದು. ಯಾವಾಗಲೂ ಎಲ್ಲಿಯೂ ಎಂಜಲನ್ನು ಸೇವಿಸಬಾರದು. ಅತಿಭೋಜನ ಮಾಡುವುದರಿಂದ ಆಹಾರವು ರಕ್ತವಾಗದೇ ರಸಾಂತರವಾಗಿ ಅದರಿಂದ ರೋಗೋತ್ಪತ್ತಿಯಾಗುವುದು.

೪೯-೫೧. ರಸದೋಷವುಂಟಾದವನು ಸ್ನಾನ, ದಾನ, ಜಪ, ಹೋಮ, ಪಿತೃಪೂಜೆ (ಶ್ರಾದ್ಧ) ದೇವತಾರ್ಚನೆ ಇವುಗಳಲ್ಲಿ ಯಾವುದನ್ನೂ ಮಾಡಲಾಗುವುದಿಲ್ಲ. ಆರೋಗ್ಯನಾಶಕವೂ, ಆಯುಃಕ್ಷಯಕಾರಣವೂ, ಸ್ವರ್ಗವೆಂಬ ಉತ್ತಮ ಗತಿಗೆ ಪ್ರತಿಬಂಧಕವೂ, ಪುಣ್ಯನಾಶಕವೂ ಆದ ಈ ಅತಿಭೋಜನವನ್ನು ಬಿಟ್ಟು ಬಿಡಬೇಕು. ಎಂಜಲನ್ನು ತಿನ್ನುವುದರಿಂದ ಕ್ಷಯ, ಭೂತಪಿಶಾಚಿಗಳ ಬಾಧೆ, ಇವುಗಳಿಗೆ ಗುರಿಯಾಗುತ್ತಾನೆ. ಇದರಲ್ಲಿ ಯಾವ ಸಂಶಯವೂ ಇರುವುದಿಲ್ಲ.

೫೨. ಈ ಕಾರಣದಿಂದ ಶುಚಿತ್ವವನ್ನು ಬಿಡಬಾರದು. ಶುಚಿತ್ವದಿಂದ ಕೂಡಿದವನು ಸ್ವರ್ಗಲೋಕದಲ್ಲಿ ಸಂತೋಷವನ್ನು ಹೊಂದುತ್ತಾನೆ. ಈ ಲೋಕದಲ್ಲಿಯೂ ಸುಖದಿಂದ ವಿನೋದಪಡುತ್ತಾನೆಂಬದಾಗಿ ವೇದದಲ್ಲಿ ಹೇಳಿದೆ" ಎಂದನು.

॥ ಶತಾನೀಕ ಉವಾಚ ॥
ಶುಚಿತಾಮಿಯಾತ್ಕಥಂ ವಿಪ್ರಃ ಕಥಂ ಚಾಶುಚಿತಾಮಿಯಾತ್ ।
ಏತನ್ಮೇ ಬ್ರೂಹಿ ವಿಪ್ರೇಂದ್ರ ಕೌತುಕಂ ಪರಮಂ ಮಮ ॥ ೫೩ ॥

॥ ಸುಮಂತುರುವಾಚ ॥
ಉಪಸ್ಪೃಶ್ಯ ಶುಚಿರ್ವಿಪ್ರೋ ಭವತೇ ಭರತರ್ಷಭ ।
ವಿಧಿವತ್ ಕುರುಶಾರ್ದೂಲ ಭವೇದ್ವಿಧಿಪರೋಽಹ್ಯತಃ ॥ ೫೪ ॥

॥ ಶತಾನೀಕ ಉವಾಚ ॥
ಉಪಸ್ಪರ್ಶವಿಧಿಂ ವಿಪ್ರ ಕಥಯ ತ್ವಂ ಮಮಾಖಿಲಂ ।
ಶುಚಿತ್ವಮಾಪ್ನುಯಾದ್ಯೇನ ಆಚಾಂತೋ ಬ್ರಾಹ್ಮಣೋ ದ್ವಿಜ ॥ ೫೫ ॥

॥ ಸುಮಂತುರುವಾಚ ॥
ಸಾಧು ಪೃಷ್ಟೋಽಸ್ಮಿ ರಾಜೇಂದ್ರ ಶೃಣು ವಿಪ್ರೋ ಯಥಾ ಭವೇತ್ ।
ಶುಚಿರ್ಭರತಶಾರ್ದೂಲ ವಿಧಿನಾ ಯೇನ ವಾ ವಿಭೋ ॥ ೫೬ ॥

---

೫೩. ಆಗ ಶತಾನೀಕರಾಜನು ಕೇಳುತ್ತಾನೆ—ಬ್ರಾಹ್ಮಣನು ಶುಚಿತ್ವವನ್ನು ಹೊಂದುವುದು ಹೇಗೆ? ಮತ್ತು ಅಶುಚಿತ್ವವನ್ನು ಹೊಂದುವುದು ಹೇಗೆ? ಎಲೈ ಬ್ರಾಹ್ಮಣೋತ್ತಮನೇ! ಇದನ್ನು ನನಗೆ ಹೇಳು ಬಹಳ ಕುತೂಹಲದಿಂದಿದ್ದೇನೆ ಎಂದನು.

೫೪. ಸುಮಂತು ಋಷಿಗಳು ಹೇಳುತ್ತಾರೆ—ಎಲೈ ಭರತಶ್ರೇಷ್ಠನೇ! ಬ್ರಾಹ್ಮಣನು ಆಚಮನವನ್ನು ವಿಧಿಪೂರ್ವಕವಾಗಿ ಮಾಡಿದರೆ ಶುದ್ಧನಾಗುತ್ತಾನೆ. ಆದ್ದರಿಂದ ವಿಧಿಯಂತೆ ಅನುಷ್ಠಾನಮಾಡಲೇಬೇಕು ಎಂದನು.

೫೫. ಆಗ ಶತಾನೀಕರಾಜನು ಪುನಃ ಕೇಳುತ್ತಾನೆ—"ಎಲೈ ಬ್ರಾಹ್ಮಣನೇ! ಯಾವ ವಿಧಿಯಿಂದ ಆಚಮನವನ್ನು ಮಾಡಿದರೆ ಶುದ್ಧನಾಗುವನೋ ಅಂತಹ ಆಚಮನವಿಧಾನವೆಲ್ಲವನ್ನೂ ನನಗೆ ಹೇಳು" ಎಂದನು.

೫೬. ಸುಮಂತು ಋಷಿವರ್ಯರು ಹೇಳುತ್ತಾರೆ—ಎಲೈ ರಾಜೇಂದ್ರನೇ! ನೀನು ನನ್ನನ್ನು ಕೇಳಿದುದು ಚೆನ್ನಾಗಿದೆ. ಬ್ರಾಹ್ಮಣನು ಹೇಗೆ ಆಚರಿಸಿದರೆ ಶುಚಿಯಾಗುವನೋ ಆ ಆಚಮನವಿಧಿ ಯಾವುದೆಂಬುದನ್ನು ಕೇಳು.

ಪ್ರಕ್ಷಾಲ್ಯ ಹಸ್ತೌ ಪಾದೌ ಚ ಪ್ರಾಙ್ಮುಖೋದಙ್ಮುಖೋಽಪಿ ವಾ ।
ಉಪವಿಶ್ಯ ಶುಚೌದೇಶೇ ಬಾಹುಂ ಕೃತ್ವಾ ಚ ದಕ್ಷಿಣಂ ॥ ೫೭ ॥

ಜಾನ್ವಂತರೇ ಮಹಾಬಾಹೋ ಬ್ರಹ್ಮಸೂತ್ರಸಮನ್ವಿತಃ ।
ಸುಸಮೌ ಚರಣೌ ಕೃತ್ವಾ ತಥಾ ಬದ್ಧಶಿಖೋ ನೃಪ ॥ ೫೮ ॥

ನತಿಷ್ಠನ್ನ ಚ ಸಂಜಲ್ಪಂಸ್ತಥಾ ಚಾನವಲೋಕಯನ್ ।
ನ ತ್ವರನ್ ಕುಪಿತೋ ನಾಪಿ ತ್ಯಕ್ತ್ವಾ ರಾಜನ್ ಸುದೂರತಃ ॥ ೫೯ ॥

ಪ್ರಸನ್ನಾಭಿಸ್ತಥಾದ್ಭಿಸ್ತು ಆಚಾಂತಃ ಶುಚಿತಾಮಿಯಾತ್ ।
ನೋಷ್ಣಾಭಿರ್ನ ಸಫೇನಾಭಿಯುಂಕ್ತಾಭಿಃ ಕಲುಷೇಣ ಚ ॥ ೬೦ ॥

ವರ್ಣೇನ ರಸಗಂಧಾಭ್ಯಾಂ ಹೀನಾಭಿರ್ನ ಚ ಭಾರತ ।
ಸಬುದ್ಬುಧಾಭಿಶ್ಚ ತಥಾ ನಾಚಾಮೇತ್ ಪಂಡಿತೋ ನೃಪ ॥ ೬೧ ॥

---

೫೭-೫೯. ಕೈಕಾಲುಗಳನ್ನು ಚೆನ್ನಾಗಿ ತೊಳೆದುಕೊಂಡು ಪೂರ್ವಮುಖನಾಗಿಯೋ ಉತ್ತರ ಮುಖನಾಗಿಯೋ ಶುದ್ಧವಾದ ಸ್ಥಳದಲ್ಲಿ ಕುಳಿತು ಬಲದ ತೋಳನ್ನು ಮಂಡಿಗಳ ಮಧ್ಯದಲ್ಲಿಟ್ಟುಕೊಂಡು ಯಜ್ಞೋಪವೀತ ಯುಕ್ತನಾಗಿ ಕಾಲುಗಳನ್ನು ಹೆಚ್ಚು ಕಡಮೆಯಿಲ್ಲದಂತೆ ಸಮವಾಗಿ ಮಾಡಿಕೊಂಡು ಕುಕ್ಕುರುಗಾಲಿನಲ್ಲಿ ಕುಳಿತು ಜುಟ್ಟನ್ನು ಗಂಟುಹಾಕಿಕೊಂಡು ಆಚಮನಮಾಡಬೇಕು. ನಿಂತುಕೊಂಡು ಆಚಮನ ಮಾಡಬಾರದು. ಆಚಮನ ಕಾಲದಲ್ಲಿ ಮಾತನಾಡಬಾರದು. ಮತ್ತೊಬ್ಬರನ್ನು ನೋಡಲೂಬಾರದು. ಅವಸರದಿಂದ ಆಚಮನ ಮಾಡಬಾರದು. ಕೋಪ ಯುಕ್ತನಾಗಿರುವಾಗ ಆಚಮನಮಾಡುವುದು ವಿಹಿತವಲ್ಲ.

೬೦. ನಿರ್ಮಲವಾದ ನೀರಿನಿಂದ ಹೀಗೆ ಆಚಮನವನ್ನು ಮಾಡಿದವನು ಶುದ್ಧಿಯನ್ನು ಹೊಂದುವನು. ಆಚಮನ ಮಾಡುವ ನೀರು ಬಿಸಿಯಾಗಿಯೂ ನೊರೆಯಿಂದ ಕೂಡಿಯೂ ಇರಬಾರದು. ಮತ್ತು ಕೊಳೆಯಿಂದ ಕೂಡಿಯೂ ಕೆಟ್ಟಬಣ್ಣ ರುಚಿ ವಾಸನೆ ಇವುಗಳಿಂದ ಕೂಡಿಯೂ ಇರಬಾರದು.

೬೧. ಪಂಡಿತನು ನೊರೆಗೂಡಿದ ನೀರಿನಿಂದ ಆಚಮನ ಮಾಡುವುದಿಲ್ಲ. ಅಯ್ಯಾ ರಾಜನೇ! ನೊರೆಯಿಂದ ಕೂಡಿದ ನೀರಿನಲ್ಲಿ ಆಚಮನಮಾಡುವುದು ಮದ್ಯಪಾನಸಮವೆಂದು ಶಾಸ್ತ್ರಾಧಾರವಿದೆ.

**ಪಂಚತೀರ್ಥಾನಿ ವಿಪ್ರಸ್ಯ ಶ್ರೂಯಂತೇ ದಕ್ಷಿಣೇ ಕರೇ ।**
**ದೇವತೀರ್ಥಂ ಪಿತೃತೀರ್ಥಂ ಬ್ರಹ್ಮತೀರ್ಥಂ ಚ ಮಾನದ ॥ ೬೨ ॥**

**ಪ್ರಾಜಾಪತ್ಯಂ ತಥಾ ಚಾನ್ಯತ್ತಥಾನ್ಯತ್ ಸೌಮ್ಯಮುಚ್ಯತೆ ।**
**ಅಂಗುಷ್ಠಮೂಲೋತ್ತರತೋ ಯೇಯಂ ರೇಖಾಮಹೀಪತೇ ॥ ೬೩ ॥**

**ಬ್ರಾಹ್ಮಂ ತೀರ್ಥಂ ವದಂತ್ಯೇತತ್ ವಸಿಷ್ಠಾದ್ಯಾ ದ್ವಿಜೋತ್ತಮಾಃ ।**
**ಕಾಯಂ ಕನಿಷ್ಠಿಕಾಮೂಲೇ ಅಂಗುಲ್ಯಗ್ರೇ ತು ದೈವತಂ ॥ ೬೪ ॥**

**ತರ್ಜನ್ಯಂಗುಷ್ಠಯೋರಂತಃ ಪಿತ್ರ್ಯಂ ತೀರ್ಥಮುದಾಹೃತಂ ।**
**ಕರಮಧ್ಯೇ ಸ್ಥಿತಂ ಸೌಮ್ಯಂ ಪ್ರಶಸ್ತಂ ದೇವಕರ್ಮಣಿ ॥ ೬೫ ॥**

**ದೇವಾರ್ಚಾ ಬಲಿಹರಣಂ ಪ್ರವಿಕ್ಷಪಣಮೇವ ಚ ।**
**ಏತಾನಿ ದೇವತೀರ್ಥೇನ ಕುರ್ಯಾತ್ ಕುರುಕುಲೋದ್ವಹ ॥ ೬೬ ॥**

---

೬೨. ಬ್ರಾಹ್ಮಣನ ಬಲಗೈಯಲ್ಲಿ ದೇವತೀರ್ಥ, ಪಿತೃತೀರ್ಥ, ಬ್ರಹ್ಮತೀರ್ಥ, ಪ್ರಜಾಪತ್ಯತೀರ್ಥ, ಸೌಮ್ಯತೀರ್ಥ ಎಂದು ಐದು ತೀರ್ಥಗಳಿವೆಯೆಂದು ಕೇಳಿದ್ದೇವೆ.

೬೩. ಅಂಗುಷ್ಠದ ಬುಡದ ಗೆರೆಯನ್ನನುಸರಿಸಿ ಬರುವ ಜಲವನ್ನು ವಸಿಷ್ಠಾದಿ ಋಷಿಶ್ರೇಷ್ಠರು ಬ್ರಾಹ್ಮತೀರ್ಥವೆಂದು ಹೇಳುತ್ತಾರೆ.

೬೪. ಕಿರುಬೆರಳಿನ ಬುಡದಲ್ಲಿ ಬೀಳುವ ತೀರ್ಥವೇ ಪ್ರಾಜಾಪತ್ಯ (ಕಾಯ) ತೀರ್ಥ, ಅಂಗುಳಿಗಳ ತುದಿಯಿಂದ ಬೀಳುವ ನೀರು ದೈವತೀರ್ಥ, ತರ್ಜನೀ ಅಂಗುಷ್ಠ ಇವುಗಳ ಮಧ್ಯದಲ್ಲಿ ಇರುವ ರೇಖೆಯಕೊನೆಯಲ್ಲಿ ಬೀಳುವ ನೀರು ಪಿತೃತೀರ್ಥ ವೆಂದು ಹೇಳಿದೆ.

೬೫. ಕೈಯಮಧ್ಯದಲ್ಲಿ ಎಂದರೆ ಅಂಗೈಯಲ್ಲಿರುವುದು ಸೌಮ್ಯತೀರ್ಥವೆಂದು ಉಕ್ತವಾಗಿದೆ. ಇದು ದೇವಕಾರ್ಯಗಳಲ್ಲಿ ಉತ್ತಮವಾದುದು.

೬೬. ಅಯ್ಯಾ ಕುರುಶ್ರೇಷ್ಠನೇ! ದೇವತಾರ್ಚನ, ವೈಶ್ವದೇವ, ಬಲಿಹರಣ, ಭೂತಯಜ್ಞಾದಿಗಳು ಇವುಗಳನ್ನು ದೇವತೀರ್ಥದಿಂದ ಮಾಡಬೇಕು.

ಅನ್ನನಿರ್ವಪಣಂ ರಾಜಂಸ್ತಥಾ ಸಪವನಂ ನೃಪ ।
ಲಾಜಾ ಹೋಮಂ ತಥಾ ಸೌಮ್ಯಂ ಪ್ರಾಜಾಪತ್ಯೇನ ಕಾ ॥ ೬೭ ॥

ಕಮಂಡಲೂಪಸ್ಪರ್ಶನಂ ಚ ದಧಿಪ್ರಾಶನಮೇವ ಚ ।
ಸೌಮ್ಯತೀರ್ಥೇನ ರಾಜೇಂದ್ರ ಸದಾ ಕುರ್ಯಾದ್ವಿಚಕ್ಷಣಃ ॥ ೬೮ ॥

ಪಿತೃಣಾಂ ತರ್ಪಣಂ ಕಾರ್ಯಂ ಪಿತೃತೀರ್ಥೇನ ಧೀಮತಾ ।
ಬ್ರಾಹ್ಮೇಣ ಚಾಪಿ ತೀರ್ಥೇನ ಸದೋಪಸ್ಪರ್ಶನಂ ಪರಂ ॥ ೬೯ ॥

ಘನಾಂಗುಲಿಂ ಕರಂ ಕೃತ್ವಾ ಏಕಾಗ್ರಃ ಸುಮನಾ ದ್ವಿಜಃ ।
ತ್ರಿಃ ಕೃತ್ವಾ ಯಃ ಪಿಬೇದಾಪೋ ಮುಖಶಬ್ದವಿವರ್ಜಿತಃ ॥ ೭೦ ॥

ಶೃಣು ಯತ್ಫಲಮಾಪ್ನೋತಿ ಪ್ರೀಣಾತಿ ಚ ಯಥಾ ಸುರಾನ್ ।
ಪ್ರಥಮಂ ಯತ್ಪಿಬೇದಾಪ ಋಗ್ವೇದಸ್ತೇನ ತುಷ್ಯತಿ ॥ ೭೧ ॥

---

೬೭. ಎಲೈ ರಾಜನೇ! ಅನ್ನನಿರ್ವಪಣ, ಅಗ್ನಿಗೆ ಗಾಳಿಹಾಕುವುದು, ಮತ್ತು ಸೋಮದೇವಕಾರ್ಯವಾದ ಲಾಜಾಹೋಮ, ಇವುಗಳನ್ನು ಪ್ರಜಾಪತ್ಯತೀರ್ಥದಿಂದ ಮಾಡಬೇಕು.

೬೮. ವಿವೇಚನೆಯುಳ್ಳ ಬುದ್ಧಿಶಾಲಿಯು ಕಮಂಡಲೂವಿನಿಂದ ಮಾಡುವ ಆಚಮನವನ್ನೂ, ದಧಿಪ್ರಾಶನವನ್ನೂ ಯಾವಾಗಲೂ ಸೌಮ್ಯತೀರ್ಥದಿಂದ ಮಾಡಬೇಕು.

೬೯. ಬುದ್ಧಿವಂತನು ಪಿತೃತೀರ್ಥದಿಂದ ಪಿತೃಗಳಿಗೆ ತರ್ಪಣವನ್ನು ಮಾಡಬೇಕು. ಬ್ರಾಹ್ಮತೀರ್ಥದಿಂದ ಆಚಮನವನ್ನು ಮಾಡುವುದು ಉತ್ತಮ.

೭೦. ಕೈಬೆರಳುಗಳನ್ನು ಸಂದುಬಿಡದಂತೆ ಒತ್ತಾಗಿ ಸೇರಿಸಿಕೊಂಡೂ, ಕುಡಿಯುವಾಗ ಬಾಯಲ್ಲಿ ಸದ್ದಾಗದಂತೆಯೂ ಮೂರುಸಲ ಒಂದೇ ಮನಸ್ಸಿನಿಂದ ನೀರನ್ನು ಕುಡಿಯಬೇಕು.

೭೧. ಹೀಗೆ ಮಾಡಿದವನಿಗೆ ಉಂಟಾಗುವ ಫಲವನ್ನೂ ಮತ್ತು ದೇವತೆಗಳಿಗೆ ಉಂಟಾಗುವ ತೃಪ್ತಿಯನ್ನೂ ಹೇಳುವೆನು ಕೇಳು. ಮೊದಲನೇಸಲ ನೀರು ಕುಡಿಯುವುದರಿಂದ ಋಗ್ವೇದವು ತೃಪ್ತಿಹೊಂದುತ್ತದೆ.

ಯದ್ದ್ವಿತೀಯಂ ಯಜುರ್ವೇದಃ ತೇನ ಪ್ರೀಣಾತಿ ಭಾರತ ।
ಯ ತ್ತೃತೀಯಂ ಸಾಮವೇದಃ ತೇನ ಪ್ರೀಣಾತಿ ಭಾರತ　　॥ ೭೨ ॥

ಪ್ರಥಮಂ ಯನ್ಮೃಜೇದಾಸ್ಯಂ ದಕ್ಷಿಣಾಂಗುಷ್ಠಮೂಲತಃ ।
ಅಥರ್ವವೇದಃ ಪ್ರೀಣಾತಿ ತೇನ ರಾಜನ್ ನ ಸಂಶಯಃ　　॥ ೭೩ ॥

ಇತಿಹಾಸ ಪುರಾಣಾನಿ ಯದ್ದಿತಾಯಂ ಪ್ರಮಾರ್ಜತಿ ।
ಯನ್ಮೂರ್ಧಾನಂ ಹಿ ರಾಜೇಂದ್ರ ಅಭಿಷಿಂಚತಿ ವೈ ದ್ವಿಜಃ　　॥ ೭೪ ॥

ತೇನ ಪ್ರೀಣಾತಿ ವೈ ರುದ್ರಂ ಶಿಖಾಮಾಲಭ್ಯ ವೈ ಋಷೀನ್ ।
ಯದಕ್ಷಿಣೀ ಚಾಲಭತೇ ರವಿಃ ಪ್ರಿಣಾತಿ ತೇನ ವೈ　　॥ ೭೫ ॥

ನಾಸಿಕಾಲಂಭನಾದ್ವಾಯುಂ ಪ್ರೀಣಾತ್ಯೇವ ನ ಸಂಶಯಃ ।
ಯಚ್ಛ್ರೋತ್ರಮಾಲಭೇದ್ವಿಪ್ರೋ ದಿಶಃ ಪ್ರೀಣಾತಿ ತೇನ ವೈ　　॥ ೭೬ ॥

---

೭೨. ಎರಡನೆಯಸಲ ಕುಡಿದ ನೀರಿನಿಂದ ಯಜುರ್ವೇದವೂ, ಮೂರನೆಯ ಸಲ ಕುಡಿದ ನೀರಿನಿಂದ ಸಾಮವೇದವೂ ತೃಪ್ತಿಹೊಂದುತ್ತದೆ.

೭೩. ದಕ್ಷಿಣಾಂಗುಷ್ಠಮೂಲದಿಂದ ಮೊದಲನೆಯಸಲ ಮುಖಮಾರ್ಜನ ಮಾಡಿಕೊಳ್ಳುವುದರಿಂದ ಅಥರ್ವವೇದವು ತೃಪ್ತಿಹೊಂದುತ್ತದೆ. ಅಯ್ಯಾ ರಾಜನೇ! ಇದರಲ್ಲಿ ಸಂದೇಹವಿಲ್ಲ.

೭೪. ಎರಡನೇಸಾರಿ ಶಿರಸ್ಸಿನಮೇಲೆ ಮಾರ್ಜನೆ ಮಾಡುವುದರಿಂದ ಇತಿಹಾಸ ಪುರಾಣಗಳು ತೃಪ್ತಿಹೊಂದುತ್ತವೆ.

೭೫. ಎಲೈ ರಾಜೇಂದ್ರನೇ! ತಲೆಯನ್ನು ಪ್ರೋಕ್ಷಿಸಿಕೊಳ್ಳುವುದರಿಂದ ರುದ್ರನನ್ನೂ, ಶಿಖಾಪ್ರೋಕ್ಷಣ ಮಾಡಿಕೊಳ್ಳುವುದರಿಂದ ಋಷಿಗಳನ್ನೂ ತೃಪ್ತಿಪಡಿಸುತ್ತಾನೆ. ಕಣ್ಣುಗಳನ್ನು ಸ್ಪರ್ಶಿಸಿಕೊಳ್ಳುವುದರಿಂದ ಸೂರ್ಯನು ಪ್ರೀತನಾಗುತ್ತಾನೆ.

೭೬. ನಾಸಿಕಾಸ್ಪರ್ಶದಿಂದ ವಾಯುವು ತೃಪ್ತನಾಗುವನು. ಶ್ರೋತ್ರಗಳ ಸ್ಪರ್ಶದಿಂದ ದಿಕ್ಕುಗಳೂ ಕೂಡ ತೃಪ್ತಿಹೊಂದುತ್ತವೆ.

ಯಮಂ ಕುಬೇರಂ ವರುಣಂ ವಾಸವಂ ಜಾಗ್ನಿ ಮೇವ ಚ ।
ಯದ್ಬಾಹುಮನ್ವಾಲಭತೇ ಏತಾನ್ ಪ್ರೀಣಾತಿ ತೇನ ವೈ ॥ ೭೭ ॥

ಯನ್ನಾಭಿಮನ್ವಾ ಲಭತೇ ಪ್ರಾಣಾನಾಂ ಗ್ರಂಥಿರೇವ ಚ ।
ತೇನ ಪ್ರೀಣಾತಿ ರಾಜೇಂದ್ರ ಇತೀಯಂ ವೈದಿಕೀ ಶ್ರುತಿಃ ॥ ೭೮ ॥

ಅಭಿಷಿಂಚತಿ ಯತ್ಪಾದೌ ವಿಷ್ಣುಂ ಪ್ರೀಣಾತಿ ತೇನ ವೈ ।
ಯದ್ಭೂಮ್ಯಾಚ್ಛಾದಕಂ ವಾರಿ ವಿಸರ್ಜಯತಿ ಮಾನದ ॥ ೭೯ ॥

ವಾಸುಕಿಪ್ರಮುಖಾನ್ನಾಗಾಂಸ್ತೇನ ಪ್ರೀಣಾತಿ ಭಾರತ ।
ಯದ್ಬಿಂದವೋಽಂತರೇ ಭೂಮೌ ಪತಂತೀಹ ನರಾಧಿಪ ॥ ೮೦ ॥

ಭೂತಗ್ರಾಮಂ ತತಸ್ತೈಸ್ತು ಪ್ರೀಣಾತೀಹ ಚತುರ್ವಿಧಂ ।
ಅಂಗುಷ್ಠೇನ ಪ್ರದೇಶಿನ್ಯಾ ಲಭೇತ ಚಾಕ್ಷಿಣೀ ನೃಪ ॥ ೮೧ ॥

---

೭೭. ತೋಳಿಗೆ ಪ್ರೋಕ್ಷಿಸಿಕೊಳ್ಳುವುದರಿಂದ ಯಮ, ಕುಬೇರ, ವರುಣ, ಇಂದ್ರ, ಅಗ್ನಿ ಈ ದೇವತೆಗಳು ತೃಪ್ತಿಹೊಂದುತ್ತಾರೆ.

೭೮. ನಾಭಿಯನ್ನು ಸ್ಪರ್ಶಿಸಿಕೊಂಡರೆ ಪ್ರಾಣಗ್ರಂಥಿಗಳು ತೃಪ್ತಿಹೊಂದುವುವು ಎಂದು ವೇದದಲ್ಲಿ ಹೇಳಿದೆ.

೭೯. ಪಾದಗಳಿಗೆ ಪ್ರೋಕ್ಷಿಸಿಕೊಳ್ಳುವುದರಿಂದ ವಿಷ್ಣುವನ್ನು ತೃಪ್ತಿಪಡಿಸುತ್ತಾನೆ. ಎಲೈ ಶತ್ರುಗರ್ವ ಖಂಡನಮಾಡುವ ರಾಜನೇ! ಯಾವ ನೀರು ಭೂಮಿಯ ಮೇಲೆ ಬಿದ್ದು ಭೂಮಿಯನ್ನು ಆವರಿಸುವುದೋ ಅಂತಹ ಭೂಪ್ರೋಕ್ಷಣೆಯಿಂದ ವಾಸುಕಿ ಮೊದಲಾದ ನಾಗರು ತೃಪ್ತಿಹೊಂದುವರು.

೮೦. ಈಗ ಹೇಳುವ ನಾಲ್ಕುವಿಧವಾದ ಜಲಪ್ರೋಕ್ಷಣದಿಂದ ಇಂದ್ರಿಯಗಳೂ ಕೂಡ ತೃಪ್ತಿಹೊಂದುತ್ತವೆ. ಆ ನಾಲ್ಕುವಿಧವನ್ನು ಹೇಳುವೆನು.

೮೧. ಹೆಬ್ಬೆಟ್ಟು ತರ್ಜನೀ ಇವನ್ನು ಸೇರಿಸಿ ಮಾಡಿದ ಪ್ರೋಕ್ಷಣೆಯಿಂದ ಎರಡು ಕಣ್ಣುಗಳು ಶುದ್ಧವಾಗುವುವು. ಹೆಬ್ಬೆಟ್ಟು ಮತ್ತು ಅನಾಮಿಕ ಇವೆರಡರಿಂದ ಪ್ರೋಕ್ಷಿಸಿದರೆ ಮೂಗು ಶುದ್ಧವಾಗುವುದು.

ಅನಾಮಿಕಾಂಗುಷ್ಠಿಕಾಭ್ಯಾಂ ನಾಸಿಕಾಮಾಲಭೇನ್ನೃಪ ।
ಮಧ್ಯಮಾಂಗುಷ್ಠಾಭ್ಯಾಂ ಮುಖಂ ಸಂಸ್ಪೃಶೇದ್ಭರತರ್ಷಭ ॥ ೮೨ ॥

ಕನಿಷ್ಠಿಕಾಂಗುಷ್ಠಕಾಭ್ಯಾಂ ಕರ್ಣಮಾಲಭತೇ ನೃಪ ।
ಅಂಗುಲೀಭಿಸ್ತಥಾ ಬಾಹುಮಂಗುಷ್ಠೇನ ತು ಮಂಡಲಂ ॥ ೮೩ ॥

ನಾಭಿಂ ಕುರುಕುಲಶ್ರೇಷ್ಠ ಶಿರಸ್ಸರ್ವಾಭಿರೇವ ಚ ।
ಅಂಗುಷ್ಠೋಽಗ್ನಿರ್ಮಹಾಬಾಹೋ ಪ್ರೋಕ್ತೋ ವಾಯುಃ ಪ್ರದೇಶಿನೀ॥೮೪॥

ಅನಾಮಿಕಾ ತಥಾ ಸೂರ್ಯಃ ಕಾನಿಷ್ಠಾ ಮಘವಾ ವಿಭೋ ।
ಪ್ರಜಾಪತಿರ್ಮಧ್ಯಮಾ ಜ್ಞೇಯಾ ತಸ್ಮಾದ್ಭರತಸತ್ತಮ ॥ ೮೫ ॥

ಏವಮಾಚಮ್ಯ ವಿಪ್ರಸ್ತು ಪ್ರೀಣಾತಿ ಸತತಂ ಜಗತ್ ।
ಸರ್ವಾಶ್ಚ ದೇವತಾಸ್ತಾತ ಲೋಕಾಂಶ್ಚಾಪಿ ನ ಸಂಶಯಃ ॥ ೮೬ ॥

---

೮೨. ಮಧ್ಯಮ ಮತ್ತು ಅಂಗುಷ್ಠ (ಹೆಬ್ಬೆರಳು) ಇವುಗಳಿಂದ ಮಾಡಿದ ಪ್ರೋಕ್ಷಣೆಯಿಂದ ಬಾಯಿ ಶುದ್ಧವಾಗುತ್ತವೆ.

೮೩. ಕನಿಷ್ಠಿಕಾ ಅಂಗುಷ್ಟ ಇವುಗಳಿಂದ ಸ್ಪರ್ಶಿಸಿದರೆ ಕಿವಿ ಶುದ್ಧಿಯಾಗುವುದು. ಮತ್ತು ಎಲ್ಲ ಬೆರಳುಗಳಿಂದ ಭುಜವನ್ನೂ, ಅಂಗುಷ್ಠ ಒಂದರಿಂದ ನಾಭಿ ಮಂಡಲವನ್ನೂ ಸ್ಪರ್ಶಿಸಬೇಕು.

೮೪. ಎಲೈ ಕುರುಕುಲಶ್ರೇಷ್ಠನೇ! ಎಲ್ಲಾ ಬೆರಳುಗಳಿಂದ ಶಿರಸ್ಸನ್ನು ಸ್ಪರ್ಶಿಸಬೇಕು. ಎಲೈ ಮಹಾಬಾಹುವೇ! ಅಂಗುಷ್ಠವು ಅಗ್ನಿದೇವತಾಕವೆಂದೂ, ತರ್ಜನಿಯು ವಾಯುದೇವತಾಕವೆಂದೂ ಅನಾಮಿಕೆಯು ಸೂರ್ಯದೇವತಾಕವೆಂದೂ, ಕಿರುಬೆರಳು ಇಂದ್ರದೇವತಾಕವೆಂದೂ,

೮೫. ಮಧ್ಯದ ಬೆರಳು ಪ್ರಜಾಪತಿ (ಬ್ರಹ್ಮ) ದೇವತಾಕವೆಂದೂ, ತಿಳಿಯಬೇಕು. ಅಯ್ಯಾ ಭರತಶ್ರೇಷ್ಠನೇ! ಹೀಗೆ ಬ್ರಾಹ್ಮಣನು ತಾನು ಆಚಮನ ಮಾಡುವುದರಿಂದ ಯಾವಾಗಲೂ ಈ ಲೋಕಕ್ಕೆ ತೃಪ್ತಿಯನ್ನುಂಟುಮಾಡುತ್ತಾನೆ.

೮೬. ಅಲ್ಲದೆ ಎಲ್ಲಾ ದೇವತೆಗಳನ್ನೂ ಎಲ್ಲಾ ಲೋಕಗಳನ್ನೂ ತೃಪ್ತಿಪಡಿಸುತ್ತಾನೆಂಬುದರಲ್ಲಿ ಸಂದೇಹವಿಲ್ಲ. ಆದುದರಿಂದ ಯಾವಾಗಲೂ ಬ್ರಾಹ್ಮಣನು ಪೂಜಾಯೋಗ್ಯನು. ಏಕೆಂದರೆ ಅವನು ಸರ್ವದೇವಮಯನು.

ತಸ್ಮಾತ್ಪೂಜ್ಯಃ ಸದಾ ವಿಪ್ರಃ ಸರ್ವದೇವಮಯೋ ಹಿ ಸಃ ।
ಬ್ರಾಹ್ಮೇಣ ವಿಪ್ರಸ್ತೀರ್ಥೇನ ನಿತ್ಯಕಾಲಮುಪಸ್ಪೃಶೇತ್ ॥ ೮೭ ॥

ಕಾಯತ್ರೈದೇಶಿಕಾಭ್ಯಾಂ ವಾ ನ ಪಿತ್ರ್ಯೇಣ ಕದಾಚನ ।
ಹೃದ್ಗಾಭಿಃ ಪೂಯತೇ ವಿಪ್ರಃ ಕಂಠಗಾಭಿಸ್ತು ಭೂಮಿಪಃ ॥ ೮೮ ॥

ವೈಶ್ಯೋಽದ್ಭಿಃ ಪ್ರಾಶಿತಾಭಿಸ್ತು ಶೂದ್ರಃ ಸ್ಪೃಷ್ಟಾಭಿರಂತತಃ ।
ಉದ್ಧೃತೇ ದಕ್ಷಿಣೇ ಪಾಣಾವುಪವೀತ್ಯುಚ್ಯತೇ ಬುಧಃ ॥ ೮೯ ॥

ಸವ್ಯೇನ ಪ್ರಾಚೀನಾವೀತೀ ನಿವೀತೀ ಕಂಠಸಂಜ್ಞಿತೇ ।
ಮೇಖಲಾಮಜಿನಂ ದಂಡಮುಪವೀತಂ ಕಮಂಡಲುಂ ॥ ೯೦ ॥

---

೮೭. ಯಾವಾಗಲೂ ಬ್ರಾಹ್ಮಣನು ಬ್ರಾಹ್ಮತೀರ್ಥದಿಂದ ಆಚಮನ ಮಾಡಬೇಕು. ಪ್ರಾಜಾಪತ್ಯ, ದೈವತ ಇವುಗಳಿಂದಲಾದರೂ ಆಚಮನ ಮಾಡಬಹುದು. ಪಿತೃತೀರ್ಥದಿಂದ ಯಾವಾಗಲೂ ಆಚಮನ ಮಾಡಕೂಡದು.

೮೮. ಆಚಮನಮಾಡಿದ ನೀರು ಹೃದಯಕ್ಕೆ ತಲಪಿದರೆ ಬ್ರಾಹ್ಮಣನು ಶುದ್ಧನಾಗುತ್ತಾನೆ. ಕಂಠಕ್ಕೆ ತಲಪಿದರೆ ಕ್ಷತ್ರಿಯನು ಶುದ್ಧನಾಗುತ್ತಾನೆ.

೮೯. ಜಲಪ್ರಾಶನದಿಂದ ಎಂದರೆ ಜಲವು ಬಾಯಿಗೆ ಹೋದ ಮಾತ್ರದಿಂದಲೇ ವೈಶ್ಯನು ಶುದ್ಧನು. ಶೂದ್ರನು ಜಲದಿಂದ ಅಂಗಸ್ಪರ್ಶಮಾಡಿಕೊಂಡುದರಿಂದಲೇ ಶುದ್ಧನು. ಬಲಗೈಯನ್ನು ಎತ್ತಿ ಆದರಕೆಳಗೆ ಯಜ್ಞಸೂತ್ರವನ್ನು ತಂದುಕೊಂಡಾಗ ಉಪವೀತಿಯೆನಿಸುವನು.

೯೦. ಎಡಗೈಕೆಳಗೆ ಉಪವೀತವಿರಲು ಪ್ರಾಚೀನಾವೀತಿ ಎನಿಸುವನು. ಕುತ್ತಿಗೆಯಲ್ಲಿ ಜೋಲಾಡುವಂತೆ ಇದ್ದರೆ ನಿವೀತಿಯಾಗುವನು. ಮೇಖಲಾ ಕೃಷ್ಣಾಜಿನ, ದಂಡ, ಇವುಗಳಲ್ಲಿ ಜೀರ್ಣವಾದುದನ್ನು ನೀರಿನಲ್ಲಿ ಬಿಸುಟು ಬೇರೆಯವನ್ನು ಮಂತ್ರಪೂರ್ವಕನಾಗಿ ತೆಗೆದುಕೊಳ್ಳಬೇಕು.

ಅಪ್ಸು ಪ್ರಾಶ್ಯ ವಿನಷ್ಟಾನಿ ಗೃಹ್ಣೀತಾನ್ಯಾನಿ ಮಂತ್ರವತ್ ।
ಉಪವೀತ್ಯಾಚಮೇನ್ನಿತ್ಯಮಂತರ್ಜಾನು ಮಹೀಪತೇ ॥ ೯೧ ॥

ಏವಂ ತು ವಿಪ್ರೋ ಹ್ಯಾಚಾಂತಃ ಶುಚಿತಾಂ ಯಾತಿ ಭಾರತ ।
ಯಾಸ್ತ್ವೇತಾಃ ಕರಮಧ್ಯೇ ತು ರೇಖಾ ವಿಪ್ರಸ್ಯ ಭಾರತ ॥ ೯೨ ॥

ಗಂಗಾದ್ಯಾಃ ಸರಿತಃ ಸರ್ವಾ ಜ್ಞೇಯಾ ಭರತಸತ್ತಮ ।
ಯಾನ್ಯಂಗುಲೀಷು ಪರ್ವಾಣಿ ಗಿರಯಸ್ತಾನಿ ವಿದ್ಧಿ ವೈ ॥ ೯೩ ॥

ಸರ್ವದೇವಮಯೋ ರಾಜನ್ ಕರೋ ವಿಪ್ರಸ್ಯ ದಕ್ಷಿಣಃ ।
ಹಸ್ತೋಪಸ್ಪರ್ಶನವಿಧಿಃ ತವಾಖ್ಯಾತೋ ಮಹೀಪತೇ ॥ ೯೪ ॥

ಏಷು ಸರ್ವೇಷು ಲೋಕೇಷು ಯೇನಾಚಾಂತೋ ದಿವಂ ವ್ರಜೇತ್॥ ೯೫ ॥

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಉಪಸ್ಪರ್ಶನವಿಧಿ ವರ್ಣನಂ ನಾಮ ತೃತೀಯೋಽಧ್ಯಾಯಃ**

---

೯೧. ಯಾವಾಗಲೂ ಉಪವೀತಯುಳ್ಳವನಾಗಿ ಎಂದರೆ ಮಂಡಿಗಳ ಮಧ್ಯೆ ಕೈಗಳನ್ನು ಇಟ್ಟುಕೊಂಡು ಆಚಮನಮಾಡಬೇಕು. ಎಲೈ ಭರತಕುಲೋತ್ಪನ್ನನೇ! ಹೀಗೆ ಆಚಮನಮಾಡಿದ ಬ್ರಾಹ್ಮಣನು ಶುಚಿತ್ವವನ್ನು ಪಡೆಯುತ್ತಾನೆ.

೯೨. ಅಯ್ಯಾ ಪ್ರಭುವೇ! ಬ್ರಾಹ್ಮಣನ ಕೈಗಳ ಮಧ್ಯದಲ್ಲಿರುವ ರೇಖೆಗಳನ್ನು ಗಂಗಾದಿ ಸಮಸ್ತನದಿಗಳು ಎಂದು ತಿಳಿಯತಕ್ಕದ್ದು.

೯೩. ಬೆರಳುಗಳಲ್ಲಿರುವ ಗಿಣ್ಣಿನ ಗೆರೆಗಳನ್ನು ಪರ್ವತಗಳೆಂದು ತಿಳಿಯಬೇಕು.

೯೪-೯೫. ಎಲೈ ರಾಜನೇ! ಬ್ರಾಹ್ಮಣನ ಬಲಗೈಯ್ಯು ಸರ್ವದೇವಮಯವಾದುದು. ಕೈಯಿಂದ ಆಚಮನಮಾಡುವ ವಿಧಾನವನ್ನು ನಿನಗೆ ಹೇಳಿ ಆಯಿತು. ಸಮಸ್ತಲೋಕಗಳಲ್ಲಿಯೂ ಇದೇ ಕ್ರಮವು ಇದೆ. ಈ ಕ್ರಮದಿಂದ ಆಚಮನ ಮಾಡಿದವನು ಸ್ವರ್ಗಲೋಕವನ್ನು ಪಡೆಯುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದಲ್ಲಿ ಬ್ರಾಹ್ಮಪರ್ವದಲ್ಲಿ ಉಪಸ್ಪರ್ಶನ ವಿಧಿಯೆಂಬ ಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಚತುರ್ಥೋಽಧ್ಯಾಯಃ

---

॥ ಸುಮಂತುರುವಾಚ ॥

ಕೇಶಾಂತಃ ಷೋಡಶೇ ವರ್ಷೇ ಬ್ರಾಹ್ಮಣಸ್ಯ ವಿಧೀಯತೇ ।
ರಾಜನ್ಯ ಬಂಧೋರ್ದ್ವಾವಿಂಶೇ ವೈಶ್ಯಸ್ಯ ತ್ರ್ಯಧಿಕೇ ತತಃ ॥ ೧ ॥

ಅಮಂತ್ರಿಕಾ ಸದಾ ಕಾರ್ಯಾ ಸ್ತ್ರೀಣಾಂ ಚೂಡಾ ಮಹೀಪತೇ ।
ಸಂಸ್ಕಾರಹೇತೋಃ ಕಾಯಸ್ಯ ಯಥಾಕಾಲಂ ವಿಭಾಗಶಃ ॥ ೨ ॥

---

### ನಾಲ್ಕನೆಯ ಅಧ್ಯಾಯವು

೧. ಸುಮಂತು ಮುನಿವರ್ಯರು ಹೇಳುತ್ತಾರೆ—ಉಪನಯನಾಂಗವಾದ ದೀಕ್ಷೆಯನ್ನು ವಹಿಸಿದ ವಟುವಿಗೆ ಹದಿನಾರನೆಯ ವರ್ಷದಲ್ಲಿ ಗೋದಾನವೆಂಬ ಕೇಶ ಖಂಡನ ಕರ್ಮವು ನಡೆಯತಕ್ಕದೆಂದು ಉಕ್ತವಾಗಿದೆ. ಅಪ್ರಶಸ್ತನಾದ ಕ್ಷತ್ರಿಯನಿಗೆ ಇಪ್ಪತ್ತೆರಡನೇ ವರ್ಷದಲ್ಲಿಯೂ, ಅದಕ್ಕಿಂತಲೂ ಮೂರುವರ್ಷ ಹೆಚ್ಚಿನ ವಯಸ್ಸಿನಲ್ಲಿ ವೈಶ್ಯನಿಗೂ, ಈ ಗೋದಾನಕರ್ಮವು ನಡೆಯತಕ್ಕದ್ದು.

೨. ಎಲೈ ರಾಜನೇ! ಸ್ತ್ರೀಯರಿಗೆ ಕಾಲುಗುರುಶಾಸ್ತ್ರವೆಂಬದಾಗಿ ಈ ಚೂಡಾ ಕರ್ಮವನ್ನು ಅಮಂತ್ರಕವಾಗಿ ನಡೆಯಿಸಬೇಕು. ಕಾಲವನ್ನು ಮೀರದೇ ಶರೀರಕ್ಕೆ ಸಂಸ್ಕಾರ ಮಾಡುವದಕ್ಕಾಗಿ ಹೀಗೆ ಕಾಲವನ್ನು ವಿಭಾಗಮಾಡಿ ತೋರಿಸಿದೆ.

ವೈವಾಹಿಕೋ ವಿಧಿಸ್ತ್ರೀಣಾಂ ಸಂಸ್ಕಾರೋ ನೈಗಮಃ ಸ್ಮೃತಃ ।
ಪತಿಸೇದ್ವಾ ಗುರೋರ್ವಾಃಪಿ ಗೃಹೇ ವಾಗ್ನಿ ಪರಿಕ್ರಿಯಾ ॥ ೩ ॥

ಏಷ ತೇ ಕಥಿತೋ ರಾಜನ್ನೌಪನಾಯನಿಕೋ ವಿಧಿಃ ।
ದ್ವಿಜಾತೀನಾಂ ಮಹಾಬಾಹೋ ಉತ್ಪತ್ತಿವ್ಯಂಜಕಃ ಪರಃ ॥ ೪ ॥

ಕರ್ಮಯೋಗಮಿದಾನೀಂ ತೇ ಕಥಯಾಮಿ ಮಹಾಬಲ ।
ಉಪನೀಯ ಗುರುಃ ಶಿಷ್ಯಂ ಪ್ರಥಮಂ ಶೌಚಮಾದಿಶೇತ್ ॥ ೫ ॥

ಆಚಾರಮಗ್ನಿ ಕಾರ್ಯಂ ಚ ಸಂಧ್ಯೋಪಾಸನಮೇವ ಚ ।
ಅಧ್ಯಾಪಯೇತ್ತು ಸಚ್ಛಿಷ್ಯಾನ್ ಸದಾಚಾಂತ ಉದಙ್ಮುಖಃ ॥ ೬ ॥

---

೩. ಸ್ತ್ರೀಯರುಗಳಿಗೆ ವಿವಾಹವೇ ವೇದೋಕ್ತವಾದ ಸಂಸ್ಕಾರವಾಗಿದೆ. ವಟುವು ಗುರುವಿನ ಮನೆಯಲ್ಲೇ ಇದ್ದುಕೊಂಡು ಅಗ್ನಿಕಾರ್ಯ ವೊದಲಾದುವನ್ನು ಮಾಡತಕ್ಕದ್ದು.

೪. ಬ್ರಾಹ್ಮಣನಾಗಿ ಉತ್ಪನ್ನನಾದನೆಂಬುದನ್ನು ಸೂಚಿಸುವ ಈ ಉಪ ನಯನವೆಂಬ ಶ್ರೇಷ್ಠವಾದ ಕರ್ಮಕ್ಕೆ ಸಂಬಂಧಿಸಿದ ವಿಧಿಯನ್ನು ನಿನಗೆ ತಿಳಿಸಿ ದ್ದಾಯಿತು.

೫. ಎಲೈ ಮಹಾಬಲನೇ! ಈಗ ಅವರು (ವಟುಗಳು) ನಡೆಯಿಸಬೇಕಾದ ಕರ್ಮಗಳ ವಿಚಾರವಾಗಿ ಹೇಳುತ್ತೇನೆ. ಗುರುವು ಶಿಷ್ಯನಿಗೆ ಉಪನಯನವನ್ನು ಮಾಡಿ ವೊದಲು ಶುಚಿತ್ವವನ್ನು (ಎಂದರೆ ಮಡಿಯಾಗಿರಬೇಕಾದ ವಿಚಾರವನ್ನು) ಅಪ್ಪಣೆಮಾಡಬೇಕು.

೬. ಆಮೇಲೆ ನಡೆಯಿಸುವ ಕಾರ್ಯಗಳನ್ನು ಎಂದರೆ ಸಂಧ್ಯಾವಂದನೆ, ಅಗ್ನಿ ಕಾರ್ಯ, ಇವುಗಳನ್ನು ಮಾಡಿಸಬೇಕು. ಆಚಾರ್ಯನೂ ಸಂಧ್ಯಾವಂದನೆ ಔಪಾಸನಗಳನ್ನು ಮಾಡಿ ಉತ್ತರಾಭಿಮುಖನಾಗಿ ಕುಳಿತು ಆಚಮನಮಾಡಿ ಸಚ್ಛಿಷ್ಯರಿಗೆ ವೇದಾಧ್ಯಯ ಮಾಡಿಸಬೇಕು.

ಬ್ರಹ್ಮಾಂಜಲಿಕರೋ ನಿತ್ಯಮಧ್ಯಾಪ್ಯೋ ವಿಜಿತೇಂದ್ರಿಯಃ ।
ಲಘುವಾಸಾಸ್ತಥೈಕಾಗ್ರಃ ಸುಮನಾಸುಪ್ರತಿಷ್ಠಿತಃ ॥ ೭ ॥

ಬ್ರಹ್ಮಾರಂಭೇಽವಸಾನೇ ಚ ಪಾದೌ ಪೂಜ್ಯೌ ಗುರೋಃ ಸದಾ ।
ಸಂಹತ್ಯ ಹಸ್ತಾವಧ್ಯೇಯಂ ಸ ಹಿ ಬ್ರಹ್ಮಾಂಜಲಿಃ ಸ್ಮೃತಃ ॥ ೮ ॥

ವ್ಯತ್ಯಸ್ತಪಾಣಿನಾ ಕಾರ್ಯಮುಪಸಂಗ್ರಹಣಂ ಗುರೋಃ ।
ಸವ್ಯೇನ ಸವ್ಯಃ ಸ್ಪ್ರಷ್ಟವ್ಯೋ ದಕ್ಷಿಣೇನ ತು ದಕ್ಷಿಣಃ ॥ ೯ ॥

ಅಧ್ಯೇಷ್ಯಮಾಣಂ ತು ಗುರುರ್ನಿತ್ಯಕಾಲಮತಂದ್ರಿತಃ ।
ಅಧೀಷ್ವ ಭೋ ಇತಿ ಬ್ರೂಯಾತ್ ವಿರಾಮೋಽಸ್ತ್ವಿತಿ ವಾರಯೇತ್॥ ೧೦ ॥

ಬ್ರಹ್ಮಣಃ ಪ್ರಣವಂ ಕುರ್ಯಾದಾದಾವಂತೇ ಚ ಸರ್ವದಾ ।
ಸ್ರವತ್ಯನೋಂಕೃತಂ ಪೂರ್ವಂ ಪರಸ್ತಾಚ್ಚ ವಿಶೀರ್ಯತೆ ॥ ೧೧ ॥

---

೭. ಯಾವಾಗಲೂ ಬ್ರಹ್ಮಯಜ್ಞ ಕಾಲದಲ್ಲಿ ಮಾಡುವಂತೆ ಬ್ರಹ್ಮಾಂಜಲಿಯನ್ನು ಮಾಡಿಕೊಂಡು ಜಿತೇಂದ್ರಿಯನಾಗಿ ಅಧ್ಯಯನವನ್ನು ಮಾಡಿಸಬೇಕು. ಶಿಷ್ಯನು ಸೂಕ್ಷ್ಮವಾದ ಬಟ್ಟೆಯನ್ನು ಧರಿಸಿ ಏಕಾಗ್ರಚಿತ್ತನಾಗಿ ಒಳ್ಳೆಯ ಮನಸ್ಸಿನಿಂದ ಪದ್ಮಾಸನದಲ್ಲಿ ಚೆನ್ನಾಗಿ ಕುಳಿತುಕೊಂಡು ಅಧ್ಯಯನ ಮಾಡಬೇಕು.

೮. ಅಧ್ಯಯನದ ಆರಂಭದಲ್ಲಿಯೂ, ಕೊನೆಯಲ್ಲಿಯೂ ಗುರುವಿಗೆ ನಮಸ್ಕಾರ ಮಾಡಬೇಕು. ಎರಡು ಅಂಗೈಗಳನ್ನೂ ಜೋಡಿಸಿಕೊಂಡು ಅಧ್ಯಯನ ಮಾಡಿಸುವುದು ಬ್ರಹ್ಮಾಂಜಲಿ ಎನಿಸುವುದು.

೯. ವಟುವಿನ ಬಲಗೈಯು ಆಚಾರ್ಯನ ಬಲಗಾಲನ್ನೂ; ವಟುವಿನ ಎಡಗೈಯ್ಯು ಆಚಾರ್ಯನ ಎಡಗಾಲನ್ನೂ ಮುಟ್ಟುವಂತೆ ಕೈಗಳನ್ನು ವ್ಯತ್ಯಾಸಮಾಡಿಕೊಂಡು ಆಚಾರ್ಯರ ಪಾದಗಳನ್ನು ಮುಟ್ಟಿ ನಮಸ್ಕಾರ ಮಾಡಬೇಕು.

೧೦. ಶಿಷ್ಯನು ಅಧ್ಯಯನ ಮಾಡಬೇಕಾಗಿರುವಾಗ "ಅಧೀಷ್ವ ಭೋ" ಎಂದೂ ನಿಲ್ಲಿಸಬೇಕಾದಾಗ "ವಿರಾಮೋಸ್ತು" ಎಂದೂ ಆಚಾರ್ಯನು ಹೇಳಬೇಕು.

೧೧. ಅಧ್ಯಯನದ ಪ್ರಾರಂಭದಲ್ಲಿಯೂ, ಅಧ್ಯಯನ ವಿರಾಮದಲ್ಲಿಯೂ, ಓಂಕಾರವನ್ನು ಉಚ್ಚರಿಸಬೇಕು. ಆರಂಭದಲ್ಲಿ ಓಂಕಾರವನ್ನು ಉಚ್ಚರಿಸದೇ ಹೋದರೆ ಅಧ್ಯಯನಮಾಡಿದ್ದೆಲ್ಲಾ ಮರೆತು ಹೋಗುವುದು. ಮುಕ್ತಾಯದಲ್ಲಿ ಓಂಕಾರವನ್ನು ಉಚ್ಚರಿಸದೇ ಹೋದರೆ ಎಲ್ಲವೂ ನಾಶವಾಗುವುದು.

**ಶ್ರೂಯತಾಂ ಚಾಪಿ ರಾಜೇಂದ್ರ ಯಥೋಂಕಾರಂ ದ್ವಿಜೋಽರ್ಹತಿ ।**
**ಪ್ರಾಕ್ಕೂಲಾನ್ ಪರ್ಯುಪಾಸೀನಃ ಪವಿತ್ರೈಶ್ಚೈವ ಪಾವಿತಃ　　॥ ೧೨ ॥**

**ಪ್ರಾಣಾಯಾಮೈಸ್ತ್ರಿಭಿಃ ಪೂತಃ ತತಸ್ತ್ವೋಂಕಾರಮರ್ಹತಿ ।**
**ಓಂಕಾರಲಕ್ಷಣಂ ಚಾಪಿ ಶೃಣುಷ್ವ ಕುರುನಂದನ　　॥ ೧೩ ॥**

**ಅಕಾರಂ ಚಾಪ್ಯುಕಾರಂ ಚ ಮಕಾರಂ ಚ ಪ್ರಜಾಪತಿಃ ।**
**ವೇದತ್ರಯಾತ್ತು ನಿರ್ಗೃಹ್ಯ ಭೂರ್ಭುವಸ್ವರಿತೀತಿ ಚ　　॥ ೧೪ ॥**

**ತ್ರಿಭ್ಯ ಏವ ತು ವೇದೇಭ್ಯಃ ಪಾದಂ ಪಾದಮದೂದುಹತ್ ।**
**ತ್ಯದಿತ್ಯೃಚೋಽಸ್ಯಾಃ ಸಾವಿತ್ರ್ಯಾಃ ಪರಮೇಷ್ಠೀ ಪ್ರಜಾಪತಿಃ　　॥ ೧೫ ॥**

**ಏತದಕ್ಷರಮೇತಾಂ ಚ ಜಪಾನ್ ವ್ಯಾಹೃತಿಪೂರ್ವಕಂ ।**
**ಸಂಧ್ಯಯೋರುಭಯೋರ್ವಿಪ್ರೋ ವೇದಪುಣ್ಯೇನ ಯುಜ್ಯತೆ　　॥ ೧೬ ॥**

---

೧೨. ಎಲೈ ರಾಜೇಂದ್ರನೇ ! ಬ್ರಾಹ್ಮಣನು ಓಂಕಾರ ಉಚ್ಚಾರಣೆಯನ್ನು ಹೇಗೆ ಮಾಡಬೇಕೆಂಬುದನ್ನು ಕೇಳು. ನದಿಯದಡದ ಪೂರ್ವತೀರದಲ್ಲಿ ಕುಳಿತು ಪವಿತ್ರಗಳನ್ನು ಧರಿಸಿ ಶುದ್ಧನಾಗಿ,

೧೩. ಮೂರು ಪ್ರಾಣಾಯಾಮಗಳಿಂದ ಪರಿಶುದ್ಧನಾದಮೇಲೆ ಓಂಕಾರ ಜಪಕ್ಕೆ ಅರ್ಹನಾಗುತ್ತಾನೆ. ಎಲೈ ಕುರುವಂಶೋತ್ಪನ್ನನೇ! ಓಂಕಾರ ಸ್ವರೂಪವನ್ನು ಹೇಳುವೆನು ಕೇಳು.

೧೪-೧೫. ಅಕಾರ, ಉಕಾರ, ಮಕಾರಗಳನ್ನು ಬ್ರಹ್ಮನು ಮೂರು ವೇದಗಳಿಂದ ಸಂಗ್ರಹಿಸಿ, ಭೂಃ ಭುವಃ ಸ್ವಃ ಎಂಬ ಮೂರು ವ್ಯಾಹೃತಿಗಳನ್ನೂ ಸೇರಿಸಿಕೊಂಡು, ಮೂರು ವೇದಗಳಿಂದಲೂ ಒಂದೊಂದು ಪಾದದಂತೆ ಗಾಯತ್ರಿಯನ್ನು ಸಂಗ್ರಹಿಸಿದನು. ಈ ಗಾಯತ್ರೀ ರೂಪವಾದ ಋಕ್ಕಿನ 'ತತ್' ಎಂಬುದಕ್ಕೆ ಪ್ರಜಾಪತಿಯಾದ ಪರಮೇಷ್ಠಿಯೂ ಋಷಿಯಾಗಿದ್ದಾನೆ.

೧೬. ಈ ಓಂಕಾರವೆಂಬ ಅಕ್ಷರವನ್ನೂ ಈ ಗಾಯತ್ರಿಯನ್ನೂ ವ್ಯಾಹೃತಿಪೂರ್ವಕವಾಗಿ ಉಭಯ ಸಂಧ್ಯೆಗಳಲ್ಲೂ ಜಪಮಾಡುವ ಬ್ರಾಹ್ಮಣನು ವೇದತ್ರಯಾಭ್ಯಾಸದಿಂದ ಲಭಿಸುವ ಸಮಸ್ತ ಪುಣ್ಯವನ್ನೂ ಪಡೆಯುತ್ತಾನೆ.

ಸಹಸ್ರಕೃತ್ವಸ್ತ್ವಭ್ಯಸ್ಯ ಬಹಿರೇತತ್ರಿಕಂ ದ್ವಿಜಃ ।
ಮಹತೋऽಪ್ಯೇನಸೋ ಮಾಸಾತ್ತ್ವಚೇವಾಹಿರ್ವಿಮುಚ್ಯತೇ ॥ ೧೭ ॥

ಏತಯರ್ಚಾ ವಿಸಂಯುಕ್ತಃ ಕಾಲೇ ಚ ಕ್ರಿಯಯಾ ಸ್ವಯಾ ।
ವಿಪ್ರಕ್ಷತ್ರಿಯವಿಡ್ಯೋನಿರ್ಗರ್ಹಣಾಂ ಯಾತಿ ಸಾಧುಷು ॥ ೧೮ ॥

ಶೃಣುಷ್ವೈಕಮನಾ ರಾಜನ್ ಪರಮಂ ಬ್ರಹ್ಮಣೋ ಮುಖಂ ।
ಓಂಕಾರ ಪೂರ್ವಿಕಾಸ್ತಿಸ್ರೋ ಮಹಾವ್ಯಾಹೃತಯೋऽವ್ಯಯಾಃ ॥ ೧೯ ॥

ತ್ರಿಪದಾ ಚೈವ ಸಾವಿತ್ರೀ ವಿಜ್ಞೇಯಾ ಬ್ರಹ್ಮಣೋ ಮುಖಂ ।
ಯೋऽಧೀತೇऽಹನ್ಯಹನ್ಯೇತಾಂ ತ್ರೀಣಿ ವರ್ಷಾಣ್ಯತಂದ್ರಿತಃ ॥ ೨೦ ॥

---

೧೭. ಬ್ರಾಹ್ಮಣನು ಗ್ರಾಮದಿಂದ ಹೊರಗೆ ಇದ್ದುಕೊಂಡು ಪ್ರಣವ ವ್ಯಾಹೃತಿಯೊಂದಿಗೆ ಕೂಡಿದ ಗಾಯತ್ರಿಯನ್ನು ಸಹಸ್ರಜಪ ಮಾಡುವುದರಿಂದ ಹಾವು ಪೊರೆಯನ್ನು ಕಳಚಿದಂತೆ ಒಂದು ತಿಂಗಳೊಳಗೆ ಮಹಾಪಾಪಗಳಿಂದಲೂ ಕೂಡ ಬಿಡುಗಡೆ ಹೊಂದುತ್ತಾನೆ.

೧೮. ಸರಿಯಾದ ಕಾಲದಲ್ಲಿ ಗಾಯತ್ರಿಯ ಋಕ್ಕನ್ನು ಜಪಿಸದೆ ತನ್ನ ಕರ್ತವ್ಯವಾದ ಸಂಧ್ಯಾವಂದನವನ್ನೂ ಆಚರಿಸದೆ ಇರುವವನು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಲ್ಲಿ ಯಾರೇ ಆಗಲಿ ಅಂತಹವನು ನಿಂದೆಗೆ ಗುರಿಯಾಗುತ್ತಾನೆ.

೧೯. ಎಲೈ ರಾಜೇಂದ್ರನೇ! ಬ್ರಹ್ಮನ ಮುಖಸ್ವರೂಪವನ್ನು ಒಂದೇ ಮನಸ್ಸಿನಿಂದ ಕೇಳು. ನಾಶರಹಿತಗಳಾದ ಮತ್ತು ಓಂಕಾರ ಪೂರ್ವಕಗಳಾದ ಮೂರು ಮಹಾವ್ಯಾಹೃತಿಗಳನ್ನೂ ವೇದದ ಪ್ರಾರಂಭವೂ, ಪಾದತ್ರಯಸಂಯುಕ್ತವೂ, ಆದ (ಸಾವಿತ್ರಿ) ಗಾಯತ್ರಿಯನ್ನೂ ತಿಳಿದುಕೊಳ್ಳಬೇಕು.

೨೦. ಯಾವನು ಮೂರು ವರ್ಷಗಳವರೆಗೆ ಎಡಬಿಡದೆ ಪ್ರತಿ ದಿವಸದಲ್ಲಿಯೂ ಪಾಲುಮಾರಿಕೆಯಿಲ್ಲದೆ ಈ ಗಾಯತ್ರಿಯನ್ನು ಅಭ್ಯಾಸಮಾಡುವನೋ,

ಸ ಬ್ರಹ್ಮ ಪರಮಭ್ಯೇತಿ ವಾಯುಭೂತಃ ಖಮೂರ್ತಿಮಾನ್ ।
ಏಕಾಕ್ಷರಂ ಪರಂಬ್ರಹ್ಮ ಪ್ರಾಣಾಯಾಮಃ ಪರಂತಪಃ ॥ ೨೧ ॥

ಸಾವಿತ್ರ್ಯಾಸ್ತು ಪರಂ ನಾಸ್ತಿ ಮೌನಾತ್ಸತ್ಯಂ ವಿಶಿಷ್ಯತೇ ।
ತಪಃಕ್ರಿಯಾ ಹೋಮಕ್ರಿಯಾ ತಥಾ ದಾನಕ್ರಿಯಾ ನೃಪ ॥ ೨೨ ॥

ಅಕ್ಷಯಾಂತಾಃ ಸದಾ ರಾಜನ್ ಯಥಾಹ ಭಗವಾನ್ಮನುಃ ।
ಅವರಂ ತ್ವಕ್ಷರಂ ಜ್ಞೇಯಂ ಬ್ರಹ್ಮಾ ಚೈವ ಪ್ರಜಾಪತಿಃ ॥ ೨೩ ॥

ವಿಧಿಯಜ್ಞಾಸ್ತಥಾ ರಾಜನ್ ಜಪಯಜ್ಞೋ ವಿಶಿಷ್ಯತೇ ।
ನಾನಾವಿಧೈರ್ಗುಣೋದ್ದೇಶೈಃ ಸೂಕ್ಷ್ಮಾಖ್ಯಾತೈರ್ನೃಪೋತ್ತಮ ॥ ೨೪ ॥

---

೨೧. ಅವನು ವಾಯುಭೂತನಾಗಿ ತನ್ನ ವಾಯುಭೂತ ಶರೀರದಿಂದಲೇ ಪರಬ್ರಹ್ಮವನ್ನು ಹೊಂದುತ್ತಾನೆ. ಓಂ ಎಂಬುದು ಏಕಾಕ್ಷರರೂಪವಾದ ಪರಬ್ರಹ್ಮ ಎನಿಸುವುದು. ಪ್ರಾಣಾಯಾಮವೆಂಬುದು ಶ್ರೇಷ್ಠವಾದ ತಪಸ್ಸು.

೨೨. ಅಯ್ಯಾ ರಾಜನೇ! ತಪಃಕ್ರಿಯೆ, ಹೋಮಕ್ರಿಯೆ, ದಾನಕ್ರಿಯೆ ಇವುಗಳಲ್ಲಿ ಸವಿತೃದೇವತಾಕವಾದ ಗಾಯತ್ರಿಗಿಂತ ಶ್ರೇಷ್ಠವಾದುದು ಬೇರೆ ಯಾವುದೂ ಇಲ್ಲ.

೨೩. ಮೌನವಾಗಿರುವುದಕ್ಕಿಂತಲೂ ಸತ್ಯರಕ್ಷಣವು ಶ್ರೇಷ್ಠವಾದುದು. ಭಗವಂತನಾದ ಮನುವು ಹೇಳಿದಂತೆ ಇವು ಸದಾ ನಾಶರಹಿತವಾದ ಫಲವುಳ್ಳವುಗಳಾಗುವುವು. ಉಳಿದುವೂ ಸಹ ನಾಶರಹಿತವೆಂದೂ ಪ್ರಜಾಪತಿಯೇ ಬ್ರಹ್ಮನೆಂದೂ ತಿಳಿಯಬೇಕು

೨೪. ಅಯ್ಯಾ ರಾಜನೇ! ವಿಧಿಯಜ್ಞಕ್ಕಿಂತ ಜಪಯಜ್ಞವು ಹೆಚ್ಚಿನದು. ನಾನಾಬಗೆಯಾದ ಗುಣಯುಕ್ತಗಳೆಂದು ಸೂಕ್ಷ್ಮವಾಗಿ ಹೇಳಿದ ಇವುಗಳಿಗಿಂತ ಉಪಾಂಶುಜಪವು ಲಕ್ಷಗುಣವುಳ್ಳದ್ದಾಗುವುದು. ಮನಸ್ಸಿನಲ್ಲೇ ಮಾಡಿದರೆ ಅದರ ಸಹಸ್ರದಷ್ಟು ಗುಣವುಳ್ಳದ್ದು.

ಉಪಾಂಶುಃ ಸ್ಯಾಲ್ಲಕ್ಷಗುಣಃ ಸಾಹಸ್ರೋ ಮಾನಸಃ ಸ್ಮೃತಃ ।
ಯೇ ಪಾಕಯಜ್ಞಾಶ್ಚತ್ವಾರೋ ವಿಧಿಯಜ್ಞೇನ ಚಾನ್ವಿತಾಃ ॥ ೨೫ ॥

ಸರ್ವೇ ತೇ ಜಪಯಜ್ಞಸ್ಯ ಕಲಾಂ ನಾರ್ಹಂತಿ ಷೋಡಶೀಂ ।
ಜಪಾದೇವ ತು ಸಂಸಿಧ್ಯೇತ್ ಬ್ರಾಹ್ಮಣೋ ನಾತ್ರ ಸಂಶಯಃ ॥ ೨೬ ॥

ಕುರ್ಯಾದನ್ಯನ್ನ ವಾ ಕುರ್ಯಾತ್ ಮೈತ್ರೋ ಬ್ರಾಹ್ಮಣ ಉಚ್ಯತೆ ।
ಪೂರ್ವಾಂ ಸಂಧ್ಯಾಂ ಜಪಂಸ್ತಿಷ್ಠೇತ್ ಸಾವಿತ್ರೀ ಮಾರ್ಕದರ್ಶನಾತ್ ॥ ೨೭ ॥

ಪಶ್ಚಿಮಾಂ ತು ಸಮಾಸೀನಃ ಸಮ್ಯಗೃಕ್ಷ ವಿಭಾವನಾತ್ ।
ದಿನಸ್ಯಾದೌ ಭವೇತ್ಪೂರ್ವಾ ಶರ್ವರ್ಯಾದೌ ತಥಾ ಪರಾ ॥ ೨೮ ॥

ಸನಕ್ಷತ್ರಾ ಪರಾ ಜ್ಞೇಯಾ ಅಪರಾ ಸದಿವಾಕರಾ ।
ಜಪಂಸ್ತಿಷ್ಠನ್ ಪರಾಂ ಸಂಧ್ಯಾಂ ನೈಶಮೇನೋ ವ್ಯಪೋಹತಿ ॥ ೨೯ ॥

---

೨೫. ವಿಧಿಯಜ್ಞದಿಂದ ಕೂಡಿದ ಯಾವ ನಾಲ್ಕು ಪಾಕಯಜ್ಞಗಳುಂಟೋ ಅವೆಲ್ಲವೂ ಜಪಯಜ್ಞದ ಹದಿನಾರನೇ ಒಂದುಪಾಲಿಗೆ ಸರಿಯಾಗಲಾರವು.

೨೬. ಜಪದಿಂದಲೇ ಬ್ರಾಹ್ಮಣನು ಸರಿಯಾದ ಸಿದ್ಧಿಯನ್ನು ಪಡೆವನೆಂಬುದರಲ್ಲಿ ಸಂಶಯವಿಲ್ಲ.

೨೭. ಮಿತ್ರ ಎಂದರೆ ಸೂರ್ಯ. ಯಾವುದನ್ನು ಮಾಡಲಿ ಮಾಡದಿರಲಿ ಸೂರ್ಯಸಂಬಂಧವಾದ ಕರ್ಮಮಾಡಿದವನು ಬ್ರಾಹ್ಮಣನೆನಿಸುವನು. ಸೂರ್ಯದರ್ಶನದ ವರೆಗೆ ಪ್ರಾತಃಸಂಧ್ಯೆಯಲ್ಲಿ ಗಾಯತ್ರಿಯನ್ನು ಜಪಿಸುತ್ತಾ ನಿಂತಿರಬೇಕು.

೨೮. ಚೆನ್ನಾಗಿ ನಕ್ಷತ್ರ ಕಾಣುವವರೆಗೆ ಸಂಧ್ಯಾಕಾಲದಲ್ಲಿ ಕುಳಿತುಕೊಂಡು ಜಪಮಾಡಬೇಕು. ಹಗಲಿನ ಪ್ರಾರಂಭದಲ್ಲಿ ಪ್ರಾತಃಸ್ಸಂಧ್ಯಾ ಮತ್ತು ರಾತ್ರ್ಯಾರಂಭದಲ್ಲಿ ಸಾಯಂಸಂಧ್ಯೆ ಇವು ಇರುವುದು.

೨೯. ಸಾಯಂಸಂಧ್ಯೆಯು ನಕ್ಷತ್ರಗಳಿಂದ ಕೂಡಿದ್ದೆಂದೂ, ಪ್ರಾತಃಸಂಧ್ಯೆಯು ಸೂರ್ಯಸಹಿತವೆಂದೂ ತಿಳಿಯಬೇಕು. ಪ್ರಾತಃಸ್ಸಂಧ್ಯೆಯಲ್ಲಿ ನಿಂತು ಜಪಿಸಿದವರೆ ಪೂರ್ವದಿವಸದ ರಾತ್ರಿಮಾಡಿದ ಪಾಪವನ್ನು ಕಳೆದುಕೊಳ್ಳುವನು.

ಅಪರಾಂ ತು ಸಮಾಸೀನೋ ಮಲಂ ಹಂತಿ ದಿವಾಕೃತಂ ।
ನೋಪತಿಷ್ಠತಿ ಯಃ ಪೂರ್ವಾಂ ನೋಪಾಸ್ತೇ ಪಶ್ಚಿಮಾಂ ನೃಪ ॥ ೩೦ ॥

ಸ ಶೂದ್ರವದ್ಬಹಿಷ್ಕಾರ್ಯಃ ಸರ್ವಸ್ಮಾದ್ದ್ವಿಜಕರ್ಮಣಃ ।
ಅಪಾಂ ಸಮೀಪೇ ನಿಯತೋ ನೈತ್ಯಕಂ ವಿಧಿಮಾಸ್ಥಿತಃ ॥ ೩೧ ॥

ಸಾವಿತ್ರೀಮಪ್ಯಧೀಯೀತ ಗತ್ವಾರಣ್ಯಂ ಸಮಾಹಿತಃ ।
ವೇದೋಪಾಕರಣೇ ರಾಜನ್ ಸ್ವಾಧ್ಯಾಯೇ ಚೈವ ನೈತ್ಯಕೇ ॥ ೩೨ ॥

ನಾತ್ರ ದೋಷೋಸ್ತ್ಯನಧ್ಯಾಯೇ ಹೋಮಮಂತ್ರೇಷು ವಾ ವಿಭೋ ।
ನೈತ್ಯಕೇ ನಾಸ್ತ್ಯನಧ್ಯಾಯೋ ಬ್ರಹ್ಮಸತ್ರಂ ಹಿ ತತ್ಸ್ಮೃತಂ ॥ ೩೩ ॥

ಬ್ರಹ್ಮಾಹುತಿ ಹುತಂ ಪುಣ್ಯಮನಧ್ಯಾಯವಷಟ್ಕೃತಂ ।
ಋಗೇಕಾಂ ಯಸ್ತ್ವಧೀಯೀತ ವಿಧಿನಾ ನಿಯತೋ ದ್ವಿಜಃ ॥ ೩೪ ॥

---

ಸಾಯಂ ಸಂಧ್ಯೆಯಲ್ಲಿ ಕುಳಿತು ಜಪಿಸಿದರೆ ಆ ಹಗಲಿನಲ್ಲಿ ಮಾಡಿದ ಪಾಪವನ್ನು ಹೋಗಲಾಡಿಸಿಕೊಳ್ಳುತ್ತಾನೆ.

೩೦-೩೧. ಯಾವನು ಪ್ರಾತಃಸಂಧ್ಯೆಯನ್ನಾಗಲೀ, ಸಾಯಂಸಂಧ್ಯೆಯನ್ನಾಗಲೀ ಉಪಾಸನ ಮಾಡುವುದಿಲ್ಲವೋ ಅವನನ್ನು ಎಲ್ಲೂ ಯಾವ ಬ್ರಾಹ್ಮಣ ಕರ್ಮಗಳಿಗೂ ಸೇರಿಸದೆ ಶೂದ್ರನಂತೆ ಬಹಿಷ್ಕರಿಸಬೇಕು. ಜಲಸಮೀಪದಲ್ಲಿ ನಿಯತವಾಗಿ (ಕ್ಲಪ್ತವಾಗಿ) ನಿತ್ಯಕರ್ಮಗಳನ್ನು ಮಾಡಬೇಕು.

೩೨-೩೩. ಸಮಾಧಾನದಿಂದ ಕೂಡಿದ ಮನಸ್ಸುಳ್ಳವನಾಗಿ ಅರಣ್ಯಕ್ಕೆಹೋಗಿ ಗಾಯತ್ರಿಯ ಮಂತ್ರವನ್ನು ಅಧ್ಯಯನ ಮಾಡಬೇಕು. ಎಲೈ ರಾಜನೇ! ವೇದೋಪಾಕರಣ (ಉಪಾಕರ್ಮ) ವೆಂಬ ಸಂಸ್ಕಾರದಲ್ಲೂ ನಿತ್ಯವೇದಾಧ್ಯಯನ ಮಾಡುವ ಸಂದರ್ಭದಲ್ಲೂ ಹೋಮಮಂತ್ರಗಳನ್ನು ಹೇಳುವಾಗಲೂ, ನಿತ್ಯಕರ್ಮ ಮಾಡುವಾಗಲೂ ಅನಧ್ಯಾಯದ ದೋಷವಿಲ್ಲ. ಅದು ಬ್ರಹ್ಮಸತ್ರವೆಂದು ಹೇಳುತ್ತಾರೆ.

೩೪. ೩ ಬ್ರಹ್ಮಾಹುತಿಯಾಗಿ ಹೋಮಮಾಡುವುದೂ, ಮಂತ್ರಾಧ್ಯಯನವಿಲ್ಲದೇ (ಮಂತ್ರಹೇಳದೇ) ವಷಟ್ಕೃತವಾದುದೂ ಪುಣ್ಯಕರವು. ಬ್ರಾಹ್ಮಣನು ನಿಯಮದಿಂದ ಕೂಡಿ ವಿಧಿಗನುಸಾರವಾಗಿ ಒಂದು ಋಕ್ಕನ್ನಾದರೂ ಅಧ್ಯಯನ ಮಾಡಬೇಕು.

**ತಸ್ಯ ನಿತ್ಯಂ ಕ್ಷರತ್ಯೇಷಾ ಪಯೋ ಮೇಧ್ಯಂ ಘೃತಂ ಮಧು ।**
**ಅಗ್ನಿ ಶುಶ್ರೂಷಣಂ ಭೈಕ್ಷಮಧಃಶಯ್ಯಾಂ ಗುರೋರ್ಹಿತರ್ ॥ ೩೫ ॥**

**ಆ ಸಮಾವರ್ತನಾತ್ಕುರ್ಯಾತ್ ಕೃತೋಪನಯನೋ ದ್ವಿಜಃ ।**
**ಆಚಾರ್ಯಪುತ್ರಶುಶ್ರೂಷಾಂ ಜ್ಞಾನದೋ ಧಾರ್ಮಿಕಃ ಶುಚಿಃ ॥ ೩೬ ॥**

**ಆಪ್ತಃ ಶಕ್ತೋಽನ್ನದಃ ಸಾಧುಃ ಸ್ವಾಧ್ಯಾಪ್ಯಾ ದಶ ಧರ್ಮತಃ ।**
**ನಾ ಪೃಷ್ಟಃ ಕಸ್ಯ ಚಿದ್ಬ್ರೂಯಾತ್ ನ ಚಾನ್ಯಾಯೇನ ಪೃಚ್ಛತಃ ॥ ೩೭ ॥**

**ಜಾನನ್ನಪಿ ಹಿ ಮೇಧಾವೀ ಜಡವಲ್ಲೋಕೆ ಆಚರೇತ್ ।**
**ಅಧರ್ಮೇಣ ಚ ಯಃ ಪ್ರಾಹ ಯಶ್ಚಾಧರ್ಮೇಣ ಪೃಚ್ಛತಿ ॥ ೩೮ ॥**

---

೩೫. ಹೀಗೆ ಅವನು ಅಧ್ಯಯನಮಾಡಿದ ಈ ಋಕ್ಕು ಅವನ ನಿವಾಸದಲ್ಲಿ ಪರಿಶುದ್ಧವಾದ ಹಾಲು, ತುಪ್ಪ, ಜೇನುತುಪ್ಪ ಇವುಗಳನ್ನು ಸಮೃದ್ಧಿಯಾಗಿ ಸುರಿಸುವುದು. ಅಗ್ನಿಕಾರ್ಯ, ಭಿಕ್ಷಾಚರಣ ನೆಲದಮೇಲೆ ಮಲಗುವುದು ಗುರುವಿಗೆ ಹಿತವಾದ ಕಾರ್ಯವನ್ನು ಮಾಡುವುದು. ಇವು ವಟುವಿಗೆ ನಿಯತವಾದುವು.

೩೬. ಉಪನಯನವಾದ ಬ್ರಾಹ್ಮಣನು ಸಮಾವರ್ತನದವರೆಗೆ ಎಂದರೆ ವೇದಾಧ್ಯಾಯನ ಪೂರೈಸಿ ಗುರುಗಳ ಮನೆಯಿಂದ ಹಿಂತಿರುಗುವವರೆಗೂ ಈ ಅಗ್ನಿ ಕಾರ್ಯಾದಿಗಳನ್ನು ಮಾಡಬೇಕು.

೩೭. ಶುಚಿಯೂ ಧಾರ್ಮಿಕನೂ ಆಗಿ ಆಚಾರ್ಯ ಪುತ್ರನ ಶುಶ್ರೂಷೆಯನ್ನೂ ಮಾಡುತ್ತಾ ಅವರಿಗೆ ಜ್ಞಾನದಾನವನ್ನು ಮಾಡಬೇಕು ಅವರಿಗೆ ಆಪ್ತನೂ ಅನ್ನದಾನ ಮಾಡುವವರಲ್ಲಿ ಶಕ್ತನೂ ಆಗಬೇಕು. ಗುರೂಪದೇಶದಿಂದ ತನಗೆ ತಿಳಿದುದನ್ನು ಇತರರಿಗೂ ಚೆನ್ನಾಗಿ ತಿಳಿಸಬೇಕು.

೩೮. ಯಾರೂ ಕೇಳದಿದ್ದಾಗ ತನಗೆ ತಿಳಿದಿದೆ ಎಂಬ ಕಾರಣದಿಂದ ತಾನೇ ಏನನ್ನೂ ಯಾರಿಗೂ ಹೇಳಬಾರದು. ನ್ಯಾಯ ಮೀರಿ ಕೇಳುವವನಿಗಂತೂ ಹೇಳಲೇ ಬಾರದು. ಮೇಧಾವಿಯಾದವನು ತನಗೆ ತಿಳಿದಿದ್ದರೂ ತಿಳಿಯದವನಂತಿರಬೇಕು. ಯಾವನು ಅಧರ್ಮದಿಂದ ಹೇಳುತ್ತಾನೋ ಯಾವನು ಅಧರ್ಮದಿಂದ ಕೇಳು ತ್ತಾನೋ ಅವರಿಬ್ಬರಲ್ಲೊಬ್ಬನು ಮೃತಿಹೊಂದುತ್ತಾನೆ. ಅಥವಾ ಲೋಕದ್ವೇಷ ವನ್ನಾದರೂ ಹೊಂದುತ್ತಾನೆ.

ತಯೋರನ್ಯತರಃ ಪ್ರೀತಿ ವಿದ್ವೇಷಂ ವಾ ನಿಗಚ್ಛತಿ ।
ಧರ್ಮಾರ್ಥೌ ಯಸ್ಯ ನ ಸ್ಯಾತಾಂ ಶುಶ್ರೂಷಾ ಚಾಪಿ ತದ್ವಿಧಾ ।
ನ ತತ್ರ ವಿದ್ಯಾ ವಪ್ತವ್ಯಾ ಶುಭಂ ಬೀಜಮಿವೋಷರೇ ॥ ೩೯ ॥

ವಿದ್ಯಯೈವ ಸಮಂ ಕಾಮಂ ಮರ್ತವ್ಯಂ ಬ್ರಹ್ಮವಾದಿನಾ ।
ಆಪದ್ಯಪಿ ಹಿ ಘೋರಾಯಾಂ ನತ್ವೇನಾಮೀರಿಣೇ ವಪೇತ್ ॥ ೪೦ ॥

ವಿದ್ಯಾ ಬ್ರಾಹ್ಮಣಮಿತ್ಯಾಹ ಶೇವಧಿಸ್ತೇಽಸ್ಮಿ ರಕ್ಷ ಮಾಂ ।
ಅಸೂಯಕಾಯ ಮಾ ಪ್ರಾದಾಃ ತಥಾ ಸ್ಯಾಂ ವೀರ್ಯವತ್ತಮಾ ॥ ೪೧ ॥

ಶೇವಂ ಸುಖಮುಶಂತೀಹ ಕೇಚಿತ್ ಜ್ಞಾನಂ ಪ್ರಚಕ್ಷತೇ ।
ತೌ ಧಾರಯತಿ ವೈ ಯಸ್ಮಾತ್ ಶೇವಧಿಸ್ತೇನ ಸೋಚ್ಯತೇ ॥ ೪೨ ॥

---

೩೯. ಯಾವನಲ್ಲಿ ಧರ್ಮಾರ್ಥಾಸಕ್ತಿಯಿಲ್ಲವೋ, ಯಾವನಲ್ಲಿ ವಿಷಯ ಶ್ರವಣೇಚ್ಛೆಯೂ ಅಂಥದೇಯೋ, ಅವನಿಗೆ ವಿದ್ಯೆಹೇಳಿದರೆ ಕರಲುಭೂಮಿಯಲ್ಲಿ ಒಳ್ಳೆಯ ಬೀಜವನ್ನು ಬಿತ್ತಿದ ಹಾಗಾಗುವುದು.

೪೦. ಬ್ರಹ್ಮವಾದಿಯಾದವನು ವಿದ್ಯೆಯೊಡಗೂಡಿಯೇ ಮೃತನಾಗಬೇಕು. ಎಂದರೆ ಮರಣಕಾಲದಲ್ಲೂ ಸಹ ಜ್ಞಾನಯುಕ್ತನಾಗಿರಬೇಕು, ಭಯಂಕರವಾದ ಆಪತ್ತು ಬಂದರೂ ಈ ವಿದ್ಯೆಯನ್ನು ಊಷರ ಕ್ಷೇತ್ರಗಳಲ್ಲಿ ಬಿತ್ತಬಾರದು.

೪೧. ವಿದ್ಯೆಯು ಬ್ರಾಹ್ಮಣನನ್ನು " ಕುರಿತು ನಾನು ನಿನಗೆ ನಿಧಿಯಾಗಿದ್ದೇನೆ. ನನ್ನನ್ನು ರಕ್ಷಿಸು, ಹೊಟ್ಟೆಕಿಚ್ಚು ಪಡುವವನಿಗೆ ನನ್ನನ್ನು ಕೊಡಬೇಡ ; ಹೀಗೆ ಮಾಡಿದರೆ ನಾನು ಅತ್ಯಂತ ಶಕ್ತಿಯುಳ್ಳವಳಾದೇನು ಎಂದು " ಹೇಳುತ್ತದೆ.

೪೨. ಶೇವ ಶಬ್ದಕ್ಕೆ ಸುಖವೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಕೆಲವರು ಶೇವವೆಂದರೆ ಜ್ಞಾನವೆನ್ನುತ್ತಾರೆ. ಸುಖ, ಜ್ಞಾನ ಈ ಎರಡು ರೂಪವಾಗಿಯೂ ಇರುವಿಕೆಯನ್ನು ಧರಿಸಿರುವ ಕಾರಣದಿಂದ ಅದಕ್ಕೆ ಶೇವಧಿ ಎಂದು ಹೆಸರು ಬಂದಿರುತ್ತದೆ.

ಯಮೇವ ತು ಶುಚಿಂ ವಿದ್ಯಾನ್ನಿಯತಂ ಬ್ರಹ್ಮಚಾರಿಣಂ ।
ತಸ್ಮೈ ಮಾಂ ಬ್ರೂಹಿ ವಿಪ್ರಾಯ ನಿಧಿಪಾಯಾಪ್ರಮಾದಿನೇ ॥ ೪೩ ॥

ಬ್ರಹ್ಮಯಸ್ತ್ವನನುಜ್ಞಾತಮಧೀಯಾನಾದವಾಪ್ನುಯಾತ್ ॥ ೪೪ ॥

ಲೌಕಿಕಂ ವೈದಿಕಂ ವಾಪಿ ತಥಾಧ್ಯಾತ್ಮಿಕಮೇವ ಚ
ಸ ಯಾತಿ ನರಕಂ ಘೋರಂ ರೌರವಂ ಭೀಮದರ್ಶನಂ ॥ ೪೫ ॥

ಅಣುಮಾತ್ರಾತ್ಮಕಂ ದೇಹಂ ಷೋಡಶಾರ್ಧಮಿತಿ ಸ್ಮೃತಂ ।
ಆದದೀತ ಯತೋ ಜ್ಞಾನಂ ತಂ ಪೂರ್ವಮಭಿವಾದಯೇತ್ ॥ ೪೬ ॥

ಸಾವಿತ್ರೀಸಾರಮಾತ್ರೋಽಪಿ ವರೋ ವಿಪ್ರಃ ಸುಯಂತ್ರಿತಃ ।
ನಾಯಂತ್ರಿತಸ್ತ್ರಿವೇದೋಽಪಿ ಸರ್ವಾಶೀ ಸರ್ವವಿಕ್ರಯೀ ॥ ೪೭ ॥

---

೪೩. ಯಾವನು ಶುಚಿಯೆಂದೂ ಯಾವಾಗಲೂ ಬ್ರಹ್ಮಪರನೆಂದೂ (ಬ್ರಹ್ಮನಲ್ಲಿ ಚರಿಸುವನು) ನಿನಗೆ ತಿಳಿದು ಬರುತ್ತದೋ ಅವನಿಗೂ; ಈ ನಿಧಿಯನ್ನು ಕಾಪಾಡಿಕೊಳ್ಳ ತಕ್ಕವನೂ, ಪ್ರಮಾದವಿಲ್ಲದವನೂ ಆದ ವಿಪ್ರನಿಗೂ; ವಿದ್ಯೆಯನ್ನು ಉಪದೇಶಮಾಡು,

೪೪. ಅಧ್ಯಯನವನ್ನು ಮಾಡಿಕೊಳ್ಳುತ್ತಿರುವವನಿಂದ ಅವನಿಗೆ ತಿಳಿಯು ದಂತೆ ವೇದವನ್ನು ತಾನೇ ಅಧ್ಯಯನ ಮಾಡುವವನೂ,

೪೫. ಮತ್ತು ಲೌಕಿಕ ವೈದಿಕವಾದ ವಿದ್ಯೆಗಳನ್ನಾಗಲಿ ಆತ್ಮವಿಚಾರಕ್ಕೆ ಸಂಬಂಧಿಸಿದ ನಿಯಮಗಳನ್ನಾಗಲಿ ಗುರುವಿಗೆ ತಿಳಿಯದಂತೆ ಹೊಂದುವುದಕ್ಕೆ ಪ್ರಯತ್ನಪಡುವವನೂ ಭಯಂಕರ ದೃಶ್ಯವುಳ್ಳ ರೌರವವೆಂಬ ನರಕವನ್ನು ಸೇರುತ್ತಾರೆ.

೪೬. ಪರಮಾಣು ರೂಪವಾದ ಮಾತ್ರೆಗಳಿಂದ ನಿರ್ಮಿತವಾದ ಈ ದೇಹವು ಎಂಟುಗೇಣು ಪ್ರಮಾಣವುಳ್ಳದ್ದು ಆ ಪ್ರಮಾಣವು ಎಲ್ಲರಲ್ಲೂ ಸಮವಾಗಿದ್ದರೂ ಜ್ಞಾನೋಪದೇಶಮಾಡತಕ್ಕ ಗುರುವನ್ನು ಮೊದಲು ನಮಸ್ಕರಿಸಬೇಕು.

೪೭. ಗಾಯತ್ರಿಯೊಂದರ ಸಾರತತ್ವವನ್ನು ಮಾತ್ರ ತಿಳಿದುಕೊಂಡಿದ್ದು ಶಾಸ್ತ್ರಾ ಚಾರಕ್ಕೆ ಅನುಸಾರವಾಗಿ ನಡೆಯುವ ಬ್ರಾಹ್ಮಣನೇ ಉತ್ತಮ. ಸರ್ವಭಕ್ಷಕನೂ ಎಂದರೆ ಆಹಾರ ನಿಯಮವಿಲ್ಲದವನೂ; ಎಲ್ಲವನ್ನೂ ಮಾರತಕ್ಕವನೂ ಆಗಿ ವೇದ ತ್ರಯವನ್ನು ಅಧ್ಯಯನಮಾಡಿದ್ದರೂ ಅವನು ಶಾಸ್ತ್ರನಿರ್ಬಂಧಕ್ಕೊಳಪಡದೇ ಇರುವ ಕಾರಣ ಸುತರಾಂ ಪ್ರಯೋಜನವಿಲ್ಲ.

ಶಯ್ಯಾಸನೇಧ್ಯಾಚರಿತೇ ಶ್ರೇಯೋರ್ಥೀ ನ ಸಮಾವಿಶೇತ್ ।
ಶಯ್ಯಾಸನಸ್ಥಶ್ಚೈವೇನಂ ಪ್ರತ್ಯುತ್ಥಾಯಾಭಿವಾದಯೇತ್ ॥ ೪೮ ॥

ಊರ್ಧ್ವಂ ಪ್ರಾಣಾಹ್ಯುತ್ಕ್ರಮಂತಿ ಯೂನಃ ಸ್ಥವಿರ ಆಗತೇ ।
ಪ್ರತ್ಯುತ್ಥಾನಾಭಿವಾದಾಭ್ಯಾಂ ಪುನಸ್ತಾನ್ ಪ್ರತಿಪದ್ಯತೆ ॥ ೪೯ ॥

ಅಭಿವಾದನಶೀಲಸ್ಯ ನಿತ್ಯಂ ವೃದ್ಧೋಪಸೇವಿನಃ ।
ಚತ್ವಾರಿ ಸಂಪ್ರವರ್ಧಂತೇ ಆಯುಃ ಪ್ರಜ್ಞಾ ಯಶೋ ಬಲಂ ॥ ೫೦ ॥

ಅಭಿವಾದನಪರೋ ವಿಪ್ರೋ ಜ್ಯಾಯಾಂಸಮಭಿವಾದಯೇತ್ ।
ಅಸೌ ನಾಮಾಹಮಸ್ಮೀತಿ ಸ್ವನಾಮ ಪರಿಕೀರ್ತಯೇತ್ ॥ ೫೧ ॥

---

೪೮. ಶ್ರೇಯಸ್ಸನ್ನು ಅಪೇಕ್ಷಿಸುವವನು, ಗುರುವು ಬಂದಾಗ ಹಾಸಿಗೆ ಮುಂತಾದುವುಗಳಮೇಲೆ ಕೂತಿರಬಾರದು, ಮಲಗಿರಲೂ ಬಾರದು. ಗುರು ಬಂದಾಗ ಶಯ್ಯಾ ಮೊದಲಾದ ಆಸನದಲ್ಲಿದ್ದರೂ ಕೂಡಲೆ ಪ್ರತ್ಯುತ್ಥಾನಮಾಡಿ ನಮಸ್ಕಾರ ಮಾಡಬೇಕು.

೪೯. ವೃದ್ಧನು ತನ್ನ ಬಳಿಗೆ ಬಂದಾಗ ಯೌವನಸ್ಥನ ಪ್ರಾಣಗಳು ಮೇಲಕ್ಕೆ ಹಾರಿ ಹೋಗುವುದಕ್ಕೆ ಅಣಿಯಾಗಿರುತ್ತವೆ. ಎಂದರೆ ಭೀತಿಪಡುತ್ತಿರುತ್ತದೆ. ಬಂದ ವೃದ್ಧನಿಗೆ ಪ್ರತ್ಯುತ್ಥಾನಮಾಡಿ ನಮಸ್ಕಾರ ಮಾಡುವುದರಿಂದ ಹೋದ ಜೀವವು ಬಂದಂತೆ ಸುಸ್ಥಿತನಾಗುತ್ತಾನೆ.

೫೦. ನಿತ್ಯವೂ ವೃದ್ಧರನ್ನು ಸೇವೆಮಾಡುವ ಮತ್ತು ನಮಸ್ಕಾರಮಾಡುವ ಶೀಲವುಳ್ಳವನಿಗೆ ಆಯಸ್ಸು, ಬುದ್ಧಿ, ಯಶಸ್ಸು, ಶಕ್ತಿ ಇವು ನಾಲ್ಕೂ ಅಭಿವೃದ್ಧಿಯಾಗುತ್ತವೆ.

೫೧. ಬ್ರಾಹ್ಮಣನು ಹಿರಿಯರಿಗೆ ನಮಸ್ಕರಿಸಬೇಕಾದರೆ ಅಭಿವಾದನ ಮಾಡಬೇಕು. ಹಾಗೆ ನಮಸ್ಕರಿಸುವಾಗ ಇಂತಹ ಹೆಸರುಳ್ಳ ನಾನು ನಮಸ್ಕರಿಸುತ್ತೇನೆ. ಎಂದು ತನ್ನ ಹೆಸರು ಹೇಳಿ ನಮಸ್ಕರಿಸಬೇಕು. ಉಳಿದಕಾಲದಲ್ಲಿ ತನ್ನ ಹೆಸರನ್ನು ಹೇಳತಕ್ಕದ್ದಲ್ಲ.

ನಾಮಧೇಯಸ್ಯ ಯೇ ಕೇಚಿತ್ ಅಭಿವಾದಂ ನ ಜಾನತೇ ।
ತಾನ್ ಪ್ರಾಜ್ಞೋಽಹಮಿತಿ ಬ್ರೂಯಾತ್ ಸ್ತ್ರಿಯಃ ಸರ್ವಾಸ್ತಥೈವ ಚ ॥ ೫೨ ॥

ಭೋಃ ಶಬ್ದಂ ಕೀರ್ತಯೇದಂತೇ ಸ್ವಸ್ಯ ನಾಮ್ನೋಽಭಿವಾದನೇ ।
ನಾಮ್ನಃ ಸ್ವರೂಪ ಭಾವೋ ಹಿ ಭೋ ಭಾವ ಋಷಿಭಿಃ ಸ್ಮೃತಃ ॥ ೫೩ ॥

ಆಯುಷ್ಮಾನ್ ಭವ ಸೋಮ್ಯೇತಿ ವಾಚ್ಯೋ ವಿಪ್ರೋಽಭಿವಾದನೇ ।
ಅಕಾರಶ್ಚಾಸ್ಯ ನಾಮ್ನೋಽಂತೇ ವಾಚ್ಯಃ ಪೂರ್ವಾಕ್ಷರಃ ಪ್ಲುತಃ ॥ ೫೪ ॥

ಯೋ ನ ವೇತ್ತ್ಯಭಿವಾದಸ್ಯ ವಿಪ್ರಃ ಪ್ರತ್ಯಭಿವಾದನಂ ।
ನಾಭಿವಾದ್ಯಃ ಸ ವಿದುಷಾ ಯಥಾ ಶೂದ್ರಸ್ತಥೈವ ಸಃ ॥ ೫೫ ॥

ಅಭಿವಾದೇ ಕೃತೇ ಯಸ್ತು ನ ಕರೋತ್ಯಭಿವಾದನಂ ।
ಆಶೀರ್ವಾ ಕುರುಶಾರ್ದೂಲ ಸ ಯಾತಿ ನರಕಂ ಧ್ರುವಂ ॥ ೫೬ ॥

---

೫೨. ತನ್ನ ಹೆಸರನ್ನು ಹೇಳಿಕೊಂಡು ನಮಸ್ಕಾರ ಮಾಡಬೇಕೆಂಬುದು ಯಾರಿಗೆ ತಿಳಿಯದೋ ಅಂತಹವರು ನಾನು ನಮಸ್ಕರಿಸುತ್ತೇನೆಂದು ಹೇಳಿಕೊಂಡು ನಮಿಸಬೇಕು. ಹೆಂಗಸರೂ ಸಹ ಹೀಗೆಯೇ ನಮಸ್ಕಾರ ಮಾಡಬೇಕು.

೫೩. ತಮ್ಮ ಹೆಸರನ್ನು ಹೇಳಿಕೊಂಡು ನಮಸ್ಕರಿಸುವಾಗ ಕೊನೆಯಲ್ಲಿ "ಭೋ" ಎಂಬ ಶಬ್ದವನ್ನು ಹೇಳಬೇಕು. ಹೆಸರಿನ ಸ್ವರೂಪವನ್ನು ಹೇಳುವುದೇ ಭೋ ಎಂಬ ಶಬ್ದದ ಅಭಿಪ್ರಾಯವೆಂದು ಋಷಿಗಳ ಮತ.

೫೪. ಬ್ರಾಹ್ಮಣನು ಅಭಿವಾದನ ಮಾಡಿದಾಗ "ಸೋಮ್ಯನೇ ! ಆಯುಷ್ಮಂತನಾಗು" ಎಂದು ಪ್ರತಿ ಹೇಳಬೇಕು. ನಮಸ್ಕರಿಸಿದವನ ಹೆಸರಿನ ಕೊನೆಯಲ್ಲಿ ಆ ಎಂಬ ಪ್ಲುತವನ್ನು ಉಚ್ಚರಿಸಬೇಕು.

೫೫. ನಮಸ್ಕಾರ ಮಾಡಿದವನಿಗೆ ಪ್ರತಿಯಾಗಿ ನಮಸ್ಕಾರವನ್ನು ಹೇಳಬೇಕೆಂಬುದನ್ನು ಯಾವ ಬ್ರಾಹ್ಮಣನು ತಿಳಿಯನೋ ಅವನು ಶೂದ್ರನಿಗೆ ಸಮನು. ಅಂತಹವನಿಗೆ ಪ್ರಾಜ್ಞನು ನಮಸ್ಕರಿಸಲೇಬಾರದು.

೫೬. ಕುರುವಂಶಶ್ರೇಷ್ಠನಾದ ರಾಜನೇ ! ತನಗೆ ಅಭಿವಾದನ ಮಾಡಿದಾಗ ಸಮಾನರಿಗೆ ಪ್ರತ್ಯಭಿವಾದನವನ್ನೋ ಅಥವಾ ಕಿರಿಯರಿಗೆ ಆಶೀರ್ವಾದವನ್ನೋ ಮಾಡದೇ ಹೋಗುವವನಿಗೆ ನಿಶ್ಚಯವಾಗಿ ನರಕಪ್ರಾಪ್ತಿಯಾಗುವುದು.

ಅಭೀತಿ ಭಗವಾನ್ವಿಷ್ಣುರ್ವಾದಯಾಮೀತಿ ಶಂಕರಃ ।
ದಪ್ಯಷೇವ ಪ್ರೂಜಿತೌ ತೇನ ಯಃ ಕರೋತ್ಯಭಿವಾದನಂ ॥ ೫೭ ॥

ಬ್ರಾಹ್ಮಣಂ ಕುಶಲಂ ಪೃಚ್ಛೇತ್ಕ್ಷತ್ರ ಬಂಧುರನಾಮಯಂ ।
ವೈಶ್ಯಂ ಕ್ಷೇಮಂ ಸಮಾಗಮ್ಯ ಶೂದ್ರಮಾರೋಗ್ಯಮೇವ ತು ॥ ೫೮ ॥

ನ ವಾಚ್ಯೋ ದೀಕ್ಷಿತೋ ನಾಮ್ನಾ ಯವೀಯಾನಪಿ ಯೋ ಭವೇತ್ ।
ಭೋ ಭವತ್ಪೂರ್ವಕತ್ವೇನ ಇತಿ ಸ್ವಾಯಂಭುವೋಽಬ್ರವೀತ್ ॥ ೫೯ ॥

ಪರಪತ್ನೀ ತು ಯಾ ರಾಜನ್ ನ ಸಂಬದ್ಧಾ ತು ಯೋನಿತಃ ।
ವಕ್ತವ್ಯಾ ಭವತೀತ್ಯೇವಂ ಸುಭಗೇ ಭಗಿನೀತಿ ಚ ॥ ೬೦ ॥

---

೫೭. ಅಭಿ ಶಬ್ದವೇ ವಿಷ್ಣು, ವಾದಯಾಮಿ ಶಬ್ದವೇ ಶಂಕರ, ಆದ್ದರಿಂದ ಅಭಿವಾದಯೆ ಎಂದು ಹೇಳುವುದು ಶಿವ ವಿಷ್ಣುಗಳಿಬ್ಬರನ್ನೂ ವಂದಿಸಿದಂತಾಗುವುದು. ಇದನ್ನೇ ಅಭಿ ಎಂಬ ಶಬ್ದದ ಅರ್ಥವು ವಿಷ್ಣುವೆಂತಲೂ, ವಾದಯೆ ಎಂಬ ಶಬ್ದದ ಅರ್ಥವು ಶಂಕರನೆಂತಲೂ, ಅಭಿವಾದಯೆ ಎಂದು ಹೇಳಿದರೆ ವಿಷ್ಣು ಮತ್ತು ಈಶ್ವರ ಇಬ್ಬರಿಗೂ ನಮಸ್ಕಾರಮಾಡಿದಂತಾಗುತ್ತದೆ ಎಂಬದಾಗಿ ಕೆಲವರು ಹೇಳುತ್ತಾರೆ.

೫೮. ಬ್ರಾಹ್ಮಣನನ್ನು ಸಂಧಿಸಿದಾಗ ಕುಶಲವೇ ? ಎಂದೂ ; ಕ್ಷತ್ರಿಯನನ್ನು ಕಂಡಾಗ ಅನಾಮಯವೇ? ಎಂದೂ ; ವೈಶ್ಯನನ್ನು ಕಂಡಾಗ ' ಕ್ಷೇಮವೇ ? ' ಎಂದೂ ; ಶೂದ್ರನನ್ನು ಕಂಡಾಗ ' ಆರೋಗ್ಯವೇ ? ' ಎಂದೂ, ಪ್ರಶ್ನೆಮಾಡಬೇಕು.

೫೯. ಯಜ್ಞದೀಕ್ಷಿತನು ವಯಸ್ಸಿನಲ್ಲಿ ಚಿಕ್ಕವನಾದರೂ ಆತನನ್ನು ಹೆಸರು ಹಿಡಿದು ಕರೆಯಬಾರದು. ' ಭೋ ' ಅಥವಾ ' ಭವತ್ ' ಶಬ್ದಪೂರ್ವಕವಾಗಿ ಅಭಿವಾದನಮಾಡಬೇಕೆಂದು ಸ್ವಾಯಂಭುವ ಮನುವು ಹೇಳಿದ್ದಾನೆ.

೬೦. ಅಯ್ಯಾ ರಾಜನೇ ! ಯಾವರೀತಿಯಲ್ಲೂ ದೇಹಸಂಬಂಧವಿಲ್ಲದ ಪರ ಸ್ತ್ರೀಯನ್ನು ಪೂಜ್ಯಳೇ ! ಸೌಭಾಗ್ಯವತಿ ! ತಂಗಿ ! ಎಂಬದಾಗಿ ಕರೆಯಬೇಕು.

ಪಿತೃವ್ಯಾನ್ಮಾತುಲಾನ್ ರಾಜನ್ ಶ್ವಶುರಾನ್ ಋತ್ವಿಜೋ ಗುರೂನ್ ।
ಅಸಾವಹಮಿತಿ ಬ್ರೂಯಾತ್ ಪ್ರತ್ಯುತ್ಥಾಯ ಜಘನ್ಯಜಃ ॥ ೬೧ ॥

ಮಾತೃಷ್ವಸಾ ಮಾತುಲಾನೀ ಶ್ವಶ್ರೂರಥ ಪಿತೃಷ್ವಸಾ ।
ಸಂಪೂಜ್ಯಾ ಗುರುಪತ್ನೀ ಚ ಸಮಾಸ್ತಾ ಗುರುಭಾರ್ಯಯಾ ॥ ೬೨ ॥

ಜ್ಯೇಷ್ಠಸ್ಯ ಭ್ರಾತುರ್ಯಾ ಭಾರ್ಯಾ ಸವರ್ಣಾಹನ್ಯಹನ್ಯಪಿ ।
ಪೂಜಯನ್ ಪ್ರಯತೋ ವಿಪ್ರೋ ಯಾತಿ ವಿಷ್ಣುಸದೋ ನೃಪ ॥ ೬೩ ॥

ಪ್ರವಾಸಾದೇತ್ಯ ಸಂಪೂಜ್ಯಾ ಜ್ಞಾತಿಸಂಬಂಧಿಯೋಷಿತಃ ।
ಪಿತುರ್ಯಾ ಭಗಿನೀ ರಾಜನ್ ಮಾತುಶ್ಚಾಪಿ ವಿಶಾಂಪತೇ ॥ ೬೪ ॥

ಆತ್ಮನೋ ಭಗಿನೀ ಯಾ ಚ ಜ್ಯೇಷ್ಠಾ ಕುರುಕುಲೋದ್ವಹ ।
ಸದಾ ಸ್ವಮಾತೃವದ್ವೃತ್ತಿಮಾತಿಷ್ಠೇದ್ಭಾರತೋತ್ತಮ ॥ ೬೫ ॥

---

೬೧. ಚಿಕ್ಕಪ್ಪ, ಸೋದರಮಾವ, ಹೆಣ್ಣುಕೊಟ್ಟಮಾವ, ಋತ್ವಿಜರು, ಗುರುಗಳು ಇವರುಗಳನ್ನು ನಮಸ್ಕರಿಸುವಾಗ ಪ್ರತ್ಯುತ್ಥಾನಮಾಡಿ ‘ ಈ ನಾನು ನಮಿಸುವೆನೆಂದು ಹೇಳಿ ನಮಿಸಬೇಕು.

೬೨. ತಾಯಿ, ತಂಗಿ, ಚಿಕ್ಕಮ್ಮ, ಸೋದರಮಾವನ ಹೆಂಡತಿ, ಸೋದರ ಅತ್ತೆ ಹೆಣ್ಣುಕೊಟ್ಟ ಅತ್ತೆ, ಗುರುವಿನ ಹೆಂಡತಿ, ಇವರನ್ನೆಲ್ಲಾ ಒಂದೇ ಸಮವಾಗಿ ಗೌರವಿಸಬೇಕು.

೬೩. ಅಯ್ಯಾ ರಾಜನೇ! ಕೇಳು, ಹಿರಿಯ ಅಣ್ಣನಿಗೆ ಸವರ್ಣಳಾದ ಹೆಂಡತಿಯನ್ನು ನಿತ್ಯವೂ ನಿಯಮದಿಂದ ಪೂಜಿಸುವ ವಿಪ್ರನಿಗೆ ವಿಷ್ಣುಲೋಕ ಪ್ರಾಪ್ತಿಯಾಗುತ್ತದೆ.

೬೪-೬೫. ಅಯ್ಯಾ ರಾಜನೇ! ಪರಸ್ಥಳಕ್ಕೆ ಹೋಗಿದ್ದು ಹಿಂತಿರುಗಿ ಬಂದವರು ತಮ್ಮ ದಾಯಾದಿಗಳ ಹೆಂಡತಿಯರನ್ನೂ, ಸೋದರತ್ತೆ, ಚಿಕ್ಕಮ್ಮ, ಅಕ್ಕ ಇವರುಗಳನ್ನೂ ಕಂಡು ತನ್ನ ತಾಯಿಯ ವಿಷಯದಲ್ಲಿ ನಡೆದುಕೊಳ್ಳುವಂತೆ ಗೌರವದಿಂದ ನಡೆದುಕೊಳ್ಳಬೇಕು.

ಗರೀಯಸೀ ತತಸ್ತಾಭ್ಯೋ ಮಹಾಜ್ಞೇಯಾ ನರಾಧಿಪ ।
ಪುತ್ರಮಿತ್ರಭಾಗಿನೇಯಾ ದ್ರಷ್ಟವ್ಯಾಹ್ಯಾತ್ಮನಾ ಸಮಾಃ ॥ ೬೬ ॥

ದಶಾಬ್ದಾಖ್ಯಂ ಪೌರಸಂಖ್ಯಂ ಪಂಚಾಬ್ದಾಖ್ಯಂ ಕಲಾಭೃತಾಂ ।
ಅಬ್ದಪೂರ್ವಂ ಶ್ರೋತ್ರಿಯಾಣಾಂ ಸ್ವಲ್ಪೇನಾಪಿ ಸ್ವಯೋನಿಷು ॥ ೬೭ ॥

ಬ್ರಾಹ್ಮಣಂ ದಶವರ್ಷಂ ಚ ಶತವರ್ಷಂ ಚ ಭೂಮಿಪಂ ।
ಪಿತಾಪುತ್ರೌ ವಿಜಾನೀಯಾತ್ ಬ್ರಾಹ್ಮಣಸ್ತು ತಯೋಃ ಪಿತಾ ॥ ೬೮ ॥

ಇತ್ಯೇವಂ ಕ್ಷತ್ರಿಯಪಿತಾ ವೈಶ್ಯಸ್ಯಾಪಿ ಪಿತಾಮಹಃ ।
ಪ್ರಪಿತಾಮಹಶ್ಚ ಶೂದ್ರಸ್ಯ ಪ್ರೋಕ್ತೋ ವಿಪ್ರೋ ಮನೀಷಿಭಿಃ ॥ ೬೯ ॥

ವಿತ್ತಂ ಬಂಧುರ್ವಯಃ ಕರ್ಮ ವಿದ್ಯಾ ಭವತಿ ಪಂಚಮೀ ।
ಏತಾನಿ ಮಾನ್ಯಸ್ಥಾನಾನಿ ಗರೀಯೋ ಯದ್ಯದುತ್ತರಂ ॥ ೭೦ ॥

---

೬೬. ಇವರೆಲ್ಲರಿಗಿಂತ ತಾಯಿ ಹೆಚ್ಚಿನವಳು ಎಂದು ತಿಳಿಯಬೇಕು. ಮಕ್ಕಳು, ಸ್ನೇಹಿತರು, ತಂಗಿಯ ಮಗ ಇವರನ್ನು ತನ್ನಂತೆ ಎಂದು ಭಾವಿಸಬೇಕು.

೬೭. ಊರಿನಲ್ಲಿರುವ ಬಂಧುಗಳಲ್ಲದ ಇತರರಲ್ಲಿ ತನಗಿಂತ ಹತ್ತುವರ್ಷ ಹಿರಿಯರನ್ನು ವೃದ್ಧರೆಂದೂ; ವಿದ್ಯಾವಂತರು ತನಗಿಂತ ಐದುವರ್ಷ ಹಿರಿಯರಾಗಿದ್ದರೂ ವೃದ್ಧರೆಂದೂ; ಶ್ರೋತ್ರಿಯರು ತನಗಿಂತ ಒಂದೇ ವರ್ಷಕ್ಕೆ ದೊಡ್ಡವರಾಗಿದ್ದರೂ ವೃದ್ಧರೆಂದೂ ; ದೇಹಸಂಬಂಧಿಗಳಲ್ಲಿ ಕೆಲವು ದಿನಗಳು ದೊಡ್ಡವರಾದರೂ ವೃದ್ಧರೆಂದೂ ಭಾವಿಸಬೇಕು.

೬೮. ಹತ್ತುವರ್ಷ ವಯಸ್ಸಿನ ಬ್ರಾಹ್ಮಣ, ನೂರುವರ್ಷ ವಯಸ್ಸಿನ ಕ್ಷತ್ರಿಯ, ಇವರಿಬ್ಬರೂ ತಂದೆ ಮಕ್ಕಳು ಎಂದು ಭಾವಿಸಬೇಕು. ಆವರಿಬ್ಬರಲ್ಲಿ ವಯಸ್ಸಿನಲ್ಲಿ ಕಿರಿಯನಾದರೂ ಬ್ರಾಹ್ಮಣನೇ ತಂದೆಯು. ವಯಸ್ಸಿನಲ್ಲಿ ಹಿರಿಯನಾದರೂ ಕ್ಷತ್ರಿಯನೇ ಮಗನು ಎನಿಸುವನು.

೬೯. ಬ್ರಾಹ್ಮಣನು ಕ್ಷತ್ರಿಯನಿಗೆ ತಂದೆಯೆಂದೂ, ವೈಶ್ಯನಿಗೆ ಅಜ್ಜನೆಂದೂ, ಶೂದ್ರನಿಗೆ ಮುತ್ತಜ್ಜನೆಂದೂ ವಿದ್ವಾಂಸರು ಹೇಳುತ್ತಾರೆ.

೭೦. ಮಾನವನಿಗಿರುವ ದ್ರವ್ಯಸಂಪತ್ತಿ, ಆತನೊಡನೆ ಬಂಧುತ್ವ, ವಯಸ್ಸು, ಆತನ ವೃತ್ತಿ, ಅವನ ವಿದ್ಯಾ, ಇವು ಐದೂ ಅವನಿಗೆ ಪೂಜ್ಯತೆಯನ್ನುಂಟುಮಾಡ

**ಪಂಚಾನಾಂ ತ್ರಿಷು ವರ್ಗೇಷು ಭೂಯಾಂಸಿ ಗುಣವಂತಿ ಚ ।**
**ಯಸ್ಯಸ್ಯುಃ ಸೋऽತ್ರ ಮಾನಾರ್ಹಃ ಶೂದ್ರೋऽಪಿ ದಶಮೀಂ ಗತಃ ॥ ೭೧ ॥**

**ಚಕ್ರಿಣೋ ದಶಮೀಸ್ಥಸ್ಯ ರೋಗಿಣೋ ಭಾರಿಣಃ ಸ್ತ್ರಿಯಾಃ ।**
**ಸ್ನಾತಕಸ್ಯ ತು ರಾಜ್ಞಶ್ಚ ಪಂಥಾ ದೇಯೋ ವರಸ್ಯ ಚ ॥ ೭೨ ॥**

**ಏಷಾಂ ಸಮಾಗಮೇ ತಾತ ಪೂಜ್ಯೌ ಸ್ನಾತಕಪಾರ್ಥಿವೌ ।**
**ಆಭ್ಯಾಂ ಸಮಾಗಮೇ ರಾಜನ್ ಸ್ನಾತಕೋ ನೃಪಮಾನಭಾಕ್ ॥ ೭೩ ॥**

**ಅಧ್ಯಾಪಯೇದ್ಯಸ್ತು ಶಿಷ್ಯಂ ಕೃತ್ವೋಪನಯನಂ ದ್ವಿಜಃ ।**
**ಸರಹಸ್ಯಂ ಸಕಲ್ಪಂ ಚ ವೇದ ಭರತಸತ್ತಮ ॥**
**ತಮಾಚಾರ್ಯಂ ಮಹಾಬಾಹೋ ಪ್ರವದಂತಿ ಮನೀಷಿಣಃ ॥ ೭೪ ॥**

---

ತಕ್ಕವು. ಇವು ಕ್ರಮವಾಗಿ ಒಂದನೇದಕ್ಕಿಂತ ಅದರ ಮುಂದಿನದು ಹೆಚ್ಚುಗೌರವ ಪ್ರದವಾದ್ದು. ಈ ಐವರಲ್ಲಿ ವಯಸ್ಸು, ಕರ್ಮ, ವಿದ್ಯೆ, ಎಂಬ ಕೊನೆಯ ಈ ಮೂರೂ ಉತ್ತರೋತ್ತರ ಗುಣವುಳ್ಳವು.

೭೧. ಎಂದರೆ ವಯಸ್ಸಿಗಿಂತ ಕರ್ಮ, ಕರ್ಮಕ್ಕಿಂತ ವಿದ್ಯಾ ಇವು ಗುಣಾಧಿಕ್ಯವುಳ್ಳವು. ವಯಸ್ಸು, ಕರ್ಮ, ಜ್ಞಾನ ಇವು ಯಾರಿಗೆ ಹೆಚ್ಚಾಗಿರುವುದೋ ಅವನು ಶೂದ್ರನಾದರೂ ಗೌರಕ್ಕೆ ಅರ್ಹನು.

೭೨. ಪರಸ್ಪರ ಅಭಿಮುಖವಾಗಿ ಪ್ರಯಾಣಮಾಡುವಾಗ ಒಬ್ಬರಿಗೊಬ್ಬರು ದಾರಿಬಿಡಬೇಕಾದ ಸಂದರ್ಭದಲ್ಲಿ ಕುರುಡ, ಮುದುಕ, ರೋಗಿ, ಭಾರಹೊತ್ತಿರುವವನು, ಸ್ತ್ರೀ, ಸ್ನಾತಕ, ರಾಜ, ಮತ್ತು ಮದುವೆಯಗಂಡು ಇವರಿಗೆ ದಾರಿಯಹಕ್ಕು ಸೇರಿರತಕ್ಕದ್ದು.

೭೩. ಇವರುಗಳೇ ದಾರಿಯಲ್ಲಿ ಅಭಿಮುಖವಾಗಿ ಸೇರಿದಾಗ ಸ್ನಾತಕನೂ, ರಾಜನೂ, ಇತರರಿಗಿಂತ ಹೆಚ್ಚು ಪೂಜ್ಯತೆಗೆ ಅರ್ಹರು. ಸ್ನಾತಕ, ರಾಜ, ಈ ಇಬ್ಬರೇ ಪರಸ್ಪರ ದಾರಿಯಲ್ಲಿ ಅಭಿಮುಖವಾಗಿ ಸೇರಿದಾಗ ಸ್ನಾತಕನೇ ರಾಜನಿಗಿಂತ ಮಾನಾರ್ಹನು.

೭೪. ಬ್ರಾಹ್ಮಣನು ಶಿಷ್ಯನಿಗೆ ಉಪನಯನಮಾಡಿ ರಹಸ್ಯಯುಕ್ತವಾಗಿಯೂ ಕಲ್ಪಸಹಿತವಾಗಿಯೂ ವೇದವನ್ನು ಅಧ್ಯಯನ ಮಾಡಿಸಬೇಕು. ಈರೀತಿ ಅಧ್ಯಯನ ಮಾಡಿಸಿದವನನ್ನು ಆಚಾರ್ಯನೆನ್ನಬೇಕೆಂದು ವಿದ್ವಾಂಸರು ಹೇಳುತ್ತಾರೆ.

ಏಕದೇಶಂ ತು ವೇದಸ್ಯ ವೇದಾಂಗಾನ್ಯಪಿ ವಾ ಪುನಃ ।
ಯೋಽಧ್ಯಾಪಯತಿ ವೃತ್ತ್ಯರ್ಥಮುಪಾಧ್ಯಾಯಃ ಸ ಉಚ್ಯತೇ ॥ ೭೫ ॥

ನಿಷೇಕಾದೀನಿ ಕಾರ್ಯಾಣಿ ಯಃ ಕರೋತಿ ನೃಪೋತ್ತಮ ।
ಅಧ್ಯಾಪಯತಿ ಚಾನ್ಯೇನ ಸ ವಿಪ್ರೋ ಗುರುರುಚ್ಯತೆ ॥ ೭೬ ॥

ಅಗ್ನ್ಯಾಧೇಯಂ ಪಾಕಯಜ್ಞಾನಗ್ನಿಷ್ಟೋಮಾದಿಕಾನ್ ಮಖಾನ್ ।
ಯಃ ಕರೋತಿ ವೃತೋ ಯಸ್ಯ ಸ ತಸ್ಯಾರ್ತ್ವಿಗಿಹೋಚ್ಯತೆ ॥ ೭೭ ॥

ಯ ಆವೃಣೋತ್ಯವಿತಥಂ ಬ್ರಹ್ಮಣಾ ಶ್ರವಣಾವುಭೌ ।
ಸ ಮಾತಾ ಸ ಪಿತಾ ಜ್ಞೇಯಸ್ತಂ ನ ದ್ರುಹ್ಯೇತ್ಕಥಂಚನ ॥ ೭೮ ॥

---

೭೫. ವೇದದ ಸ್ವಲ್ಪಭಾಗವನ್ನೋ ಅಥವಾ ವೇದಾಂಗಗಳನ್ನೋ ಜೀವನಾರ್ಥವಾಗಿ ಅಧ್ಯಯನ ಮಾಡಿಸುವವನು ಉಪಾಧ್ಯಾಯನೆನಿಸುವನು.

೭೬. ಓ ಪ್ರಭುವೇ ! ಪುತ್ರಜನನಕ್ಕೆ ಕಾರಣವಾದ ನಿಷೇಕಾದಿ ಕರ್ಮವನ್ನು ತಾನುಮಾಡಿ ಅಧ್ಯಯನವನ್ನು ಮಾತ್ರ ಇತರರಿಂದ ಮಾಡಿಸುವ ಸಂದರ್ಭದಲ್ಲಿ ಹಾಗೆ ಅಧ್ಯಯನಮಾಡಿಸಲು ಏರ್ಪಡಿಸಿದವನನ್ನು ಗುರು ಎನ್ನಬೇಕು.

೭೭. ಯಜಮಾನನು ಯಾವನ ಕೈಯಿಂದ ಅಗ್ನ್ಯಾಧಾನ, ಪಾಕಯಜ್ಞ, ಅಗ್ನಿಷ್ಟೋಮ, ಮುಂತಾದ ಯಾಗಗಳನ್ನು ನಡೆಯಿಸುತ್ತಾನೋ ಅವನು 'ಋತ್ವಿಕ್' ಎನಿಸಿಕೊಳ್ಳುವನು

೭೮. ಶಿಷ್ಯನ ಕಿವಿಗಳು ವ್ಯರ್ಥವಾಗದಂತೆ ಯಾವನು ಅವುಗಳನ್ನು ವೇದದಿಂದ ತುಂಬುತ್ತಾನೋ ಎಂದರೆ ವೇದಾಧ್ಯಯನ ಮಾಡಿಸುವನೋ ಅವನನ್ನು ಕೃಪಾಶಾಲಿತ್ವಾದಿಗುಣದಿಂದ ತಾಯಿಯೆಂದೂ, ಹಿತೋಪದೇಶತ್ವಗುಣದಿಂದ ತಂದೆಯೆಂದೂ ತಿಳಿಯಬೇಕು. ಅಂಥ ಗುರುವಿಗೆ ಯಾವ ವಿಧದಿಂದಲೂ ದ್ರೋಹ ಮಾಡಲು ಪ್ರಯತ್ನಪಡಬಾರದು

ಉಪಾಧ್ಯಾಯಾ ದಶಾಚಾರ್ಯ ಆಚಾರ್ಯಾಣಾಂ ಶತಂ ಪಿತಾ ।
ಸಹಸ್ರೇಣ ಪಿತುರ್ಮಾತಾ ಗೌರವೇಣಾತಿರಿಚ್ಯತೆ ॥ ೭೯ ॥

ಉತ್ಪಾದಕಬ್ರಹ್ಮದಾತ್ರೋರ್ಗರೀಯಾನ್ ಬ್ರಹ್ಮದಃ ಪಿತಾ ।
ಬ್ರಹ್ಮಜನ್ಮ ಹಿ ವಿಪ್ರಸ್ಯ ಪ್ರೇತ್ಯ ಚೇಹ ಚ ಶಾಶ್ವತಂ ॥ ೮೦ ॥

ಕಾಮಾನ್ಮಾತಾ ಪಿತಾ ಚೈನಂ ಯದುತ್ಪಾದಯತೋ ಮಿಥಃ ।
ಸಂಭೂತಿಂ ತಸ್ಯ ತಾಂ ವಿದ್ಯಾತ್ ಯದ್ಯೋನಾವಭಿಜಾಯತೆ ॥ ೮೧ ॥

ಆಚಾರ್ಯಸ್ತಸ್ಯ ತಾಂ ಜಾತಿಂ ವಿಧಿವದ್ವೇದಪಾರಗಃ ।
ಉತ್ಪಾದಯತಿ ಸಾವಿತ್ರ್ಯಾ ಸಾ ಸತ್ಯಾ ಸ್ಯಾಜರಾಮರಾ ॥ ೮೨ ॥

---

೭೯. ಗೌರವದ ವಿಷಯದಲ್ಲಿ ಹತ್ತುಮಂದಿ ಉಪಾಧ್ಯಾಯರಿಗೆ ಒಬ್ಬ ಆಚಾರ್ಯನು ಸಮನಾಗಿ ಉತ್ಕೃಷ್ಟನೆಂದೂ, ನೂರು ಆಚಾರ್ಯರಿಗೆ ಒಬ್ಬ ತಂದೆಯು ಸಮನಾಗಿ ಉತ್ಕೃಷ್ಟನೆಂದೂ, ಅಂತಹ ಸಹಸ್ರಮಂದಿ ಪಿತೃಗಳಿಗೆ ಒಬ್ಬ ತಾಯಿಯು ಸಮಾನವಾಗಿ ಉತ್ಕೃಷ್ಟಳೆಂದೂ ತಿಳಿಯಬೇಕು.

೮೦. ಜನಕ ತಂದೆ, ಬ್ರಹ್ಮೋಪದೇಶಮಾಡಿದವನು, ಇವರಿಬ್ಬರಲ್ಲಿ ಬ್ರಹ್ಮೋಪದೇಶಮಾಡಿದವನೇ ಹೆಚ್ಚು ಪೂಜ್ಯನು. ಏಕೆಂದರೆ ಸತ್ತರೂ, ಇದ್ದರೂ ಬ್ರಾಹ್ಮಣ ಜನ್ಮವು ಮನುಷ್ಯನಿಗೆ ಶಾಶ್ವತವಾದುದು.

೮೧. ತಮ್ಮ ಕಾಮತೃಪ್ತಿಗಾಗಿ ಅನ್ಯೋನ್ಯ ಸಂಗಮಾಡಿ ನಮ್ಮ ಜನ್ಮದಾತೃಗಳಾದವರು ತಾಯಿ ತಂದೆ ಎನಿಸುವರು. ಈರೀತಿ ಸಮಾಗಮದಿಂದ ಮಾತ್ರ ಯೋನಿಯಲ್ಲಿ ಹುಟ್ಟುವುದನ್ನು ಸಂಭೂತಿಯೆಂದು ತಿಳಿಯತಕ್ಕದ್ದು.

೮೨. ಹೀಗೆ ಜನ್ಮವೆತ್ತಿದವನಿಗೆ ವೇದಪಾರಂಗತನಾದ ಆಚಾರ್ಯನು ಶಾಸ್ತ್ರೋಕ್ತವಾಗಿ ಬ್ರಹ್ಮೋಪದೇಶಮಾಡಿ, ಗಾಯತ್ರೀ ಪ್ರಭಾವದಿಂದ ಹುಟ್ಟುಸಾವುಗಳಿಲ್ಲದುದೂ, ಸತ್ಯವೂ, ಆದ ವಿಪ್ರಜಾತಿಯನ್ನುಂಟುಮಾಡುತ್ತಾನೆ.

ಉಪಾಧ್ಯಾಯಮಾದಿತಃ ಕೃತ್ವಾ ಯೇ ಪೂಜ್ಯಾಃ ಕಥಿತಾಸ್ತವ ।
ಮಹಾಗುರುರ್ಮಹಾಬಾಹೋ ಸರ್ವೇಷಾಮಧಿಕಃ ಸ್ಮೃತಃ ॥ ೮೩ ॥

ಸಹಸ್ರಶತ ಸಂಖ್ಯೋಽಸಾವಾಚಾರ್ಯಾಣಾಮಿದಂ ಮಹತ್ ।
ಚತುರ್ಣಾಮಪಿ ವರ್ಣಾನಾಂ ಸ ಮಹಾಗುರುರುಚ್ಯತೇ ॥ ೮೪ ॥

॥ ಶತಾನೀಕ ಉವಾಚ ॥

ಯ ಏತೇ ಭವತಾ ಪ್ರೋಕ್ತಾ ಉಪಾಧ್ಯಾಯಮುಖಾ ದ್ವಿಜಾಃ ।
ವಿದಿತಾ ಏವ ಮೇ ಸರ್ವೇ ನ ಮಹಾಗುರುರೇವ ಹಿ ॥ ೮೫ ॥

॥ ಸುಮಂತುರುವಾಚ ॥

ಜಯೋಪಜೀವೀ ಯೋ ವಿಪ್ರಃ ಸ ಮಹಾಗುರುರುಚ್ಯತೇ ।
ಅಷ್ಟಾದಶಪುರಾಣಾನಿ ರಾಮಸ್ಯ ಚರಿತಂ ತಥಾ ॥ ೮೬ ॥

---

೮೩. ಅಯ್ಯಾ ಶೌರ್ಯಶಾಲಿಯೇ! ಉಪಾಧ್ಯಾಯರೇ ಮೊದಲಾಗಿ ಯಾರು ಯಾರು ಪೂಜ್ಯರೆಂದು ನಾನು ನಿನಗೆ ತಿಳಿಸಿದೆನೋ ಅವರಲ್ಲಿ ಮಹಾಗುರುವು ಎಲ್ಲರಿಗಿಂತ ಹೆಚ್ಚಿನವನೆಂದು ತಿಳಿಯಬೇಕು.

೮೪. ಆ ಮಹಾಗುರುವು ಲಕ್ಷಪಾಲು ಹೆಚ್ಚಿನವನೆಂಬುದು ಆಚಾರ್ಯರ ಮತ; ಅವನು ನಾಲ್ಕು ವರ್ಣಗಳವರಿಗೂ ಮಹಾಗುರುವೆನಿಸುತ್ತಾನೆ.

೮೫. ಆಗ ಶತಾನೀಕರಾಜನು ಪ್ರಶ್ನೆ ಮಾಡುತ್ತಾನೆ—ನೀನು ಹೇಳಿದ ಉಪಾಧ್ಯಾಯರೇ ಮುಂತಾದವರ ಸ್ವರೂಪವು ನನಗೆ ತಿಳಿಯಿತು. ಮಹಾಗುರುವಿನ ಲಕ್ಷಣವೇನೆಂಬುದು ತಿಳಿಯಲಿಲ್ಲ. ಅದನ್ನು ನನಗೆ ಹೇಳಬೇಕು. (ಎನ್ನಲು)

೮೬. ✓ಆಗ ಸುಮಂತು ಮುನಿವರ್ಯರು ಮಹಾಗುರುವಿನ ಲಕ್ಷಣವನ್ನು ಹೇಳುತ್ತಾರೆ—ಜಯಸಂಜ್ಞೆಯುಳ್ಳ ಗ್ರಂಥಗಳನ್ನು ಅಧ್ಯಯನ ಮಾಡುತ್ತಾ ಯಾವನು ಜೀವಿಸುವನೋ ಅಂಥವನು ಮಹಾಗುರುವೆನಿಸುವನು.

ವಿಷ್ಣುಧರ್ಮಾದಯೋ ಧರ್ಮಾಃ ಶಿವಧರ್ಮಾಶ್ಚ ಭಾರತ ।
ಕಾರ್ಷ್ಣಂ ವೇದಂ ಪಂಚಮಂ ತು ಯನ್ಮಹಾಭಾರತಂ ಸ್ಮೃತಂ ॥ ೮೭ ॥

ಶ್ರೌತಾ ಧರ್ಮಾಶ್ಚ ರಾಜೇಂದ್ರ ನಾರದೋಕ್ತಾ ಮಹೀಪತೇ ।
ಜಯೇತಿ ನಾಮ ಏತೇಷಾಂ ಪ್ರವದಂತಿ ಮನೀಷಿಣಃ ॥ ೮೮ ॥

ಏವಂ ವಿಪ್ರಕದಂಬಸ್ಯ ಧಾರಕಃ ಪ್ರವರಃಸ್ಮೃತಃ ।
ಯಸ್ತ್ವೇತಾನಿ ಸಮಸ್ತಾನಿ ಪುರಾಣಾನೀಹ ವಿಂದತಿ ॥ ೮೯ ॥

ಭಾರತಂ ಚ ಮಹಾಬಾಹೋ ನ ಸರ್ವಜ್ಞೋ ಮತೋ ನೃಣಾಂ ।
ತಸ್ಮಾತ್ಸ ಪೂಜ್ಯೋ ರಾಜೇಂದ್ರ ವರ್ಣೈರ್ವಿಪ್ರಾದಿಭಿಃ ಸದಾ ॥ ೯೦ ॥

ಕಿಂ ತ್ವಯಾ ನ ಶ್ರುತಂ ವಾಕ್ಯಂ ಯದಾಹ ಭಗವಾನ್ ವಿಭುಃ ।
ಅಲ್ಪಂ ವಾ ಬಹು ವಾ ಯಸ್ಯ ಶ್ರುತಸ್ಯೋಪಕರೋತಿ ಯಃ ॥ ೯೧ ॥

---

೮೭. ಹದಿನೆಂಟು ಪುರಾಣಗಳು, ರಾಮಾಯಣ, ವಿಷ್ಣುಧರ್ಮ, ಶಿವ ಧರ್ಮವೇ ಮುಂತಾದ ಧರ್ಮಶಾಸ್ತ್ರಗಳು, ಐದನೆಯ ವೇದವೆನಿಸಿ ಕೃಷ್ಣಪರಮಾತ್ಮನ ವಾಣಿಯಿಂದ ಕೂಡಿದ ಮಹಾಭಾರತ.

೮೮. ನಾರದರು ಹೇಳಿರುವ ಶ್ರೌತಧರ್ಮಗಳು, ಇಷ್ಟಕ್ಕೂ ಜಯ ಎಂಬ ಸಂಜ್ಞೆಯುಂಟು ಎಂದು ವಿದ್ವಾಂಸರು ಹೇಳುತ್ತಾರೆ,

೮೯. ಇವು ಬ್ರಾಹ್ಮಣತ್ವವನ್ನು ನಿಲ್ಲಿಸತಕ್ಕ (ಸ್ಥಿರವಾಗಿರಿಸುವ) ಶ್ರೇಷ್ಠವಾದ ಸಾಮಗ್ರಿಯೆಂದು ನಿಶ್ಚಿತವಾಗಿದೆ. ಇವೆಲ್ಲಕ್ಕೂ ಇಲ್ಲಿ ಪುರಾಣಗಳು ಎಂದು ವ್ಯವಹಾರವಿದೆ.

೯೦. ಈ ಎಲ್ಲ ಪುರಾಣಾದಿಗಳನ್ನೂ ಮಹಾಭಾರತವನ್ನೂ ತಿಳಿದಿರುವವನು ಮನುಷ್ಯರಲ್ಲಿ ಸರ್ವಜ್ಞನೆಂದು ಅಭಿಪ್ರಾಯವಿದೆ. ಆದ್ದರಿಂದ ಈ ಪ್ರಕಾರದ ಸರ್ವಜ್ಞನು ಬ್ರಾಹ್ಮಣಾದಿವರ್ಣಗಳಿಂದ ಸರ್ವದಾ ಪೂಜ್ಯನು.

೯೧. ಪರಮಾತ್ಮನಾದ ಶ್ರೀಕೃಷ್ಣನು ಗೀತೆಯಲ್ಲಿ ಹೇಳಿರುವುದನ್ನು ನೀನು ಕೇಳಿಲ್ಲವೆ ? ಯಾವನು ತಾನು ಶ್ರವಣಮಾಡಿದ ವಿಷಯಕ್ಕೆ ಅಲ್ಪವಾಗಿಯೋ ಹೇರಳವಾಗಿಯೋ ಉಪಕಾರಮಾಡುವಂಥವನನ್ನು ಆತನು ಮಾಡಿದ ಉಪಕಾರವಶದಿಂದ ಗುರುವೆಂದು ತಿಳಿಯಬೇಕು.

**ಬ್ರಾಹ್ಮಸ್ಯ ಜನ್ಮನಃ ಕರ್ತಾ ಸ್ವಧರ್ಮಸ್ಯ ಚ ಶಾಸಿತಾ ।**
**ಬಾಲೋಽಪಿ ವಿಪ್ರೋ ವೃದ್ಧಸ್ಯ ಪಿತಾ ಭವತಿ ಧರ್ಮತಃ ॥ ೯೨ ॥**

**ಅಧ್ಯಾಪಯಾಮಾಸ ಪಿತೄನ್ ಶಿಶುರಾಂಗಿರಸಃ ಕವಿಃ ।**
**ಪುತ್ರಕಾ ಇತಿ ಹೋವಾಚ ಜ್ಞಾನೇನ ಪರಿಗ್ರಹ್ಯ ತಾನ್ ॥ ೯೩ ॥**

**ತೇ ತಮರ್ಥಮಪೃಚ್ಛಂತ ದೇವಾನಾಗತಮನ್ಯವಃ ।**
**ದೇವಾಶ್ಚೈತಾನ್ಸಮೇತ್ಯೋಚುರ್ನ್ಯಾಯ್ಯಂ ವೈ ಶಿಶುರುಕ್ತವಾನ್ ॥ ೯೪ ॥**

**ಅಜ್ಞೋ ಭವತಿ ವೈ ಬಾಲಃ ಪಿತಾ ಭವತಿ ಮಂತ್ರದಃ ।**
**ಅಜ್ಞಂ ಹಿ ಬಾಲಮಿತ್ಯಾಹುಃ ಪಿತೇತ್ಯೇವ ತು ಮಂತ್ರದಂ ॥ ೯೫ ॥**

**ಪಿತಾಮಹೇತಿ ಜಯದಮಿತ್ಯೂಚುಸ್ತೇ ದಿವೌಕಸಃ ।**
**ಜಯೋ ಮಂತ್ರಾಸ್ತಥಾ ವೇದಾ ದೇಹಮೇಕಂ ತ್ರಿಧಾ ಕೃತಂ ॥ ೯೬ ॥**

---

೯೨. ಬ್ರಾಹ್ಮಣ ಜನ್ಮವನ್ನುಂಟುಮಾಡಿದವನೂ, ಮತ್ತು ಸ್ವಧರ್ಮವನ್ನು ರಕ್ಷಣೆಮಾಡುವ ಬ್ರಾಹ್ಮಣನೂ ವಯಸ್ಸಿನಲ್ಲಿ ಕಿರಿಯರಾದರೂ ಧರ್ಮಪ್ರಕಾರ ವೃದ್ಧರಿಗೂ ಸಹ ಅವನು ತಂದೆ ಎನಿಸುವನು.

೯೩. ಇದಕ್ಕೆ ನಿದರ್ಶನವಾಗಿ ವಿದ್ವಾಂಸನಾದ ಬೃಹಸ್ಪತ್ಯಾಚಾರ್ಯನು ಚಿಕ್ಕವನಾಗಿದ್ದೇ ತಮ್ಮ ಪಿತೃಗಳಿಗೆ ಅಧ್ಯಯನವನ್ನು ಮಾಡಿಸಿದನು. ಆ ಪಿತೃಗಳನ್ನು ತಾನು ಶಿಷ್ಯತ್ವೇನ ಪರಿಗ್ರಹಮಾಡಿ ಜ್ಞಾನಬೋಧನೆಗಾಗಿ “ ಪುತ್ರರೇ ” ಎಂದು ಕರೆದನು

೯೪. ಆಗ ಬೃಹಸ್ಪತ್ಯಾಚಾರ್ಯನ ತಂದೆಯವರು ಕೋಪಗೊಂಡು ಈ ವಿಚಾರವನ್ನು ಕುರಿತು ದೇವತೆಗಳನ್ನು ಪ್ರಶ್ನಿಸಿದರು. ಆಗ ದೇವತೆಗಳೆಲ್ಲಾ ಐಕಕಂಠ್ಯದಿಂದ “ ಆ ಮಗುವು ಹೇಳಿರುವ ಮಾತು ಯುಕ್ತವಾಗಿದೆ ” ಎಂದರು

೯೫-೯೬. ಲೋಕದಲ್ಲಿ ಬ್ರಹ್ಮಜ್ಞಾನ ರಹಿತನಾದವನು ಎಷ್ಟು ವಯಸ್ಸಾದವನಾದರೂ ಬಾಲಕನೆನಿಸುವನು. ಜಯಸಂಜ್ಞಾಕವಾದ ಗ್ರಂಥಗಳನ್ನು ಉಪದೇಶ ಮಾಡುವ ಮನುಷ್ಯನು ತಂದೆಯ ತಂದೆಯೆಂದು ದೇವತೆಗಳು ತಿಳಿದಿದಾರೆ. ಮನುಷ್ಯನ ಒಂದು ದೇಹವನ್ನು ಜಯ, ಮಂತ್ರ, ವೇದ ಎಂದು ಮೂರಾಗಿ ವಿಭಾಗಿಸಲಾಗಿದೆ.

ನ ಹಾಯನೈರ್ನ ಪಲಿತೈರ್ನ ಮಿತ್ರೇಣ ನ ಬಂಧುಭಿಃ ।
ಋಷಯಶ್ಚಕ್ರಿರೇ ಧರ್ಮಂ ಯೋಽನೂಚಾನಃ ಸ ನೋ ಮಹಾನ್ ॥ ೯೭ ॥

ಬ್ರಾಹ್ಮಣಂ ಕ್ಷತ್ರಿಯವಿಶಾಂ ಶೂದ್ರಾಣಾಂ ಚ ವಿಶಾಂಪತೇ ।
ಜ್ಯೇಷ್ಠಂ ವದಂತಿ ರಾಜೇಂದ್ರ ಸಂದೇಹಂ ಶೃಣು ವೈ ಯಥಾ ॥ ೯೮ ॥

ಜ್ಞಾನತೋ ವೀರ್ಯತೋ ರಾಜನ್ ಧನತೋ ಜನ್ಮತಸ್ತಥಾ ।
ಶೀಲವಸ್ತು ಪ್ರಧಾನಾ ಯೇ ತೇ ಪ್ರಧಾನಾ ಮತಾ ಮಮ ॥ ೯೯ ॥

ನ ತೇನ ಸ್ಥವಿರೋ ಭವತಿ ಯೇನಾಸ್ಯ ಪಲಿತಂ ಶಿರಃ ।
ಯೋ ವೈ ಯುವಾಪ್ಯಧೀಯಾನಃ ತಂ ದೇವಾ ಸ್ಥವಿರಂ ವಿದುಃ ॥ ೧೦೦ ॥

---

೯೭. ವಯಸ್ಸು ಹೆಚ್ಚಾದ ಮಾತ್ರದಿಂದಾಗಲೀ, ಕೂದಲು ನರೆಬಂದ ಮಾತ್ರಕ್ಕೆ ಆಗಲೀ, ಮಿತ್ರಸಂಪತ್ತಿ ಇದ್ದಮಾತ್ರದಿಂದಲಾಗಲೀ ಪೂಜ್ಯನಾಗುವನೆಂದು ಋಷಿಗಳು ಧರ್ಮನಿರ್ಣಯ ಮಾಡಲಿಲ್ಲ. ಯಾವನು ತಲೆತಲಾಂತರವಾಗಿ ಬಂದ ಗುರುಮನೆತನದವರಿಂದ ತಲೆತಲಾಂತರದಿಂದ ತನ್ನ ಮನೆತನದವರು ಮಾಡಿದಂತೆ ಯಾವನಿಂದ ಅಧ್ಯಯನ ಮಾಡಿರುತ್ತಾನೋ ಅವನೇ ನಮಗೆ ದೊಡ್ಡವನು.

೯೮. ಕ್ಷತ್ರಿಯ, ವೈಶ್ಯ, ಶೂದ್ರ ಇವರೆಲ್ಲರಿಗೂ ಬ್ರಾಹ್ಮಣನು ದೊಡ್ಡವನು ಎಂದು ಹೇಳುತ್ತಾರೆ. ಈ ವಿಚಾರದಲ್ಲಿ ಬರಬಹುದಾದ ಸಂದೇಹವೇನೆಂಬುದನ್ನು ಹೇಳುತ್ತೇನೆ ಕೇಳು.

೯೯. ತಿಳಿವಳಿಕೆಯಲ್ಲಿಯೂ, ದೇಹಶಕ್ತಿಯಲ್ಲಿಯೂ, ಧನಾಢ್ಯತೆಯಲ್ಲಿಯೂ, ಹುಟ್ಟಿನಲ್ಲಿಯೂ, ಶೀಲದಲ್ಲಿಯೂ, ಯಾರು ಹೆಚ್ಚಿನವರೋ ಅವರೇ ಪ್ರಧಾನರೆಂದು ನನ್ನ ಅಭಿಪ್ರಾಯ.

೧೦೦. ತಲೆಗೂದಲು ನರೆಬಂದ ಮಾತ್ರಕ್ಕೆ ವೃದ್ಧನೆನಿಸಲಾರನು. ಯಾವನು ವಯಸಿನ್ನಲ್ಲಿ ಕಿರಿಯವನಾದರೂ ಅಧ್ಯಯನ ಮಾಡಿಸಬಲ್ಲನೋ ಅವನೇ ವೃದ್ಧನು ಎಂಬದಾಗಿ ದೇವತೆಗಳು ಭಾವಿಸುತ್ತಾರೆ.

**ಯಥಾ ಕಾಷ್ಠಮಯೋ ಹಸ್ತೀ ಯಥಾ ಚರ್ಮಮಯೋ ಮೃಗಃ ।**
**ಯಶ್ಚ ವಿಪ್ರೋಽನಧೀಯಾನಸ್ತ್ರಯಸ್ತೇ ನಾಮ ಬಿಭ್ರತಿ ॥ ೧೦೧ ॥**

**ಯಥಾಯೋಷಾಽಫಲಾ ಸ್ತ್ರೀಷು ಯಥಾ ಗೌರ್ಗವಿ ಚಾಫಲಾ ।**
**ಯಥಾ ಚಾಜ್ಞೇಽಫಲಂ ದಾನಂ ಯಥಾ ವಿಪ್ರೋಽನೃಚೋಽಫಲಃ ॥ ೧೦೨ ॥**

**ವೈಶ್ವದೇವೇನ ಯೇ ಹೀನಾ ಆತಿಥ್ಯೇನ ವಿವರ್ಜಿತಾ ।**
**ಸರ್ವೇ ತು ವೃಷಲಾ ಜ್ಞೇಯಾಃ ಪ್ರಾಪ್ತವೇದಾ ಅಪಿ ದ್ವಿಜಾಃ ॥ ೧೦೩ ॥**

**ನಾನೃಗ್ಬ್ರಾಹ್ಮಣೋ ಭವತಿ ನವಣಿಙ್ನ ಕುಶೀಲವಃ ।**
**ನ ಶೂದ್ರಃ ಪ್ರೇಷಣಂ ಕುರ್ವನ್ ನ ಸ್ತೇನೋ ನ ಚಿಕಿತ್ಸಕಃ ॥ ೧೦೪ ॥**

**ಅವ್ರತಾಹ್ಯನಧೀಯಾನಾ ಯತ್ರ ಭೈಕ್ಷಚರಾ ದ್ವಿಜಾಃ ।**
**ತಂ ಗ್ರಾಮಂ ದಂಡಯೇದ್ರಾಜಾ ಚೋರಭಕ್ತಪ್ರದೋಹಿ ಸಃ ॥ ೧೦೫ ॥**

---

೧೦೧. ಮರದಿಂದ ಮಾಡಿದ ಆನೆಯು ಹೇಗೆ ನಾಮಮಾತ್ರದ ಆನೆಯೋ, ಚರ್ಮದಿಂದ ಮಾಡಿದ ಜಿಂಕೆಯು ನಾಮಮಾತ್ರದಿಂದ ಹೇಗೆ ಮೃಗವೋ, ಹಾಗೆ ಅಧ್ಯಯನಮಾಡದೆ ಇರುವ ಬ್ರಾಹ್ಮಣನು ಹೆಸರಿಗೆ ಮಾತ್ರ ಬ್ರಾಹ್ಮಣನೆನಿಸುವನು.

೧೦೨. ಸ್ತ್ರೀಯರಲ್ಲಿ ಮಕ್ಕಳಿಲ್ಲದ ಹೆಂಗಸು, ಹಸುಗಳಲ್ಲಿ ಗೊಡ್ಡಹಸು, ದಾನದಲ್ಲಿ ಅಜ್ಞನಿಗೆ ಮಾಡಿದದಾನ, ಇವು ಹೇಗೆ ನಿಷ್ಫಲವೋ ಹಾಗೆ ಅಧ್ಯಯನಮಾಡದ ಬ್ರಾಹ್ಮಣನೂ ನಿಷ್ಫಲನು.

೧೦೩. ವೈಶ್ವದೇವವನ್ನು ಆಚರಿಸದೇ ಅಥಿತಿಗಳನ್ನು ಸತ್ಕರಿಸದೇ ಇರುವವರು ವೇಧಾಧ್ಯಯನಮಾಡಿದ್ದರೂ ಅಂತಹ ಬ್ರಾಹ್ಮಣರು ವೃಷಲರು ಎನಿಸಿಕೊಳ್ಳುತ್ತಾರೆ.

೧೦೪. ವೇದಾಧ್ಯಯನ ಮಾಡದಿರತಕ್ಕವನು ಬ್ರಾಹ್ಮಣನೂ ಅಲ್ಲ, ವರ್ತಕನೂ ಅಲ್ಲ, ಗಾಯಕನೂ ಅಲ್ಲ, ಜಾತಿಯಲ್ಲಿ ಬ್ರಾಹ್ಮಣನಾಗಿ ಸೇವಾಕಾರ್ಯ ನಡೆಸಿದ ಇವನು ಸರಿಯಾದ ಶೂದ್ರನೂ ಅಲ್ಲ, ವೈದ್ಯನೂ ಅಲ್ಲ, ಕಳ್ಳನೂ ಅಲ್ಲ.

೧೦೫. ಯಾವ ಊರಿನ ವಿಪ್ರರು ವ್ರತ ನಿಯಮಾದಿಗಳನ್ನು ಮಾಡದ ಭಿಕ್ಷಾವೃತ್ತಿಪರರಾಗಿರುವರೋ ಆ ಗ್ರಾಮವು ಕಳ್ಳರಿಗೆ ಜೀವನಾಶ್ರಯವಾದ್ದರಿಂದ ಅಂತಹ ಗ್ರಾಮಕ್ಕೆ ರಾಜನು ದಂಡವನ್ನು ವಿಧಿಸಬೇಕು.

ಸಂತುಷ್ಟೋ ಯತ್ರ ವೈ ವಿಪ್ರಃ ಸಾಗ್ನಿಕಃ ಕುರುನಂದನ ।
ಯಾತಿ ಸಾಫಲ್ಯತಾಂ ವೇದೈರ್ದೇವೈರೇವಂ ಹಿ ಭಾಷಿತಂ ॥ ೧೦೬ ॥

ವೇದೈರುಕ್ತಂ ಯಥಾವೀರ ಸುರಜ್ಯೇಷ್ಠಮುಪೇತ್ಯ ವೈ ।
ವೇಪಂತೇ ಬ್ರಾಹ್ಮಣಾ ಭೂಮಾವಭ್ಯಸ್ಯಂತಿ ಹ್ಯನಗ್ನಿಕಾಃ ॥
ಕ್ಲಿಶ್ಯಂತೇ ತೇ ಕಿಮರ್ಥಂ ಹಿ ಮೂಢಾ ವೈ ಫಲಕಾಂಕ್ಷಯಾ ॥ ೧೦೭ ॥

ಅನುಷ್ಠಾನವಿಹೀನಾನಾಮುಸ್ಮಾನಭ್ಯಸತಾಂ ಭುವಿ ।
ಕ್ಲೇಶೋ ಹಿ ಕೇವಲಂ ದೇವ ನಾಸ್ಮದಭ್ಯಸನೇ ಫಲಂ ॥ ೧೦೮ ॥

ಅನುಷ್ಠಾನಂ ಪರಂ ದೇವಮುಸ್ಮತ್ಸ್ವಭ್ಯಸನಾತ್ ಸದಾ ।
ಇತ್ಯೇವಂ ರಾಜಶಾರ್ದೂಲ ವೇದಾ ಊಚುರ್ಹಿ ವೇಧಸಂ ॥
ತಸ್ಮಾಚ್ಚ ವೇದಾಭ್ಯಸನಾತ್ ಅನುಷ್ಠಾನಂ ಪರಂ ಮತಂ ॥ ೧೦೯ ॥

---

೧೦೬. ಅಯ್ಯಾ ಕುರುಕುಲ ಶ್ರೇಷ್ಠನೇ! ಕೇಳು, ಯಾವ ಪ್ರದೇಶದಲ್ಲಿ ಬ್ರಾಹ್ಮಣನು ಸಿಕ್ಕಿದಷ್ಟಕ್ಕೆ ತೃಪ್ತನಾಗಿರುತ್ತಾ ಔಪಾಸನ ವೈಶ್ವದೇವಾದಿ ಅಗ್ನಿಪರಿಚರ್ಯ ಮಾಡಿಕೊಂಡಿರುತ್ತಾನೆಯೋ ಅವನು ಜನ್ಮಸಾರ್ಥಕತೆ ಪಡೆಯುವನೆಂದು ವೇದಗಳು ಶ್ರುತಪಡಿಸುತ್ತವೆ.

೧೦೭. ಎಲೈ ವೀರನೇ! ವೇದಗಳು ಬ್ರಹ್ಮನಲ್ಲಿಗೆ ಹೋಗಿ ಅನಗ್ನಿಕರಾದ ಬ್ರಾಹ್ಮಣರು (ಅಗ್ನಿಕಾರ್ಯಮಾಡದ ಬ್ರಾಹ್ಮಣರು) ಭೂಮಿಯಲ್ಲಿ ವೇದಾಭ್ಯಾಸ ಮಾಡುತ್ತಾರೆಂದು ವೇದಾಭಿಮಾನಿಗಳು ನಡುಗುತ್ತಾರೆ ಅವರು ಫಲಾಪೇಕ್ಷೆಯಿಂದ ಮೂಢರಾಗಿ ಏಕೆ ಕ್ಲೇಶಪಡುತ್ತಾರೋ? ಅಗ್ನಿಕಾರ್ಯಮಾಡದೆ ನಮ್ಮನ್ನು ಅಭ್ಯಸಿಸುವವರಿಗೆ ಕ್ಲೇಶವೇ ಫಲ ಹೊರತು ಮತ್ತೆ ಯಾವ ಫಲವೂ ಇಲ್ಲ ಎಂದುವು.

೧೦೮. ಎಲೈ ಸ್ವಾಮಿಯೇ! ಸದಾ ನಮ್ಮನ್ನು (ವೇದವನ್ನು) ಅಭ್ಯಾಸ ಮಾಡುವುದಕ್ಕಿಂತ ಅನುಷ್ಠಾನಮಾಡುವುದು ಶ್ರೇಷ್ಠ. ಎಂಬದಾಗಿ ವೇದಗಳು ಬ್ರಹ್ಮನನ್ನು ಕುರಿತು ಹೇಳಿದುವು.

೧೦೯. ಆದುದರಿಂದ ವೇದಾಭ್ಯಾಸಕ್ಕಿಂತಲೂ ವೇದೋಕ್ತ ಕರ್ಮಾನುಷ್ಠಾನವು ಬಹು ಶ್ರೇಷ್ಠವೆಂದು ಅಭಿಪ್ರಾಯವು.

**ಚತ್ವಾರೋ ವಾ ತ್ರಯೋ ವಾಪಿ ಯದ್ಬ್ರೂಯುರ್ವೇದಪಾರಗಾಃ ।**
**ಸ ಧರ್ಮ ಇತಿ ವಿಜ್ಞೇಯೋ ನೇತರೇಷಾಂ ಸಹಸ್ರಶಃ ॥ ೧೧೦ ॥**

**ಯದ್ವದಂತಿ ತಮೋ ಮೂಢಾ ಮೂರ್ಖಾ ಧರ್ಮಮಜಾನತಃ ।**
**ತತ್ಪಾಪಂ ಶತಧಾ ಭೂತ್ವಾ ವಕ್ತ್ರ್ಯಾನೇವಾನು ಗಚ್ಛತಿ ॥ ೧೧೧ ॥**

**ಶೌಚಹೀನೇ ವ್ರತಭ್ರಷ್ಟೇ ವಿಪ್ರೇ ವೇದವಿವರ್ಜಿತೇ ।**
**ದೀಯಮಾನಂ ರುದತ್ಯನ್ನಂ ಕಿಂ ಮಯಾ ದುಷ್ಕೃತಂ ಕೃತಂ ॥ ೧೧೨ ॥**

**ಜಪೋಪಜೀವಿನೇ ದತ್ತಂ ಯದಾತ್ಮಾನಂ ಪ್ರಪಶ್ಯತಿ ।**
**ನೃತ್ಯತಿಸ್ಮ ತದಾ ರಾಜನ್ ಕರಾವುದ್ಧೃತ್ಯ ಭಾರತ ॥ ೧೧೩ ॥**

**ವಿದ್ಯಾತಪೋಭ್ಯಾಂ ಸಂಪನ್ನೇ ಬ್ರಾಹ್ಮಣೇ ಗೃಹಮಾಗತೇ ।**
**ಕ್ರೀಡಂತ್ಯೌಷಧಯಃ ಸರ್ವಾ ಯಾಸ್ಯಾಮಃ ಪರಮಾಂ ಗತಿಂ ॥ ೧೧೪ ॥**

---

೧೧೦. ನಾಲ್ಕುವೇದ ಅಥವಾ ಮೂರು ವೇದಗಳನ್ನು ಅಭ್ಯಾಸಿಸಬೇಕು ಎಂದು ವೇದಪಾರಂಗತರು ಏನು ಹೇಳುವರೋ ಅದನ್ನೇ ಧರ್ಮವೆಂದು ತಿಳಿಯ ಬೇಕು. ಇತರರು ಸಹಸ್ರಪ್ರಕಾರವಾಗಿ ಹೇಳಿದರೂ ಅಧು ಧರ್ಮವಲ್ಲ.

೧೧೧. ಮೂರ್ಖರೂ, ಧರ್ಮಾಧರ್ಮಗಳನ್ನು ತಿಳಿಯದವರೂ ಕೆಟ್ಟ ಮಾರ್ಗವನ್ನು ಹೇಳುತ್ತಾರೆ ಆದರಿಂದ ಉಂಟಾದ ಪಾಪವು ನೂರರಷ್ಟಾಗಿ ಹೇಳಿದವರನ್ನೇ ಹೊಂದಲನುಸರಿಸುವುದು.

೧೧೨. ಮಡಿ, ಮೈಲಿಗೆ ಇಲ್ಲದವನು, ವ್ರತಭ್ರಷ್ಟನಾದವನು, ವೇದಾಭ್ಯಾಸವಿಲ್ಲ ದವನು, ಇಂತಹ ಬ್ರಾಹ್ಮಣನಿಗೆ ಕೊಟ್ಟ ಅನ್ನವು "ನಾನು ಏನು ಪಾಪಮಾಡಿ ದ್ದೆನೋ" ಎಂದು ವ್ಯಸನಪಡುತ್ತದೆ.

೧೧೩. ಜಪಮಾಡುವವನಿಗೆ ಕೊಟ್ಟ ಅನ್ನವು ತನ್ನನ್ನು ನೋಡಿಕೊಂಡಾಗ ಸಂತೋಷದಿಂದ ಕೈಗಳನ್ನು ಎತ್ತಿಕೊಂಡು ಕುಣಿಯುವುದು.

೧೧೪. ವಿದ್ಯಾಸಂಪನ್ನನೂ, ತಪಸ್ಸಂಪನ್ನನೂ ಆದ ಬ್ರಾಹ್ಮಣನು ಮನೆಗೆ ಬರಲು ಓಷಧಿಗಳೆಲ್ಲವೂ ತಮಗೆ ಉತ್ತಮಗತಿ ಪ್ರಾಪ್ತಿಯಾಗುವುದೆಂದು ವಿನೋದ ದಿಂದ ಕುಣಿದಾಡಿಕೊಳ್ಳುತ್ತವೆ.

ಅವ್ರತಾನಾಮಮಂತ್ರಾಣಾಂ ಅಜಪಾನಾಂ ಚ ಭಾರತ ।
ಪ್ರತಿಗ್ರಹೋ ನ ದಾತವ್ಯೋ ನ ಶಿಲಾ ತಾರಯೇಚ್ಛಿಲಾಂ ॥ ೧೧೫ ॥

ಶ್ರೋತ್ರಿಯಾಯೈವ ದೇಯಾನಿ ಹವ್ಯಕವ್ಯಾನಿ ನಿತ್ಯಶಃ ।
ಅಶ್ರೋತ್ರಿಯಾಯ ದತ್ತಾನಿ ನ ಪಿತೄನ್ನಾಪಿ ದೇವತಾಃ ॥ ೧೧೬ ॥

ಯಸ್ಯ ಚೈವ ಗೃಹೇ ಮೂರ್ಖೋ ದೂರೇಚಾಪಿ ಬಹುಶ್ರುತಃ ।
ಬಹು ಶುತ್ರಾಯ ದಾತವ್ಯಂ ನಾಸ್ತಿ ಮೂರ್ಖವ್ಯತಿಕ್ರಮಃ ॥ ೧೧೭ ॥

ಬ್ರಾಹ್ಮಣಾತಿಕ್ರಮೋ ನಾಸ್ತಿ ಮೂರ್ಖೇ ಜಪವಿವರ್ಜಿತೇ ।
ಜ್ವಲಂತಮಗ್ನಿಮುತ್ಸೃಜ್ಯ ನ ಹಿ ಭಸ್ಮನಿ ಹೂಯತೆ ॥ ೧೧೮ ॥

---

೧೧೫. ವ್ರತ ಶೂನ್ಯರೂ, ಮಂತ್ರ ಶೂನ್ಯರೂ, ಜಪಶೂನ್ಯರೂ, ಆದವರಿಗೆ ದಾನವನ್ನು ಕೊಡಬಾರದು. ಒಂದು ಹಗುರವಾದ ಬೆಂಡು ಭಾರವಾದ ಕಲ್ಲನ್ನು ಧರಿಸುವುದು. ಆದರೆ ಒಂದುಕಲ್ಲು ಮತ್ತೊಂದು ಕಲ್ಲನ್ನು ದಾಟಿಸಲಾರದು ಹಾಗೆಯೇ ತಾವೇ ಉದ್ಧಾರವಾಗದ ಅವರು ದಾನವನ್ನು ಪ್ರತಿಗ್ರಹಿಸಿದರೂ ಫಲ ಕೊಡಲಾರದು.

೧೧೬. ಯಾವಾಗಲೂ ಶ್ರೋತ್ರಿಯನಾದವನಿಗೇ ಹವ್ಯಕವ್ಯಾದಿಗಳನ್ನು ಕೊಡಬೇಕು. ಶ್ರೋತ್ರಿಯನಲ್ಲದವನಿಗೆ ಕೊಟ್ಟವುಗಳು ಪಿತೃಗಳಿಗಾಗಲಿ ದೇವತೆಗಳಿಗಾಗಲಿ ತಲಪುವುದಿಲ್ಲ.

೧೧೭. ಮೂರ್ಖನು ಮನೆಯಲ್ಲಿಯೇ ಇದ್ದು ಬಹುಶ್ರುತನು ದೂರದಲ್ಲಿದ್ದ ಪಕ್ಷದಲ್ಲಿ ಆಗ ದಾತೃವು ತಾನು ಕೊಡುವ ದಾನವನ್ನು ದೂರದಲ್ಲಿರುವ ಬಹುಶ್ರುತನನ್ನು ಕರದೇ ಕೊಡಬೇಕು. ಹೀಗೆಮಾಡಿದರೆ ಅವನು ಮೂರ್ಖವ್ಯತಿಕ್ರಮಮಾಡಿದ ದೋಷಿಯಾಗನು.

೧೧೮. ಮೂರ್ಖನೂ, ಜಪವರ್ಜಿತನೂ ಆದ ಬ್ರಾಹ್ಮಣನು ಸಮೀಪದಲ್ಲಿದ್ದು ಅವನನ್ನು ಅತಿಕ್ರಮಿಸಿದರೂ ದೋಷವಿಲ್ಲ. ಉರಿಯುವ ಬೆಂಕಿಯನ್ನು ಬಿಟ್ಟು ಬೂದಿಯಲ್ಲಿ ಯಾರೂ ಹೋಮಮಾಡುವುದಿಲ್ಲವಷ್ಟೆ.

ನ ಚೈತದೇವ ಮನ್ಯಂತೇ ಪಿತರೋ ದೇವತಾಸ್ತಥಾ ।
ಸಗುಣಂ ನಿರ್ಗುಣಂ ವಾಪಿ ಬ್ರಾಹ್ಮಣಂ ದೈವತಂ ಪರಂ ॥ ೧೧೯ ॥

ನಾತಿ ಕ್ರಮೇದ್ಗೃಹಾಸೀನಂ ಬ್ರಾಹ್ಮಣಂ ವಿಪ್ರಕರ್ಮಣಿ ।
ಅತಿಕ್ರಮಾನ್ಮಹಾಬಾಹೋ ರೌರವಂ ಯಾತಿ ಭಾರತ ॥ ೧೨೦ ॥

ಗಾಯತ್ರೀಮಾತ್ರ ಸಾರೋಽಪಿ ಬ್ರಾಹ್ಮಣಃ ಪೂಜ್ಯತಾಂ ಗತಃ ।
ಗೃಹಾಸನ್ನೋ ವಿಶೇಷೇಣ ನ ಭವೇತ್ಪತಿತಸ್ತು ಸಃ ॥ ೧೨೧ ॥

ಧಾನ್ಯಶೂನ್ಯೋ ಯಥಾ ಗ್ರಾಮೋ ಯಥಾ ಕೂಪಶ್ಚ ನಿರ್ಜಲಃ ।
ಬ್ರಾಹ್ಮಣಶ್ಚಾನಧೀಯಾನಸ್ತ್ರಯಸ್ತೇ ನಾಮಧಾರಕಾಃ ॥ ೧೨೨ ॥

ಯಸ್ತ್ವೇಕಪಂಕ್ತ್ಯಾಂ ವಿಷಮಂ ದದಾತಿ ।
ಸ್ನೇಹಾದ್ಭಯಾದ್ವಾ ಯದಿ ವಾರ್ಥ ಹೇತೋಃ ॥

---

೧೧೯. ದೇವತೆಗಳೂ ಹಾಗೂ ಪಿತೃಗಳೂ ಇದನ್ನೇ ಮನಸ್ಕರಿಸುವುದಿಲ್ಲ. ನಿರ್ಗುಣನಾಗಲೀ ಸಗುಣನಾಗಲೀ ಬ್ರಾಹ್ಮಣನು ಪರದೈವವು.

೧೨೦. ಬ್ರಾಹ್ಮಣ ಕರ್ಮದಲ್ಲಿ ನಿರತನಾಗಿ ಮನೆಯಲ್ಲೇ ಕುಳಿತಿರುವ ಬ್ರಾಹ್ಮಣನನ್ನು ಎಂದೂ ಅತಿಕ್ರಮಿಸಬಾರದು. ಹಾಗೆ ಅತಿಕ್ರಮಿಸಿದವನು ರೌರವ ನರಕಕ್ಕೆ ಬೀಳುತ್ತಾನೆ.

೧೨೧. ಬ್ರಾಹ್ಮಣನಿಗೆ ಗಾಯತ್ರೀ ಮಾತ್ರ ಜೀವಾಳವಾಗಿದ್ದರೂ ಅವನು ಪೂಜ್ಯತ್ವವನ್ನು ಹೊಂದುವನು. ಅಂಥವನು ಗೃಹಸಮೀಪದಲ್ಲಿದ್ದರೆ ವಿಶೇಷ ಪೂಜ್ಯನು. ಆದರೆ ಅವನು ಪತಿತನಾಗಿರಬಾರದು.

೧೨೨. ಧಾನ್ಯವಿಲ್ಲದ ಗ್ರಾಮವು ಹೇಗೋ, ನೀರಿಲ್ಲದ ಬಾವಿಯು ಹೇಗೋ, ವೇದಾಧ್ಯಯನವಿಲ್ಲದ ಬ್ರಾಹ್ಮಣನೂ ಹಾಗೇ. ಅವು ಮೂರೂ ಹೆಸರಿಗೆ ಮಾತ್ರಕ್ಕೆ ಗ್ರಾಮ, ಹೆಸರು ಮಾತ್ರಕ್ಕೆ ಬ್ರಾಹ್ಮಣ, ಹೆಸರು ಮಾತ್ರಕ್ಕೆ ಬಾವಿ, ಎನಿಸಿಕೊಳ್ಳುವುವು.

೧೨೩. ಪ್ರೀತಿಯಿಂದಲೋ ಭಯದಿಂದಲೋ, ದ್ರವ್ಯಾಶೆಯಿಂದಲೋ ಒಂದೇ ಪಂಕ್ತಿಯಲ್ಲಿ ಕುಳಿತಿರುವವರಿಗೆ ಒಬ್ಬೊಬ್ಬರಿಗೆ ಒಂದೊಂದು ರೀತಿಯಿಂದ ವ್ಯತ್ಯಾಸ

ವೇದೇಷು ದೃಷ್ಟಮ್ಋಷಿಭಿಶ್ಚ ಗೀತಂ ।
ತಾಂ ಬ್ರಹ್ಮಹತ್ಯಾಂ ಮುನಯೋ ವದಂತಿ ॥ ೧೨೩ ॥

ಅಹಿಂಸಯೈವ ಭೂತಾನಾಂ ಕಾರ್ಯಂ ಶ್ರೇಯೋನುಶಾಸನಂ ।
ವಾಕ್ಚೈವ ಮಧುರಾ ಶ್ಲಕ್ಷ್ಣಾ ಪ್ರಯೋಜ್ಯಾ ಧರ್ಮಮೀಪ್ಸತಾ ॥ ೧೨೪ ॥

ಯಸ್ಯ ವಾಙ್ಮನಸೀ ಶುದ್ಧೇ ಸತ್ಯ ಗುಪ್ತೇಚ ಭಾರತ ।
ಸ ವೈ ಸರ್ವಮವಾಪ್ನೋತಿ ವೇದಾಂತೋಪಗತಂ ಫಲಂ ॥ ೧೨೫ ॥

ನಾರುಂತುದಸ್ಯಾದಾರ್ತೋ ಪಿ ನ ಪರದ್ರೋಹಕರ್ಮಧೀಃ ।
ಯಯಾಸ್ಯೋ ದ್ವಿಜತೇ ಲೋಕೋ ನ ತಾಂ ವಾಚಮುದೀರಯೇತ್ ॥ ೧೨೬ ॥

ಯಥಾ ಮನೀಷೀ ಕುರುತೇ ಶುಭಂ ವಾಚೋಚ್ಯಮಾನಯಾ ।
ಶ್ರೂಯತಾಂ ಕುರುಶಾರ್ದೂಲ ಸದಾ ಚಾಪಿ ತಥೋಚ್ಯತಾಂ ॥ ೧೨೭ ॥

---

ಮಾಡಿ ದಾನಮಾಡುವುದನ್ನು ಬ್ರಹ್ಮಹತ್ಯಾ ಸಮವೆಂದು ಮುನಿಗಳು ಹೇಳುತ್ತಾರೆ. ವೇದಗಳಲ್ಲೂ ಹೇಳಿದೆ.

೧೨೪. ಪ್ರಾಣಿಗಳಿಗೆ ಹಿಂಸೆಯಿಲ್ಲದಂತೆ ಶ್ರೇಯಸ್ಸಿನ ಮಾರ್ಗವನ್ನು ಉಪದೇಶಮಾಡಬೇಕು. ಧರ್ಮ ಲಭಿಸಬೇಕೆನ್ನುವನು ಇಂಪಾಗಿಯೂ ಮೃದುವಾಗಿಯೂ ಇರುವಮಾತನ್ನು ಹೇಳಬೇಕು.

೧೨೫. ಯಾವನ ವಾಙ್ಮನಸ್ಸುಗಳು ಶುದ್ಧವಾಗಿಯೂ ಸತ್ಯರಕ್ಷಿತಗಳಾಗಿಯೂ ಇರುವುವೋ ಅವನು ವೇದಾಂತಜ್ಞಾನದಿಂದ ಪ್ರಾಪ್ತವಾಗುವ ಎಲ್ಲಾ ಫಲಗಳನ್ನೂ ಪಡೆಯುವನು.

೧೨೬. ರೋಗಪೀಡಿತನಾಗಿದ್ದರೂ ಮರ್ಮಭೇದಕನಾಗಬಾರದು. ಇತರರಿಗೆ ದ್ರೋಹ ಬುದ್ಧಿಯುಳ್ಳವನಾಗಬಾರದು. ಯಾವ ಮಾತಿನಿಂದ ಲೋಕದ ಜನರಿಗೆ ಉದ್ವೇಗ (ಗಾಭರಿ) ವುಂಟಾಗುವುದೋ ಅಂತಹ ಮಾತುಗಳನ್ನು ಆಡಬಾರದು.

೧೨೭. ಎಲೈ ಕುರುಶ್ರೇಷ್ಠನೇ ! ವಿದ್ವಾಂಸನು ತಾನು ಆಡುವ ಮಾತಿನಿಂದ ಇತರರಿಗೆ ಹೇಗೆ ಒಳ್ಳೆಯದನ್ನು ಮಾಡಬಹುದೋ ಹೇಗೆ ಮಾತಾಡಿದರೆ ಇತರರಿಗೆ ಒಳ್ಳೆಯದಾಗುತ್ತದೋ ಹಾಗೆ ಯಾವಾಗಲೂ ಮಾಡಬೇಕು.

**ನ ತಥಾ ಶಶೀ ನ ಸಲಿಲಂ ನ ಚಂದನರಸೋ ನ ಶೀತಲಚ್ಛಾಯಾ ।**
**ಪ್ರಹ್ಲಾದಯತಿ ಚ ಪುರುಷಂ ಯಥಾ ಮಧುರಭಾಷಿಣೀ ವಾಣೀ ॥ ೧೨೮ ॥**

**ಅರ್ಹಣಾತ್ ಬ್ರಾಹ್ಮಣೋ ನಿತ್ಯಮುದ್ವಿಜೇತ ವಿಷಾದಿವ ।**
**ಅಮೃತಸ್ಯೇವ ಚಾಕಾಂಕ್ಷೇದಪಮಾನಸ್ಯ ಸರ್ವದಾ ॥ ೧೨೯ ॥**

**ಸುಖಂ ಹ್ಯವಮತಶ್ಶೇತೇ ಸುಖಂ ಚ ಪ್ರತಿಬುಧ್ಯತೇ ।**
**ಸುಖಂ ಚರತಿ ಲೋಕೇಽಸ್ಮಿನ್ನವಮಂತಾ ವಿನಶ್ಯತಿ ॥ ೧೩೦ ॥**

**ಅನೇನ ವಿಧಿನಾ ರಾಜನ್ ಸಂಸ್ಕೃತಾತ್ಮಾ ದ್ವಿಜಃ ಶನೈಃ ।**
**ಗುರೌ ವಸನ್ಸಂಚಿನುಯಾದ್ಬ್ರಹ್ಮಾಧಿಗಮಿದಂ ತಪಃ ॥ ೧೩೧ ॥**

---

೧೨೮. ಮಧುರವಾದ ವಾಣಿಯು ಮನುಷ್ಯನಿಗೆ ಎಷ್ಟು ಸಂತೋಷಪಡಿಸುವುದೋ ಅಷ್ಟು ಸಂತೋಷವು ಚಂದ್ರನ ಬೆಳದಿಂಗಳ ವಿಹಾರದಿಂದಲೂ ಇಲ್ಲ ತಣ್ಣಗಿರುವ ನೀರಿನಲ್ಲಿ ಸ್ನಾನಮಾಡುವುದರಿಂದಲೂ ಇಲ್ಲ. ಶೀತಲವಾದ ಚಂದನ ಲೇಪನದಿಂದಲೂ ಸಹ ಆಗುವುದಿಲ್ಲ.

೧೨೯. ಎಲ್ಲರೂ ವಿಷಕ್ಕೆ ಯಾವಾಗಲೂ ಹೆದರುವಂತೆ ಬ್ರಾಹ್ಮಣನು ತನಗೆ ಆಗುವ ಪೂಜೆಗೆ ಹೆದರಬೇಕು. ಯಾವಾಗಲೂ ಅಮೃತಕ್ಕೆ ಬಯಸುವಂತೆ ಅಪಮಾನಕ್ಕೆ ಬಯಸಬೇಕು. ಎಂದರೆ ಅಪಮಾನದಲ್ಲಿ ತನ್ನ ದೋಷೋದ್ಘಾಟನೆಯಾಗುವುದರಿಂದ ಅದನ್ನು ತಿದ್ದಿಕೊಳ್ಳಲು ಅವಕಾಶವಾಗುವುದೆಂಬ ಭಾವನೆಯಿಂದ ಅಪಮಾನವನ್ನಾದರೂ ಆಶಿಸಬೇಕಾದ್ದೇ ಆಗಿದೆಯೆಂಬ ಭಾವವು.

೧೩೦. ಅವಮಾನ ಹೊಂದಿದವನು ಸುಖವಾಗಿ ನಿದ್ರಿಸುತ್ತಾನೆ. ಸುಖವಾಗಿ ಎಚ್ಚರಗೊಳ್ಳುತ್ತಾನೆ. ಲೋಕದಲ್ಲಿ ಸುಖವಾಗಿ ತಿರುಗಾಡುತ್ತಾನೆ. ಅವಮಾನ ಮಾಡಿದಾತನು ತಾನೇ ನಾಶವಾಗುತ್ತಾನೆ.

೧೩೧. ಎಲೈ ರಾಜನೇ! ಬ್ರಾಹ್ಮಣನು ಈ ವಿಧಾನದಿಂದ ದಿನಕ್ರಮದಲ್ಲಿ ಸಂಸ್ಕಾರಹೊಂದಿ ಗುರುಸಮೀಪದಲ್ಲಿ ವಾಸಿಸುತ್ತಾ ಪರಬ್ರಹ್ಮವನ್ನು ಹೊಂದಲು ಕಾರಣವಾದ ಈ ತಪಸ್ಸನ್ನು ಸಂಪಾದನೆಮಾಡಬೇಕು.

ತಪೋ ವಿಶೇಷೈರ್ವಿವಿಧೈರ್ವ್ರತೈಶ್ಚ ವಿವಿಧೋದಿತೈಃ ।
ವೇದಃ ಕೃತ್ಸ್ನೋಽಧಿಗಂತವ್ಯಃ ಸರಹಸ್ಯೋ ದ್ವಿಜನ್ಮನಾ ॥ ೧೩೨ ॥

ವೇದಮೇವಾಭ್ಯಸೇನ್ನಿತ್ಯಂ ತಪಸ್ತಪ್ಸ್ಯಂದ್ವಿಜೋತ್ತಮಃ ।
ವೇದಾಭ್ಯಾಸೋ ಹಿ ವಿಪ್ರಸ್ಯ ತಪಃ ಪರಮಿಹೋಚ್ಯತೆ ॥ ೧೩೩ ॥

ಆಹೈವ ಸನಖಾಗ್ರೇಭ್ಯಃ ಪರಮಂ ತಪ್ಯತೇ ತಪಃ ।
ಯಃ ಸುಪ್ತೋಽಪಿ ದ್ವಿಜೋಽಧೀತೇ ಸ್ವಾಧ್ಯಾಯಂ ಶಕ್ತಿತೋಽನ್ವಹಂ ॥ ೧೩೪ ॥

ಯೋಽನಧೀತ್ಯ ದ್ವಿಜೋ ವೇದಮನ್ಯತ್ರ ಕುರುತೇ ಶ್ರಮಂ ।
ಸಜೀವನ್ನೇವ ಶೂದ್ರತ್ವಮಾಶು ಗಚ್ಛತಿ ಸಾನ್ವಯಃ ॥ ೧೩೫ ॥

ನ ಯಸ್ಯ ವೇದೋ ನ ಜಪೋ ನ ವಿದ್ಯಾಶ್ಚ ವಿಶಾಂಪತೇ ।
ಸ ಶೂದ್ರ ಏವ ಮಂತವ್ಯ ಇತ್ಯಾಹ ಭಗವಾನ್ ವಿಭುಃ ॥ ೧೩೬ ॥

---

೧೩೨. ಬ್ರಾಹ್ಮಣನು ಬಗೆಬಗೆಯಾದ ತಪಃಪ್ರಭೆಗಳಿಂದಲೂ ನಾನಾಬಗೆಯಾಗಿ ಹೇಳಿರುವ ವ್ರತನಿಯಮಾದಿಗಳಿಂದಲೂ ರಹಸ್ಯಸಹಿತವಾದ ವೇದವನ್ನು ಸಮಗ್ರವಾಗಿ ಸಂಪಾದಿಸಬೇಕು.

೧೩೩. ಬ್ರಾಹ್ಮಣ ಶ್ರೇಷ್ಠನು ಯಾವಾಗಲೂ ವೇದಾಭ್ಯಾಸವೆಂಬ ತಪಸ್ಸಿನಲ್ಲಿಯೇ ನಿರತನಾಗಿರಬೇಕು. ವೇದಾಭ್ಯಾಸವೇ ಬ್ರಾಹ್ಮಣನಿಗೆ ಉತ್ತಮ ತಪಸ್ಸು ಎಂದು ಶಾಸ್ತ್ರದಲ್ಲಿ ಹೇಳಿದೆ.

೧೩೪. ಯಾವನು ಏಳಲಾರದೇ ಮಲಗಿದ್ದರೂ ಪ್ರತಿದಿನವೂ ಶಕ್ತ್ಯನುಸಾರ ವೇದವನ್ನು ಅಧ್ಯಯನಮಾಡುತ್ತಾನೋ ಅವನು ಉಗುರಿನ ತುದಿಯಲ್ಲಿ ನಿಂತು ತಪಸ್ಸುಮಾಡುವ ಘೋರ ತಪಸ್ವಿಗೆ ಸದೃಶನು ಎಂದು ತಿಳಿದವನು (ಜ್ಞಾನಿಯು) ಹೇಳಿದ್ದಾನೆ.

೧೩೫. . ಯಾವ ಬ್ರಾಹ್ಮಣನು ವೇದಾಭ್ಯಾಸ ಮಾಡದೆ ಇತರ ವಿಷಯಗಳ ಅಭ್ಯಾಸಕ್ಕಾಗಿ ಆಯಾಸಮಾಡಿಕೊಳ್ಳುತ್ತಾನೋ ಅವನು ಬದುಕಿರುವಾಗಲೇ ಅವನ ವಂಶದವರಿಗೆಲ್ಲಾ ಶೂದ್ರತ್ವ ಪ್ರಾಪ್ತಿಯಾಗುತ್ತದೆ.

೧೩೬. ಅಯ್ಯಾ ರಾಜನೇ! ಯಾವಾತನಿಗೆ ವೇದ, ಜಪ, ವಿದ್ಯೆಗಳು ಇವುಗಳ ಅಭ್ಯಾಸವಿರುವುದಿಲ್ಲವೋ ಅವನು ಸಾಕ್ಷಾತ್ ಶೂದ್ರನೇ ಎಂದು ಭಾವಿಸಬೇಕು ಎಂಬದಾಗಿ ಭಗವಂತನಾದ ಸ್ವಾಮಿಯು ಹೇಳಿದ್ದಾನೆ.

ಮಾತುರಗ್ರೇ ಚ ಜನನಂ ದ್ವಿತೀಯೋ ಮೌಂಜಿಬಂಧನಂ ।
ತೃತೀಯೋ ಯಜ್ಞದೀಕ್ಷಾಯಾಂ ದ್ವಿಜಸ್ಯ ವಿಧಿರೀರಿತಃ ॥ ೧೩೭ ॥

ತತ್ರ ಯದ್ಬ್ರಹ್ಮ ಜನ್ಮಾಸ್ಯ ಮೌಂಜೀ ಬಂಧನಚಿಹ್ನಿತಂ ।
ತತ್ರಾಸ್ಯ ಮಾತಾ ಸಾವಿತ್ರೀ ಪಿತಾತ್ವಾಚಾರ್ಯ ಉಚ್ಯತೇ ॥ ೧೩೮ ॥

ವೇದಪ್ರದಾನಾತ್ತ್ವಾಚಾರ್ಯಂ ಪಿತರಂ ಮನುರಬ್ರವೀತ್ ।
ನಹ್ಯಸ್ಯ ವಿದ್ಯತೇ ಕರ್ಮ ಕಿಂಚಿದಾಮೌರ್ವಿಬಂಧನಾತ್ ॥ ೧೩೯ ॥

ನಾಭಿವ್ಯಾಹಾರಯೇದ್ಬ್ರಹ್ಮಾ ಸ್ವಧಾನಿನಯನಾದೃತೇ ।
ಶೂದ್ರೇಣ ತು ಸಮಂ ತಾವತ್ ಯಾವದ್ವೇದೇ ನ ಜಾಯತೇ ॥ ೧೪೦ ॥

ಕೃತೋಪನಯನಸ್ಯಾಸ್ಯ ವ್ರತಾದೇಶನಮಿಷ್ಯತೇ ।
ಬ್ರಹ್ಮಣೋ ಗ್ರಹಣಂ ಚೈವ ಕ್ರಮೇಣ ವಿಧಿಪೂರ್ವಕಂ ॥ ೧೪೧ ॥

---

೧೩೭. ತಾಯಿಯ ಗರ್ಭದಿಂದ ಹುಟ್ಟುವುದು ಮೊದಲನೆಯ ಜನನ. ಮೌಂಜೀಬಂಧನ ಪೂರ್ವಕವಾಗಿ ಉಪನಯನ ಮಾಡಿಕೊಳ್ಳುವುದು ಎರಡನೆಯ ಜನನ, ದೀಕ್ಷೆಯನ್ನು ವಹಿಸಿ ಯಜ್ಞಮಾಡುವುದು ಮೂರನೆಯಜನ್ಮ, ಹೀಗೆಂದು ಶಾಸ್ತ್ರದಲ್ಲಿ ಹೇಳಿದೆ.

೧೩೮. ಮೌಂಜೀ ಬಂಧವೆಂಬ ಗುರುತುಳ್ಳ ಯಾವ ಬ್ರಾಹ್ಮಣ ಜನ್ಮ ವುಂಟೋ ಆ ಜನ್ಮದಲ್ಲಿ ಸಾವಿತ್ರಿಯು ಇವನ ತಾಯಿ, ಆಚಾರ್ಯನೇ ತಂದೆ, ವೇದೋಪ ದೇಶ ಮಾಡುವುದರಿಂದ ತಂದೆಯನ್ನೇ ಆಚಾರ್ಯನೆಂದು ಮನುವು ಹೇಳಿದನು.

೧೩೯. ಮೌಂಜೀ ಬಂಧನವಾಗುವ ಪರ್ಯಂತವಾಗಿ ಇವನಿಗೆ ಯಾವ ಕರ್ಮ ವನ್ನು ಮಾಡುವ ಅಧಿಕಾರವೂ ಇರುವುದಿಲ್ಲ.

೧೪೦. ಪಿತೃಕರ್ಮಮಾಡುವಾಗ ಸ್ವಧಾಸತರ್ಪಣಕಾಲವಲ್ಲದೇ ಉಳಿದ ಕಾಲದಲ್ಲಿ ಆ ಮಂತ್ರೋಚ್ಚಾರಣೆ ಮಾಡಬಾರದು. ಹಾಗೆ ಪಿತೃತರ್ಪಣಾದಿ ಕಾಲದಲ್ಲಿ ಉಚ್ಚರಿಸುವ ಮಂತ್ರವನ್ನು ಮಿಕ್ಕಕಾಲದಲ್ಲಿ ಉಚ್ಚರಿಸಿದ್ದೇ ಆದರೆ ಅವನನ್ನು ಶೂದ್ರನೆಂದು ಭಾವಿಸಬೇಕು.

೧೪೧. ವೇದಾಧ್ಯಯನ ಮಾಡುವಾಗ ಮಧ್ಯೆ ಶೂದ್ರನೊಡನೆ ಸಂಭಾಷಿಸ ಬಾರದು, ಇವನಿಗೆ ಉಪನಯನವಾದಮೇಲೆ ಮಹಾನಾಮ್ನ್ಯಾದಿ ವೇದವ್ರತಗಳ ಉಪದೇಶವು ಆಗಬೇಕು.

ಯತ್ಸೂತ್ರಂ ಚಾ ಪಿ ಯಚ್ಚರ್ಮ ಯಾಯಾ ಚಾಸ್ಯ ಚ ಮೇಖಲಾ ।
ವಸನಂ ಚಾಪಿ ಯೋ ದಂಡಃ ತದ್ವೈ ತಸ್ಯ ವ್ರತೇಷ್ವಪಿ ॥ ೧೪೨ ॥

ಸೇವೇತೇಮಾಂಸ್ತು ನಿಯಮಾನ್ ಬ್ರಹ್ಮಚಾರೀ ಗುರೌ ವಸನ್ ।
ಸಂನಿಯಮ್ಯೇಂದ್ರಿಯಗ್ರಾಮಂ ತಪೋವೃದ್ಧ್ಯರ್ಥಮಾತ್ಮನಃ ॥ ೧೪೩ ॥

ವೃದಾಂರಕರ್ಷಿಪಿತ್ರ್ಯಾಣಾಂ ಕುರ್ಯಾತ್ತರ್ಪಣಮೇವ ಹಿ ।
ನರಾಣಾಂ ಚ ಮಹಾಬಾಹೋ ನಿತ್ಯಂ ಸ್ನಾತ್ವಾ ಪ್ರಯತ್ನತಃ ॥ ೧೪೪ ॥

ಪುಷ್ಪಂ ತೋಯಂ ಫಲಂ ಚಾಪಿ ಸಮಿಧೋಧನಮೇವ ಚ ।
ನಾನಾವಿಧಾನಿ ಕಾಷ್ಠಾನಿ ಮೃತ್ತಿಕಾಂ ಚ ತಥಾ ಕುಶಾನ್ ॥ ೧೪೫ ॥

ವರ್ಜಯೇನ್ಮಧು ಮಾಂಸಂ ಚ ಗಂಧಮಾಲ್ಯರಥಾನ್ ಸ್ತ್ರಿಯಃ ।
ಶುಕ್ತಾನಿ ಚೈವ ಸರ್ವಾಣಿ ಪ್ರಾಣಿನಾಂ ಚೈವ ಹಿಂಸನಂ ॥ ೧೪೬ ॥

---

೧೪೨. ಶಾಸ್ತ್ರವಿಧಿಗನುಸಾರವಾಗಿ ಉಪನಯನ (ಬ್ರಹ್ಮೋಪದೇಶ) ಮಾಡುವಾಗ ಯಾವ ಸೂತ್ರವನ್ನು ಅನುಸರಿಸಬೇಕೋ, ಯಾವ ಕರ್ಮಮಾಡಬೇಕೋ, ಯಾವ ಮೇಖಲೆಯನ್ನು ಧರಿಸಬೇಕೋ, ಯಾವ ವಸ್ತ್ರವನ್ನು ಹೊದಿಯಬೇಕೋ, ಯಾವ ದಂಡವನ್ನು ಧರಿಸಬೇಕೊ ಅವುಗಳೇ ವೇದವ್ರತಗಳಲ್ಲಿಯೂ ಕೂಡ ಆಗಬೇಕೆಂದು ವಿಧಿಯಿದೆ.

೧೪೩. ಬ್ರಹ್ಮಚಾರಿಯು ಗುರುಕುಲದಲ್ಲಿ ವಾಸಿಸುತ್ತಾ ಇಂದ್ರಿಯಗಳನ್ನು ನಿಗ್ರಹಿಸಿ ತನ್ನ ತಪೋವೃದ್ಧಿಗಾಗಿ ಈ ನಿಯಮಗಳನ್ನು ಅನುಸರಿಸಬೇಕು.

೧೪೪. ಎಲೈ ಮಹಾರಾಜನೇ! ನಿಯಮಿಷ್ಠನಾದವನು ನಿತ್ಯವೂ ಸ್ನಾನ ಮಾಡಿ ನಿತ್ಯಕರ್ಮಾಚರಣಮಾಡಿ, ದೇವಯಜ್ಞ, ಋಷಿಯಜ್ಞ, ಪಿತೃಯಜ್ಞ, ಮನುಷ್ಯಯಜ್ಞ ಇವುಗಳನ್ನು ಆಚರಿಸಿ ತೃಪ್ತಿಪಡಿಸಬೇಕು.

೧೪೫. ಅಲ್ಲದೆ ನಾನಾಪುಷ್ಪಗಳನ್ನೂ, ಜಲಗಳನ್ನೂ, ಫಲವನ್ನೂ, ಬಗೆಬಗೆಯ ಸಮಿತ್ತುಗಳನ್ನೂ, ತೀರ್ಥಮೃತ್ತಿಕೆ, ದರ್ಭೆಗಳು, ಧನ ಇವನ್ನೂ ಸಂಗ್ರಹಿಸಬೇಕು.

೧೪೬. ಶಿಷ್ಯನಾದವನು ವೇದಾಧ್ಯಯನವು ಪೂರೈಸುವವರೆಗೂ ಮದ್ಯ ಮಾಂಸಗಳನ್ನು ಸೇವನೆಮಾಡಬಾರದು. ಗಂಧ ಪುಷ್ಪಮಾಲೆ ಇವುಗಳನ್ನು ಧರಿಸ

**ಅಭ್ಯಂಗಮಂಜನಂ ಚಾಕ್ಷ್ಣೋರುಪಾನಚ್ಛತ್ರಧಾರಣಂ ।**
**ಸಂಕಲ್ಪಂ ಕಾಮಜಂ ಕ್ರೋಧಂ ಲೋಭಂ ಗೀತಂ ಚ ವಾದನಂ ॥ ೧೪೭ ॥**

**ನರ್ತನಂ ಚ ತಥಾ ದ್ಯೂತಂ ಜನವಾದಂ ತಥಾನೃತಂ ।**
**ಪರಿವಾದಂ ಚಾಪಿ ವಿಭೋ ದೂರತಃ ಪರಿವರ್ಜಯೇತ್ ॥ ೧೪೮ ॥**

**ಸ್ತ್ರೀಣಾಂ ಚ ಪ್ರೇಕ್ಷಣಾಲಂಬೌ ಉಪರೋಧಂ ಪರಸ್ಯ ಚ ।**
**ಪುಂಶ್ಚಲೀಭಿಸ್ತಥಾ ಸಂಗಂ ನ ಕುರ್ಯಾತ್ಕುರುನಂದನ ॥ ೧೪೯ ॥**

**ಏಕಃ ಶಯೀತ ಸರ್ವತ್ರ ನ ರೇತಃ ಸ್ಕಂದಯೇತ್ ಕ್ವಚಿತ್ ।**
**ಕಾಮಾದ್ಧಿ ಸ್ಕಂದಯನ್ ರೇತೋ ಹಿನಸ್ತಿ ವ್ರತಮೇವ ತು ॥ ೧೫೦ ॥**

---

ಬಾರದು. ರಥಾರೋಹಣ, ಸ್ತ್ರೀಸಂಗ ಇವುಗಳನ್ನು ಮಾಡಬಾರದು. ಎಲ್ಲವನ್ನೂ ಬೆಳ್ಳಗಿರುವುದನ್ನೇ ಗ್ರಹಣಮಾಡಬೇಕು.

೧೪೭-೧೪೮. ಇದಲ್ಲದೆ ಪ್ರಾಣಿಹಿಂಸೆ, ಅಭ್ಯಂಗನಸ್ನಾನ, ಕಣ್ಣುಗಳಿಗೆ ಕಾಡಿಗೆ ಹಚ್ಚುವುದು, ಪಾದುಕೆ ಛತ್ರಿ ಇವುಗಳನ್ನು ಧರಿಸುವುದು, ಆಲಿಂಗನ, ಚುಂಬನಾದಿ ಕಾಮಕಾರ್ಯ ಸಂಕಲ್ಪಗಳು, ಕೋಪ, ಆಸೆ, ಗಾನ, ವೀಣೆ ಮುಂತಾದ ವಾದ್ಯ ನುಡಿಸುವುದು. ನೃತ್ಯದರ್ಶನ, ಜೂಜು, ಜನರನ್ನು ಆಡಿಕೊಳ್ಳುವುದು, ಸುಳ್ಳುಹೇಳುವುದು, ಜನರನ್ನು ನಿಂದೆಮಾಡುವುದು ಇವನ್ನೆಲ್ಲಾ ದೂರಮಾಡಬೇಕು. ಎಂದರೆ ಇವಕ್ಕೆ ಸ್ವಲ್ಪವೂ ಅವಕಾಶಕೊಡಬಾರದು.

೧೪೯. ಅಯ್ಯಾ ಕುರುನಂದನನೇ! ಸ್ತ್ರೀಯರನ್ನು ನೋಡುವುದು ಮತ್ತು ಅವರನ್ನು ಆಶ್ರಯಿಸುವುದು, ಇತರರನ್ನು ಅಮಾರ್ಗದಲ್ಲಿ ನಿರ್ಬಂಧಪಡಿಸುವುದು. ದುರ್ನಡತೆಯುಳ್ಳ ಸ್ತ್ರೀಯರ ಸಂಬಂಧ, ಇವನ್ನು ಮಾಡಬಾರದು.

೧೫೦. ಎಲ್ಲಿ ಮಲಗಬೇಕಾದರೂ ತಾನೊಬ್ಬನೇ ಮಲಗಬೇಕು, ಎಲ್ಲಿಯೂ ರೇತಃಸ್ಖಲನಕ್ಕೆ ಅವಕಾಶಕೊಡಬಾರದು, ಕಾಮುವಶದಿಂದ ರೇತಸ್ಸು ಸ್ಖಲನವಾದರೆ ವ್ರತವೇ ಕೆಟ್ಟುಹೋಗುವುದು.

ಸುಪ್ತಃ ಕ್ಷರನ್ ಬ್ರಹ್ಮಚಾರೀ ದ್ವಿಜಃ ಶುಕ್ರಮಕಾಮತಃ ।
ಸ್ನಾತ್ವಾರ್ಕಮರ್ಚಯಿತ್ವಾ ತು ಪುನರ್ಮಾಮೇತ್ಯೃಚಂ ಜಪೇತ್ ॥ ೧೫೧ ॥

ಮನೋರಪಿ ತಥಾ ಚಾತ್ರ ಶ್ರೂಯತೆ ಪರಮಂ ವಚಃ ।
ಉದಕುಂಭಂ ಸುಮನಸೋ ಗೋಶಕೃನ್ಮೃತ್ತಿಕೇ ಕುಶಾನ್ ।
ಆಹರೇದ್ಯಾವದರ್ಥಾನ್ಹಿ ಭೈಕ್ಷಂ ಚಾಪಿ ಹಿ ನಿತ್ಯಶಃ ॥ ೧೫೨ ॥

ಗೃಹೇಷು ಯತ್ತು ಕರ್ತವ್ಯಂ ತಚ್ಛೃಣುಷ್ವ ನೃಪೋತ್ತಮ ।
ಸ್ವಕರ್ಮಸು ರತಾ ಯೇ ವೈ ತಥಾ ವೇದೇಷು ಯೇ ರತಾಃ ।
ಯಜ್ಞೇಷು ಚಾಪಿ ರಾಜೇಂದ್ರ ಯೇ ಚ ಶ್ರದ್ಧಾಸಮಾಶ್ರಿತಾಃ ॥ ೧೫೩ ॥

---

೧೫೧. ಮಲಗಿರುವಾಗ ಔಷ್ಣ್ಯ ಮೊದಲಾದ ದೋಷಗಳಿಂದ ರೇತಸ್ಸು ಅನಿಚ್ಛಾಪೂರ್ವಕವಾಗಿ ಜಾರಿಹೋದರೆ ಬೆಳಿಗ್ಗೆ ಎದ್ದು ಸ್ನಾನಮಾಡಿ ಸೂರ್ಯದರ್ಶನ ಮಾಡಿ ಆರಾಧಿಸಿ 'ಪುನರ್ಮಾಮಾ' ಎಂಬ ಮಂತ್ರವನ್ನು (ಎಂದರೆ ಪುನರ್ಮಾಮೇತ್ವಿಂದ್ರಿಯಂ ಪುನರಾಯುಃ ಪುನರ್ಭಗಃ ಪುನರ್ಬ್ರಾಹ್ಮಣ ಮೈತುಮಾ ಈ ಮಂತ್ರವನ್ನು) ಜಪಿಸಬೇಕು.

೧೫೨. ಈ ವಿಚಾರದಲ್ಲಿ ಮನುವಿನ ವಚನವೂ ಹಾಗೆಯೇ ಇದೆ. ಜಲಕುಂಭವನ್ನೂ, ಪುಷ್ಪಗಳನ್ನೂ, ಗೋಮಯವನ್ನೂ, ಶುದ್ಧವಾದ ಮೃತ್ತಿಕೆಯನ್ನೂ, ದರ್ಭೆಗಳನ್ನೂ ಪ್ರತಿದಿನವೂ ಎಷ್ಟುಬೇಕೋ ಅಷ್ಟನ್ನು ಹೊರಗಿನಿಂದ ತರಬೇಕು. ಪ್ರತಿದಿನವೂ ಭಿಕ್ಷಾನ್ನವನ್ನು ಶೇಖರಿಸಿ ಮನೆಗೆ ತರಬೇಕು (ಭೈಕ್ಷಂ ಎಂದರೆ ಭಿಕ್ಷಾಕದಂಬವೆಂದರ್ಥ).

೧೫೩. ಅಯ್ಯಾ ರಾಜೇಂದ್ರನೇ! ಇನ್ನು ಮನೆಗಳಲ್ಲಿದ್ದುಕೊಂಡು ಮಾಡಬೇಕಾದುದೇನೆಂಬುದನ್ನು ಹೇಳುತ್ತೇನೆ ಕೇಳು. ಯಾರು ಸ್ವಕರ್ಮದಲ್ಲಿಯೂ ವೇದ, ಯಜ್ಞ ಇವುಗಳಲ್ಲಿಯೂ ಶ್ರದ್ಧೆ, ಆಸಕ್ತಿ ಇವು ಉಳ್ಳವರಾಗಿರುವರೋ ಅವರೇ ವಿಧಿಜ್ಞರು (ಉತ್ತಮರು).

ಬ್ರಹ್ಮಚಾರ್ಯಾಹರೇದ್ಭೈಕ್ಷಂ ಗೃಹೇಭ್ಯಃ ಪ್ರಯತೋಽನ್ವಹಂ ।
ಗುರೋಃ ಕುಲೇ ನ ಭಿಕ್ಷೇತ ಸ್ವಜ್ಞಾತಿಕುಲಬಂಧುಷು ॥ ೧೫೪ ॥

ಅಲಾಭೇ ತ್ವನ್ಯ ಗೋತ್ರಾಣಾಂ ಪೂರ್ವಂ ಪೂರ್ವಂ ವಿವರ್ಜಯೇತ್ ।
ಸರ್ವಂ ಚಾಪಿ ಚರೇದ್ಗ್ರಾಮಂ ಪೂರ್ವೋಕ್ತಾನಾಮಸಂಭವೇ ॥
ಅಂತ್ಯವರ್ಜಂ ಮಹಾಬಾಹೋ ಇತ್ಯಾಹ ಭಗವಾನ್ವಿಭುಃ ॥ ೧೫೫ ॥

ವಾಚಂ ನಿಯಮ್ಯ ಪ್ರಯತಸ್ತ್ವಗ್ನಿಂ ಶಸ್ತ್ರಂ ಚ ವರ್ಜಯೇತ್ ।
ಚಾತುರ್ವರ್ಣ್ಯೇ ಚರೇದ್ಭೈಕ್ಷಮಲಾಭೇ ಕುರುನಂದನ ॥ ೧೫೬ ॥

ಆದೂರಾದಾಹೃತ್ಯ ಸಮಿಧಃ ಸನ್ನಿದಧ್ಯಾದ್ಗೃಹೋಪರಿ ।
ಸಾಯಂಪ್ರಾತಸ್ತು ಜುಹುಯಾತ್ ತಾಭಿರಗ್ನಿಮತಂದ್ರಿತಃ ॥ ೧೫೭ ॥

---

೧೫೪. ಬ್ರಹ್ಮಚಾರಿಯು ಶುಚಿರ್ಭೂತನಾಗಿ ಪ್ರತಿದಿನವೂ ಅನೇಕ ಗೃಹಗಳಿಂದ ಭಿಕ್ಷಾಕದಂಬವನ್ನು ತರಬೇಕು. ಹೀಗೆ ಭಿಕ್ಷೆಮಾಡುವಾಗ ಗುರು, ದಾಯಾದರು, ಕುಲಬಂಧುಗಳು ಇವರ ಮನೆಗಳಿಗೆ ಭಿಕ್ಷೆಗೆ ಹೋಗಬಾರದು.

೧೫೫. ಭಿಕ್ಷೆ ಕೊಡತಕ್ಕ ಬೇರೇ ಗೋತ್ರದವರು ಸಿಕ್ಕದೇ ಇದ್ದರೆ ಮೊದಮೊದಲಿನ ಮನೆಗಳನ್ನು ಬಿಡಬೇಕು. ಹಿಂದೆ ಹೇಳಿದಂತೆ ಭಿಕ್ಷೆ ಕೊಡುವವರು ಯಾರೂ ಇಲ್ಲದಿದ್ದರೆ ಭಿಕ್ಷೆಗಾಗಿ ಊರನ್ನೆಲ್ಲಾ ಸುತ್ತಬಹುದು.

೧೫೬. ಹೀಗೆ ಗ್ರಾಮವನ್ನು ಸುತ್ತುವಾಗ ಅಂತ್ಯಜರ ಮನೆಗಳನ್ನು ವರ್ಜ್ಯ ಮಾಡಬೇಕೆಂದು ಭಗವಂತನ ಉಕ್ತಿಯಿದೆ. ಪರಿಶುದ್ಧನಾಗಿ ವಾಙ್ನಿಯಮವನ್ನು ಮಾಡಿರುವ ಕಾಲದಲ್ಲಿ ಅಗ್ನಿಕಾರ್ಯ, ಶಸ್ತ್ರ (ಎಂದರೆ ಷಷಟ್ಕಾರಾನುಮಂತ್ರಣ) ಇವನ್ನು ಬಿಟ್ಟಿರಬಹುದು. ಯಥೋಕ್ತ ಭಿಕ್ಷಾದಾತೃಗಳು ಸಿಕ್ಕದೇ ಇರುವಾಗ ಚತುರ್ವರ್ಣದವರಲ್ಲಿಯೂ ಭಿಕ್ಷೆ ಬೇಡಬಹುದು.

೧೫೭. ದೂರದಿಂದ ಸಮಿತ್ತುಗಳನ್ನು ತಂದು ಅವುಗಳನ್ನು ಮನೆಯ ಛಾವಣಿಯ ಮೇಲ್ಗಡೆ ಹಾಕಬೇಕು (ಇಡಬೇಕು). ಸಾಯಂಕಾಲದಲ್ಲೂ ಪ್ರಾತಃಕಾಲದಲ್ಲೂ ಆ ಸಮಿತ್ತುಗಳನ್ನು ಅಗ್ನಿಯಲ್ಲಿ ಹೋಮಮಾಡಬೇಕು.

ಭೈಕ್ಷಾಚರಣಮುತ್ಸೃಜ್ಯ ನ ತಮಗ್ನಿಂ ಸಮಿಧ್ಯ ವೈ ।
ಅನಾತುರಃ ಸಪ್ತರಾತ್ರಮವಕೀರ್ಣಿವ್ರತಂ ಚರೇತ್ ॥ ೧೫೮ ॥

ವರ್ತನಂ ಚಾಸ್ಯ ಭೈಕ್ಷೇಣ ಪ್ರವದಂತಿ ಮನೀಷಿಣಃ ।
ತಸ್ಮಾದ್ಭೈಕ್ಷೇಣ ವೈ ನಿತ್ಯಂ ನೈಕಾನ್ನಾದೀ ಭವೇದ್ವ್ರತೀ ॥ ೧೫೯ ॥

ಭೈಕ್ಷೇಣ ವ್ರತಿನೋ ವೃತ್ತಿರುಪವಾಸಸಮಾ ಸ್ಮೃತಾ ।
ದೈವತ್ಯೇ ವ್ರತವದ್ರಾಜನ್ ಪಿತ್ರ್ಯೇ ಕರ್ಮಣ್ಯಥರ್ಷಿವತ್ ॥
ಕಾಮಮಭ್ಯರ್ಥಿತೋಽಶ್ನೀಯಾತ್ ವ್ರತಮಸ್ಯ ನ ಲುಪ್ಯತೇ ॥ ೧೬೦ ॥

ಬ್ರಾಹ್ಮಣಸ್ಯ ಮಹಾಬಾಹೋ ಕರ್ಮಯತ್ನಮುದಾಹೃತಂ ।
ರಾಜನ್ಯವೈಶ್ಯಯೋರ್ನೈತತ್ಪಂಡಿತೈಃ ಕುರುನಂದನ ॥ ೧೬೧ ॥

---

೧೫೮. ಆರೋಗ್ಯವಾಗಿದ್ದರೂ ಏಳು ರಾತ್ರಿಗಳು ಕಳೆಯುವವರೆಗೆ ಭಿಕ್ಷಾಚರಣಮಾಡದೆಯೂ ಹೋಮಕಾರ್ಯಕ್ಕೆ ಅಗ್ನಿಯನ್ನು ಹೊತ್ತಿಸದೆಯೂ ಕಾಲಕಳೆದರೆ ವ್ರತಭಂಗವಾಗಿ ಅವಕೀರ್ಣಿ ಎನಿಸುವನು.

೧೫೯. ಬ್ರಹ್ಮಚಾರಿಯು ಭಿಕ್ಷಾವೃತ್ತಿಯನ್ನು ಮಾಡಿಕೊಂಡೇ ಇರಬೇಕೆಂದು ವಿದ್ವಾಂಸರು ಹೇಳುತ್ತಾರೆ. ಆದುದರಿಂದ ಭಿಕ್ಷಾಚರಣ ಮಾಡದೆ ಒಂದೇ ಮನೆಯ ಅನ್ನವನ್ನು ತಿಂದರೆ ವ್ರತಿಯಾಗಲಾರನು.

೧೬೦. ವ್ರತಿಯಾದವನು ಭಿಕ್ಷಾನ್ನವನ್ನು ತಿಂದು ಜೀವಿಸಿದರೆ ಉಪವಾಸ ಮಾಡಿದಂತೆಯೇ ಎಂದು ತಿಳಿಯಬೇಕು ವ್ರತದಿನಗಳಲ್ಲಿ ದೇವತಾಸ್ವರೂಪವಾಗಿಯೂ ಪಿತೃಶ್ರಾದ್ಧಾದಿಗಳಲ್ಲಿ ಋಷಿಸ್ವರೂಪವಾಗಿಯೂ ಭಾವಿಸಿ ಭೋಜನ ಮಾಡೆಂದು ಯಾರಾದರೂ ಕರೆದು ಪ್ರಾರ್ಥಿಸಿದರೆ ಬೇಕಾದ ಹಾಗೆ ಭೋಜನ ಮಾಡಬಹುದು. ಆಗ ಇವನ ವ್ರತವು ಕೆಡುವುದಿಲ್ಲ.

೧೬೧. ಎಲೈ ಮಹಾಬಾಹುವೇ! ಬ್ರಾಹ್ಮಣನ ಕರ್ಮವು ಯಾವುದೆಂಬುದನ್ನು ಹೇಳಿದುದಾಯಿತು. ಎಲೈ ಕುರುನಂದನನೇ! ಈ ವ್ರತವು ಕ್ಷತ್ರಿಯ, ವೈಶ್ಯರಿಗೆ ಸಂಬಂಧಪಡುವುದಿಲ್ಲವೆಂದು ಪಂಡಿತರು ಹೇಳಿರುವರು.

ಚೋದಿತೋಽಚೋದಿತೋ ವಾಪಿ ಗುರುಣಾ ನಿತ್ಯಮೇವ ಹಿ ।
ಕುರ್ಯಾದಧ್ಯಯನೇ ಯೋಗಮಾಚಾರ್ಯಸ್ಯ ಹಿತೇಷು ಚ ॥ ೧೬೨ ॥

ಬುದ್ಧೀಂದ್ರಿಯಾಣಿ ಮನಸಾ ಶರೀರಂ ವಾಚಮೇವ ಹಿ ।
ನಿಯಮ್ಯ ಪ್ರಾಂಜಲಿಸ್ತಿಷ್ಠೇತ್ ವೀಕ್ಷಮಾಣೋಗುರೋರ್ಮುಖಂ॥ ೧೬೩ ॥

ನಿತ್ಯಮುದ್ಧೃತಪಾಣಿಃ ಸ್ಯಾತ್ ಸಾಧ್ವಾಚಾರಸ್ತು ಸಂಯತಃ ।
ಆಸ್ಯತಾಮಿತಿ ಚೋಕ್ತಸ್ಸನ್ ಆಸೀತಾಭಿಮುಖಂ ಗುರೋಃ ॥ ೧೬೪ ॥

ವಸ್ತ್ರವೇಷೈಸ್ತಥಾಽನ್ನೈಸ್ತು ಹೀನಸ್ಸ್ಯಾದ್ಗುರು ಸನ್ನಿಧೌ ।
ಉತ್ತಿಷ್ಠೇತ್ ಪ್ರಥಮಂ ಚಾಸ್ಯ ಜಘನ್ಯಂ ಚಾಪಿ ಸಂವಿಶೇತ್ ॥ ॥ ೧೬೫ ॥

---

೧೬೨. ಗುರುವು ಹೇಳಿದರೂ, ಹೇಳದಿದ್ದರೂ ಯಾವಾಗಲೂ ವೇದಾಭ್ಯಾಸದಲ್ಲಿಯೂ ಆಚಾರ್ಯನಿಗೆ ಹಿತಮಾಡುವುದರಲ್ಲಿಯೂ ತೊಡಗಬೇಕು.

೧೬೩. ತನ್ನ ಬುದ್ಧೀಂದ್ರಿಯಗಳನ್ನೂ ಶರೀರವಾಕ್ಕುಗಳನ್ನೂ ಮನಸ್ಸಿನಿಂದ ನಿಗ್ರಹಮಾಡಿಕೊಂಡು ಕೈಮುಗಿದುಕೊಂಡು ಗುರುವಿನ ಮುಖವನ್ನು ನೋಡುತ್ತಾ ನಿಲ್ಲಬೇಕು.

೧೬೪. ಗುರುವಿನ ಮುಂದುಗಡೆಯಲ್ಲಿ ಒಳ್ಳೆಯ ನಡತೆಯುಳ್ಳವನೂ, ಇಂದ್ರಿಯನಿಗ್ರಹವುಳ್ಳವನೂ ಆಗಿ ಕೈಎತ್ತಿಕೊಂಡು ಇರಬೇಕು. ಕುಳಿತುಕೊಳ್ಳಬಹುದು ಎಂದು ಗುರುವು ಹೇಳಿದಾಗ ಗುರುವಿನ ಎದುರಾಗಿ ಕುಳಿತುಕೊಳ್ಳಬೇಕು.

೧೬೫. ಬಟ್ಟೆ, ಅಲಂಕಾರ, ಭೋಜನ (ತಿನ್ನುವ ಪದಾರ್ಥ) ಇವುಗಳಲ್ಲಿ ಗುರುವು ಉಪಯೋಗಿಸುವುದಕ್ಕಿಂತ ತಾನು ಉಪಯೋಗಿಸುವುದು ಕಡಮೆಯಾದ ಬೆಲೆಯುಳ್ಳದ್ದಾಗಿರಬೇಕು. ಗುರುವು ಹಾಸಿಗೆಯನ್ನು ಬಿಟ್ಟು ಏಳುವುದಕ್ಕೆ ಮೊದಲು ತಾನು ಹಾಸಿಗೆಯನ್ನು ಬಿಟ್ಟು ಏಳಬೇಕು. ಗುರುವು ಹಾಸಿಗೆಯಲ್ಲಿ ಮಲಗಿದನಂತರ ತಾನು ಮಲಗಬೇಕು.

ಪ್ರತಿಶ್ರವಣಸಂಭಾಷೇ ತಲ್ಪಸ್ಥೋ ನ ಸಮಾಚರೇತ್ ।
ನ ಚಾಸೀನೋ ನ ಭುಂಜಾನೋ ನ ತಿಷ್ಠನ್ನ ಪರಾಙ್ಮುಖಃ ॥ ೧೬೬ ॥

ಆಸೀನಸ್ಯ ಸ್ಥಿತಃ ಕುರ್ಯಾದಭಿಗಚ್ಛಂಶ್ಚ ತಿಷ್ಠತಃ ।
ಪ್ರತ್ಯುದ್ಗಂತಾ ತು ವ್ರಜತಃ ಪಶ್ಚಾದ್ಧಾವಂಶ್ಚ ಧಾವತಃ ॥ ೧೬೭ ॥

ಪರಾಙ್ಮುಖಸ್ಯಾಭಿಮುಖೋ ದೂರಸ್ಥಶ್ಚೈವ ಚಾಂತಿಕಂ ।
ನಮಸ್ಕೃತ್ಯ ಶಯಾನಸ್ಯ ನಿದೇಶೇ ಸ್ಯಾತ್ತು ಸರ್ವದಾ ॥ ೧೬೮ ॥

ನೀಚಂ ಶಯ್ಯಾಸನಂ ಚಾಸ್ಯ ಸರ್ವದಾ ಗುರುಸನ್ನಿಧೌ ।
ಗುರೋಶ್ಚ ಚಕ್ಷುರ್ವಿಷಯೇ ನ ಯಥೇಷ್ಟಾಸನೋ ಭವೇತ್ ॥ ೧೬೯ ॥

---

೧೬೬. ಹಾಸಿಗೆಯಲ್ಲಿ ಮಲಗಿಕೊಂಡೇ ಹೊರಗಿನವರು ಹೇಳುವ ಮಾತನ್ನು ಕೇಳಬಾರದು. ಮಲಗಿಕೊಂಡು ಹೊರಗಿನವರ ಸಂಗಡ ಮಾತನಾಡಲೂಬಾರದು. ಹಾಸಿಗೆಯಮೇಲೇ ಕುಳಿತಿರುವುದು, ಊಟಮಾಡುವುದು, ನಿಂತಿರುವುದು ಮುಖಕಡೆಯಾಗಿರುವುದು ಇವೆಲ್ಲಾ ನಿಷಿದ್ಧ.

೧೬೭. ಗುರುವು ಕುಳಿತಿದ್ದರೆ ಶಿಷ್ಯನು ಎದ್ದು ಕೆಲಸಮಾಡಬೇಕು. ಗುರು ನಿಂತಿರುವಾಗ ಅವರು ಕರೆಯದಿದ್ದರೂ ಎದುರಾಗಿ ಹೋಗಿ ಕೆಲಸಮಾಡಬೇಕು. ಅವರು ಹೋಗುತ್ತಿರುವಾಗ ತಾನು ಎದುರಾಗಿ ಹೋಗುತ್ತಾ, ಅವರು ಓಡುತ್ತಿರುವಾಗ ತಾನೂ ಹಿಂದೆ ಓಡುತ್ತಾ ಹೋಗಬೇಕು.

೧೬೮. ಗುರುವು ಹಿಮ್ಮೊಗನಾಗಿ ನಿಂತಿರುವಾಗ ಶಿಷ್ಯನು ಅವನ ಎದುರಿಗೆ ಬಂದು ವಂದಿಸಬೇಕು. ಗುರುವು ದೂರದಲ್ಲಿದ್ದರೆ ಅವನ ಸಮೀಪಕ್ಕೆ ಹೋಗಿ ವಂದಿಸಬೇಕು. ಗುರುವು ಮಲಗಿದ್ದರೆ ಯಾವ ಹೊತ್ತಿನಲ್ಲಿಯಾಗಲೀ ಅವನ ಸಮೀಪದಲ್ಲಿ ನಿಂತಿರಬೇಕು.

೧೬೯. ಗುರುವಿನ ಕಣ್ಣೆದುರಿಗೆ ತನ್ನ ಇಚ್ಛೆಬಂದ ರೀತಿಯಲ್ಲಿ ಕುಳಿತುಕೊಳ್ಳಬಾರದು. ಮತ್ತು ಶಯನವೂ ಕೂಡದು, ಯಾವಾಗಲೂ ಗುರುವಿನ ಸನ್ನಿಧಿಯಲ್ಲಿ ತನ್ನ ಆಸನವೂ, ಶಯನವೂ ಗುರುವಿನ ಆಸನಕ್ಕಿಂತಲೂ ಮತ್ತು ಶಯನಕ್ಕಿಂತಲೂ ತಗ್ಗಿನಲ್ಲಿ ಇರಬೇಕು.

**ನಾಮೋಚ್ಚಾರಣಮೇವಾಸ್ಯ ಪರೋಕ್ಷಮಪಿ ಸುವ್ರತ ।**
**ನ ಚೈವಮನುಕುರ್ವೀತ ಗತಿಭಾಷಣಚೇಷ್ಟಿತೈಃ ॥ ೧೭೦ ॥**

**ಪರೀವಾದಸ್ತಥಾ ನಿಂದಾ ಗುರೋರ್ಯತ್ರ ಪ್ರವರ್ತತೇ ।**
**ಕರ್ಣೌತತ್ರ ಪಿಧಾತವ್ಯೌ ಗಂತವ್ಯಂ ವಾ ತತೋಽನ್ಯತಃ ॥ ೧೭೧ ॥**

**ಪರೀವಾದಾದ್ಖರಸಭಃ ಸ್ಯಾತ್ ಸಾರಮೇಯಸ್ತು ನಿಂದಕಃ ।**
**ಪರಿಭೋಕ್ತಾ ಕೃಮಿರ್ಭವತಿ ಕೀಟೋ ಭವತಿ ಮತ್ಸರೀ ॥ ೧೭೨ ॥**

**ದೂರಸ್ಥೋ ನಾರ್ಚಯೇದೇನಂ ನಕ್ರುದ್ಧೋ ನಾಂತಿಕೇ ಸ್ತ್ರಿಯಾ ।**
**ಯಾನಾಸನಗತೋ ರಾಜನ್ ಅವರುಹ್ಯಾಭಿವಾದಯೇತ್ ॥ ೧೭೩ ॥**

**ಪ್ರತಿಕೂಲೇ ಸಮಾನೇ ತು ನಾಸೀತ ಗುರುಣಾ ಸಹ ।**
**ಅಶೃಣ್ವತಿ ಗುರೌ ರಾಜನ್ ನ ಕಿಂಚಿದಪಿ ಕೀರ್ತಯೇತ್ ॥ ೧೭೪ ॥**

---

೧೭೦. ಎಲೈ ಸುವ್ರತನೇ! ಇವನ (ಗುರುವಿನ) ಹಿಂದೆಯಾದರೂ ಗುರುವಿನ ನಾಮೋಚ್ಚಾರಣೆಯನ್ನು ಮಾಡಬಾರದು. ಗುರುವಿನ ನಡಗೆ, ಮಾತು, ಕೆಲಸ ಇವುಗಳನ್ನು ಅಣಕಿಸಬಾರದು.

೧೭೧. ಗುರುವಿನಮೇಲೆ ಅಪವಾದವಾಗಲೀ ಗುರುನಿಂದೆಯಾಗಲೀ ಎಲ್ಲಿ ನಡೆಯುವುದೋ ಅಲ್ಲಿ ಕಿವಿಗಳನ್ನು ಮುಚ್ಚಿಕೊಳ್ಳಬೇಕು. ಅಥವಾ ಆ ಸ್ಥಳವನ್ನು ಬಿಟ್ಟು ಮತ್ತೆಲ್ಲಿಗಾದರೂ ಹೋಗಬೇಕು.

೧೭೨. ಗುರುವಿನಮೇಲೆ ಅಪವಾದ ಹೇಳುವವನು ಕತ್ತೆಯಾಗಿಯೂ, ಗುರು ದೂಷಣ ಮಾಡುವವನು ನಾಯಿಯಾಗಿಯೂ ಜನಿಸುವನು. ಹೀಗೆ ಜನ್ಮವೆತ್ತಿದ ವನು ಸಿಕ್ಕಿದಲ್ಲಿ ಎಲ್ಲರಲ್ಲೂ ತಿನ್ನುವನು ಕ್ರಿಮಿಯಾಗುವನು. ಇತರರಿಗೆ ಒಳ್ಳೆಯ ದಾದರೆ ನೋಡಿ ಸಹಿಸಲಾರದವನು ಕೀಟ (ಹುಳು) ವಾಗುವನು

೧೭೩. ದೂರದಲ್ಲಿದ್ದು ಗುರುವನ್ನು ಪೂಜಿಸಬಾರದು, ಕೋಪಯುಕ್ತನಾಗಿ ಪೂಜಿಸಬಾರದು, ಹೆಂಗಸಿನ ಎದುರಿಗೆ ಪೂಜಿಸಬಾರದು. ಎಲೈ ರಾಜನೇ! ತಾನು ವಾಹನದಲ್ಲೋ ಆಸನದಲ್ಲೋ ಕುಳಿತಿದ್ದರೆ ಯಾನದಿಂದ ಇಳಿದು ನಮಸ್ಕರಿಸಬೇಕು.

೧೭೪. ಪ್ರತಿಕೂಲವಾಗಿದ್ದಾಗಲೂ, ಸಮಾನವಾಗಿದ್ದಾಗಲೂ, ಗುರುವಿನ ಜೊತೆಯಲ್ಲಿ ಕೂರಬಾರದು. ಗುರುವು ಗಮನಿಸದೆ ಎಂದರೆ ಕಿವಿಕೊಟ್ಟು ಕೇಳದೆ ಇರುವಾಗ ಏನನ್ನೂ ಹೇಳಬಾರದು.

ಗೋಃ ಶ್ಚೋಷ್ಟ್ರಯಾನಪ್ರಾಸಾದಪ್ರಸ್ತರೇಷು ಕಟೇಷು ಚ ।
ಆಸೀತ ಗುರುಣಾ ಸಾರ್ಧಂ ಶಿಲಾ ಫಲಕನೌಷು ಚ ॥ ೧೭೫ ॥

ಗುರೋ ಗುರೌ ಸನ್ನಿಹಿತೇ ಗುರುವದ್ವೃತ್ತಿ ಮಾಚರೇತ್ ।
ಗುರುಪುತ್ರೇಷು ಚಾರ್ಯೇಷು ಗುರೋಶ್ಚೈವ ಸ್ವಬಂಧುಷು ॥ ೧೭೬ ॥

ಬಾಲಃ ಸಮಾನ ಜನ್ಮಾ ವಾ ವಿಶಿಷ್ಟೋ ಯಜ್ಞಕರ್ಮಣಿ ।
ಅಧ್ಯಾಪಯನ್ಗುರುಸುತೋ ಗುರುವನ್ಮಾನಮರ್ಹತಿ ॥ ೧೭೭ ॥

ಉತ್ಸಾದನಮಥಾಂಗಾನಾಂ ಸ್ನಪನೋಚ್ಛಿಷ್ಟಭೋಜನೇ ।
ಪಾದಯೋರ್ನೇಜನಂ ರಾಜನ್ ಗುರುಪುತ್ರೇಷು ವರ್ಜಯೇತ್ ॥ ೧೭೮ ॥

ಗುರುವತ್ಪ್ರತಿಪೂಜ್ಯಾಸ್ತು ಸವರ್ಣಾ ಗುರುಯೋಷಿತಃ ।
ಅಸವರ್ಣಾಸ್ತು ಸಂಪೂಜ್ಯಾಃ ಪ್ರತ್ಯುತ್ಥಾನಾಭಿವಾದನೈಃ ॥ ೧೭೯ ॥

---

೧೭೫. ಎತ್ತು, ಕುದುರೆ, ಒಂಟೆ, ಬಂಡಿ ಮೊದಲಾದ ಯಾನಗಳ ಮೇಲೂ, ಮಹಡಿ, ಕಲ್ಲುಚಪ್ಪಡಿ, ಚಾಪೆ ಇವುಗಳ ಮೇಲೂ, ಹಡಗುಗಳಲ್ಲೂ ಗುರುವಿನೊಡನೆ ಕೂಡಬಾರದು.

೧೭೬. ತನ್ನ ಗುರುಗಳ ಗುರುವಿನ ಸಮೀಪಕ್ಕೆ ಹೋದಾಗ ಅವರಲ್ಲೂ ಗುರುವಿನಲ್ಲಿ ಇದ್ದಂತೆಯೇ ಭಕ್ತಿಯಿಡಬೇಕು. ಗುರುಪುತ್ರರು, ಪೂಜ್ಯರು. ಗುರು ಬಂಧುಗಳು ಇವರಲ್ಲೂ ಹಾಗೆಯೇ ನಡೆದುಕೊಳ್ಳಬೇಕು.

೧೭೭. ಗುರುಪುತ್ರನು ಹುಡುಗನಾಗಿರಲಿ, ಸಮಾನ ವಯಸ್ಸಿನವನಾಗಿರಲಿ, ಯಜ್ಞಕರ್ಮದಲ್ಲಿ ವಿಶೇಷ ನಿಯುಕ್ತನಾದರೂ, ಅಧ್ಯಯನ ಮಾಡಿಸುವದರಲ್ಲಿ ನಿರತನಾದರೂ ಗುರುವಿನಂತೆಯೇ ಮರ್ಯಾದೆಗೆ ತಕ್ಕವನಾಗಿರುವನು.

೧೭೮. ಆದರೆ ಅಂಗಗಳನ್ನು ಮರ್ದನಮಾಡಿ ಸ್ನಾನಮಾಡಿಸುವುದು, ಭೋಜನಮಾಡಿದ ಉಚ್ಛಿಷ್ಟವನ್ನು ಭುಜಿಸುವುದು, ಪಾದಪ್ರಕ್ಷಾಲನವನ್ನು ಮಾಡುವುದು ಇವಕ್ಕೆ ಅರ್ಹನಲ್ಲ. ಗುರುಪುತ್ರನಲ್ಲಿ ಆ ಕೆಲಸಗಳನ್ನು ವರ್ಜಿಸಬೇಕು.

೧೭೯. ಸವರ್ಣಳಾದ ಗುರುವಿನ ಹೆಂಡತಿಯನ್ನು ಗುರುಗಳನ್ನು ಕಂಡಂತೆಯೇ ಕಾಣಬೇಕು. ಸವರ್ಣರಲ್ಲದ ಗುರುಪತ್ನಿಯರನ್ನು ಪ್ರತ್ಯುತ್ಥಾನಮಾಡುವುದು, ನಮಸ್ಕರಿಸುವುದು ಇತ್ಯಾದಿಗಳಿಂದ ಮಾತ್ರ ಪೂಜಿಸಬೇಕು.

**ಅಭ್ಯಂಜನಂ ಚ ಸ್ನಪನಂ ಗಾತ್ರೋತ್ಸಾದನಮೇವ ಚ ।**
**ಗುರುಪತ್ನ್ಯಾ ನ ಕಾರ್ಯಾಣಿ ಕೇಶಾನಾಂ ಚ ಪ್ರಸಾಧನಂ ॥ ೧೮೦ ॥**

**ಗುರುಪತ್ನೀಂ ತು ಯುವತೀಂ ನಾಭಿವಾದೇತ ಪಾದಯೋಃ ।**
**ಪೂರ್ಣವಿಂಶತಿವರ್ಷೇಣ ಗುಣದೋಷೌ ವಿಜಾನತಾ ॥ ೧೮೧ ॥**

**ಸ್ವಭಾವ ಏವ ನಾರೀಣಾಂ ನರಾಣಾಮಿಹ ದೂಷಣಂ ।**
**ಅತೋಽರ್ಥಾನ್ನ ಪ್ರಮಾದ್ಯಂತಿ ಪ್ರಮದಾಸು ವಿಪಶ್ಚಿತಃ ॥ ೧೮೨ ॥**

**ಅವಿದ್ವಾಂಸಮಲಂ ಲೋಕೇ ವಿದ್ವಾಂಸಮಪಿ ವಾ ಪುನಃ ।**
**ಪ್ರಮದಾ ಹ್ಯುತ್ಪಥಂ ನೇತುಂ ಕಾಮಕ್ರೋಧವಶಾನುಗಂ ॥ ೧೮೩ ॥**

**ಮಾತ್ರಾ ಸ್ವಸ್ರಾ ದುಹಿತ್ರಾ ವಾ ನ ವಿವಿಕ್ತಾಸನೋ ಭವೇತ್ ।**
**ಬಲವಾನಿಂದ್ರಿಯಗ್ರಾಮೋ ವಿದ್ವಾಂಸಮಪಿ ಕರ್ಷತಿ ॥ ೧೮೪ ॥**

---

೧೮೦　ಎಣ್ಣೆ ಹಚ್ಚುವುದು, ನೀರೆರೆಯುವುದು, ಅಂಗಮರ್ದನಮಾಡುವುದು ತಲೆಬಾಚುವುದು ಈ ಕೆಲಸಗಳನ್ನು ಗುರುಪತ್ನಿಯಲ್ಲಿ ಮಾಡಬಾರದು.

೧೮೧.　ಗುಣದೋಷಗಳನ್ನು ಬಲ್ಲ ಶಿಷ್ಯನು ಇಪ್ಪತ್ತುವರ್ಷದ ಪೂರ್ಣಪ್ರಾಯದವಳಾದ ಗುರುಪತ್ನಿಯನ್ನು ಕಾಲುಮುಟ್ಟಿ ನಮಸ್ಕರಿಸಬಾರದು.

೧೮೨　ಸಾಮಾನ್ಯನಾಗಿ ಗಂಡಸರನ್ನು ದೂಷಿಸುವುದು ಹೆಂಗಸರಿಗೆ ಸ್ವಭಾವವೇ ಆಗಿದೆ. ಆದ್ದರಿಂದ ಗುಣದೋಷಗಳನ್ನು ತಿಳಿದ ವಿದ್ವಾಂಸರು ಹೆಂಗಸರ ವಿಷಯದಲ್ಲಿ ಎಚ್ಚರತಪ್ಪಿ ನಡೆಯುವುದಿಲ್ಲ.

೧೮೩.　ತಿಳಿವಳಿಕೆಯಿಲ್ಲದವರ ವಿಷಯ ಹಾಗಿರಲಿ. ಕಾಮ ಕ್ರೋಧಗಳಿಗೆ ವಶನಾದವನು ವಿದ್ವಾಂಸನಾದರೂ ಸ್ತ್ರೀಯರು ಮಾಡುವ ಅಮಾರ್ಗ ಪ್ರಾಪಣೆಗೆ ಗುರಿಯಾಗುತ್ತಾನೆ.

೧೮೪　ತಾಯಿ, ಸಹೋದರಿ, ಮಗಳು ಇವರಲ್ಲಿ ಯಾರೊಬ್ಬರೊಡನೆಯೂ ಏಕಾಂತ ಸ್ಥಳದಲ್ಲಿ ಕುಳಿತುಕೊಳ್ಳಬಾರದು. ಬಲಿಷ್ಠವಾದ ಇಂದ್ರಿಯ ಸಮೂಹವು ವಿದ್ವಾಂಸನನ್ನೂ ಕೂಡ ದುರ್ಮಾರ್ಗಕ್ಕೆ ಎಳೆದುಬಿಡುತ್ತದೆ.

ರಾಜೇಂದ್ರ ಗುರುಪತ್ನೀನಾಂ ಯುವತೀನಾಂ ಯುವಾ ಭುವಿ।
ವಿಧಿವದ್ವಂದನಂ ಕುರ್ಯಾದಸಾವಹಮಿತಿ ಬ್ರುವನ್ ॥ ೧೮೫ ॥

ವಿಪ್ರೋಽಸ್ಯ ಪಾದಗ್ರಹಣಮನ್ವಹಂ ಚಾಭಿವಾದನಂ ।
ಗುರುದಾರೇಷು ಕುರ್ವೀತ ಸತಾಂ ಧರ್ಮಮನುಸ್ಮರನ್ ॥ ೧೮೬ ॥

ಯಥಾ ಖನನ್ ಖನಿತ್ರೇಣ ಜಲಮಾಪ್ನೋತಿ ಮಾನವಃ ।
ತಥಾ ಗುರುಗತಾಂ ವಿದ್ಯಾಂ ಶುಶ್ರೂಷುರಧಿಗಚ್ಛತಿ ॥ ೧೮೭ ॥

ಮುಂಡೋ ವಾ ಜಟಿಲೋ ವಾ ಸ್ಯಾತ್ ಅಥ ವಾ ಸ್ಯಾತ್ ಶಿಖೀ ಜಟೀ ।
ನೈನಂ ಕ್ವಾಪ್ಯಭಿನಿಮ್ಲೋಚೇದರ್ಕೋ ನಾಭ್ಯುದಿಯಾತ್ಕ್ವಚಿತ್ ॥ ೧೮೮ ॥

---

೧೮೫. ಎಲೈ ರಾಜೇಂದ್ರನೇ! ಕೇಳು, ಪ್ರಾಯದವನಾದ ಶಿಷ್ಯನು ಪ್ರಾಯದವರಾದ ಗುರುಪತ್ನಿಯರಿಗೆ 'ಅಸೌ ಅಹಂ' ಎಂಬದಾಗಿ ಹೇಳುತ್ತಾ ವಿಧಿಪ್ರಕಾರ ನಮಸ್ಕಾರವನ್ನು ಮಾಡಬೇಕು.

೧೮೬. ಬ್ರಾಹ್ಮಣನಾದವನು ಸತ್ಪುರುಷರ ಆಚರಣೆಯನ್ನು ನೆನಸುವವನಾಗಿ ಪ್ರತಿದಿನವೂ ಗುರುವಿಗೂ ಗುರುಪತ್ನಿಯರಿಗೂ ಕಾಲುಮುಟ್ಟಿ ನಮಸ್ಕಾರ ಮಾಡಬೇಕು.

೧೮೭. ಗುದ್ದಲಿಯಿಂದ ಅಗೆಯುವ ಮನುಷ್ಯನು ಸರಿಯಾದ ಸ್ಥಳದಲ್ಲಿ ಅಗೆದು ಅಗೆದು ಅಮೃತದಂತಿರುವ ನೀರನ್ನು ಹೇಗೆ ಪಡೆಯುತ್ತಾನೋ ಹಾಗೆ ಶಿಷ್ಯನು ಶುಶ್ರೂಷೆಮಾಡಿ ಮಾಡಿ, ಗುರುಗಳಲ್ಲಿರುವ ವಿದ್ಯೆಯನ್ನು ಹೊಂದುತ್ತಾನೆ.

೧೮೮. ಶಿಷ್ಯನು ತಲೆಯನ್ನು ಪೂರ್ತಿ ಮುಂಡನ ಮಾಡಿಸಿಕೊಂಡಿರಬಹುದು. ಜಟೆಗಳನ್ನು ಬಿಟ್ಟುಕೊಂಡೂ ಇರಬಹುದು. ಅಥವಾ ಜುಟ್ಟು ಬಿಟ್ಟುಕೊಂಡಿರಬಹುದು. ಏನೇ ಆದರೂ ಇವನು ಸೂರ್ಯಾಸ್ತಕಾಲದಲ್ಲಿ ಮಲಗಬಾರದು. ಹಾಗೆಯೇ ಸೂರ್ಯೋದಯಕಾಲದಲ್ಲಿಯೂ ಮಲಗಬಾರದು.

**ತಂ ಚೇದಭ್ಯುದಿಯಾತ್ಸೂರ್ಯಃ ಶಯಾನಂ ಕಾಮಕಾರತಃ ।**
**ನಿಮ್ಲೋಚೇದ್ವಾಪ್ಯಭಿಜ್ಞಾನಾಜ್ಜಪನ್ನುಪವಸೇದ್ದಿನಂ　　॥ ೧೮೯ ॥**

**ಸೂರ್ಯೇಣ ಹ್ಯಭಿನಿರ್ಮುಕ್ತಃ ಶಯಾನೋಽಭ್ಯುದಿತಶ್ಚ ಯಃ ।**
**ಪ್ರಾಯಶ್ಚಿತ್ತಮಕುರ್ವಾಣೋ ಯುಕ್ತಸ್ಸ್ಯಾನ್ಮಹತೈನಸಾ　　॥ ೧೯೦ ॥**

**ಉಪಸ್ಪೃಶ್ಯ ಮಹಾರಾಜ ಉಭೇ ಸಂಧ್ಯೇ ಸಮಾಹಿತಃ ।**
**ಶುಚೌದೇಶೇ ಜಪನ್ ಜಪ್ಯಮುಪಾಸೀತ ಯಥಾವಿಧಿ　　॥ ೧೯೧ ॥**

**ಯದಿ ಸ್ತ್ರೀ ಯದ್ಯವರಜಃ ಶ್ರೇಯಃ ಕಿಂಚಿತ್ಸಮಾಚರೇತ್ ।**
**ತತ್ಸರ್ವಮಾಚರೇದ್ಯುಕ್ತೋ ಯತ್ರ ವಾ ರಮತೇ ಮನಃ　　॥ ೧೯೨ ॥**

---

೧೮೯. ಇವನು ಸ್ವೇಚ್ಛೆಯಾಗಿ ಮಲಗಿ ನಿದ್ರಿಸುತ್ತಿರುವಾಗ ಸೂರ್ಯನು ಉದಯಿಸಿದರೆ ಅಥವಾ ಅಸ್ತಮಿಸಿದರೆ ಅದರಿಂದ ಬಂದ ದೋಷವನ್ನು ನಿವೃತ್ತಿ ಮಾಡಿಕೊಳ್ಳುವುದಕ್ಕಾಗಿ ಒಂದು ದಿವಸ ಉಪವಾಸ ಮಾಡಬೇಕು. ಎಂದರೆ ಆಹಾರವನ್ನು ತೆಗೆದುಕೊಳ್ಳದೆ ಶರೀರಶೋಷಣವನ್ನು ಮಾಡಬೇಕು. ಮತ್ತು ಜಪ ಮಾಡುತ್ತಾ ಆ ದಿವಸವನ್ನೆಲ್ಲಾ ಆತ್ಮಚಿಂತನೆಯಲ್ಲಿ ಕಳೆಯಬೇಕು.

೧೯೦. ಸೂರ್ಯಾಸ್ತವಾಗುವಾಗ ನಿದ್ರಿಸುತ್ತಿದ್ದರೆ ಅಭಿನಿರ್ಮುಕ್ತವೆಂಬ ದೋಷಕ್ಕೆ ಗುರಿಯಾಗುವನು. ಸೂರ್ಯೋದಯ ಕಾಲದಲ್ಲಿ ಮಲಗಿದ್ದರೆ ಅಭ್ಯುದಿತವೆಂಬ ದೋಷವನ್ನು ಹೊಂದುವನು. ಇದಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳದಿದ್ದರೆ ಮಹಾಪಾಪಯುಕ್ತನಾಗುವನು.

೧೯೧. ಅಯ್ಯಾ ಮಹಾರಾಜನೇ! ಪ್ರಾತಃಸಂಧ್ಯಾ, ಸಾಯಂಸಂಧ್ಯಾ, ಈ ಎರಡರಲ್ಲೂ ಆಚಮನವನ್ನು ಮಾಡಿ, ಶುದ್ಧವಾದ ಸ್ಥಳದಲ್ಲಿ ಕುಳಿತು ಜಪಿಸಬೇಕಾದ್ದನ್ನು ಜಪಿಸುತ್ತಾ ವಿಧ್ಯನುಸಾರವಾಗಿ ಬ್ರಹ್ಮಚಿಂತನಮಾಡಬೇಕು.

೧೯೨. ಹೆಂಗಸರೂ ಹೀನಜಾತಿಯಲ್ಲಿ ಹುಟ್ಟಿದವರೂ (ಜಪ, ಕೀರ್ತನ, ದಾನ, ಮುಂತಾದ) ಏನಾದರೊಂದು ಶ್ರೇಯಸ್ಕರವಾದ ಕಾರ್ಯವನ್ನು ಮಾಡಬೇಕು. ತಮಗೆ ಅಂಥ ಯಾವ ಕೆಲಸಮಾಡುವುದರಲ್ಲಿ ಮನವೊಲಿಯುವುದೋ ಅದೆಲ್ಲವನ್ನೂ ಉಪಾಯದಿಂದ ಮಾಡಬೇಕು.

ಧರ್ಮಾರ್ಥಾವುಚ್ಯತೇ ಶ್ರೇಯಃ ಕಾಮಾರ್ಥೌ ಧರ್ಮ ಏವ ಚ ।
ಅರ್ಥ ಏವೇಹ ವಾ ಶ್ರೇಯಸ್ತ್ರಿವರ್ಗ ಇತಿ ಸಂಸ್ಥಿತಿಃ ॥ ೧೯೩ ॥

ಪಿತಾ ಮಾತಾ ತಥಾ ಭ್ರಾತಾ ಆಚಾರ್ಯಾಃ ಕುರುನಂದನ ।
ನಾರ್ತೇನಾಪ್ಯವಮಂತವ್ಯಾ ಬ್ರಾಹ್ಮಣೇನ ವಿಶೇಷತಃ ॥ ೧೯೪ ॥

ಆಚಾರ್ಯೋ ಬ್ರಹ್ಮಣೋ ಮೂರ್ತಿಃ ಪಿತಾ ಮೂರ್ತಿಃ ಪ್ರಜಾಪತೇಃ ।
ಮಾತಾಪ್ಯಥಾದಿತೇರ್ಮೂರ್ತಿಃ ಭ್ರಾತಾ ಸ್ಯಾನ್ಮೂರ್ತಿರಾತ್ಮನಃ ॥ ೧೯೫ ॥

ಯನ್ಮಾತಾ ಪಿತರೌ ಕ್ಲೇಶಂ ಸಹೇತೇ ಸಂಭವೇ ನೃಣಾಂ ।
ನ ತಸ್ಯ ನಿಷ್ಕೃತಿಃ ಶಕ್ಯಾ ಕರ್ತುಂ ವರ್ಷಶತೈರಪಿ ॥ ೧೯೬ ॥

ತಯೋರ್ನಿತ್ಯಂ ಪ್ರಿಯಂ ಕುರ್ಯಾದಾಚಾರ್ಯಸ್ಯ ಚ ಭಾರತ ।
ತೇಷು ಹಿ ತ್ರಿಷು ತುಷ್ಟೇಷು ತಪಃ ಸರ್ವಂ ಸಮಾಪ್ಯತೇ ॥ ೧೯೭ ॥

---

೧೯೩. ಧರ್ಮ, ಅರ್ಥ, ಕಾಮ ಇವು ಮೂರಕ್ಕೂ ತ್ರಿವರ್ಗವೆಂದು ಹೆಸರು. ಶ್ರೇಯಸ್ಸೇ ಧರ್ಮಾರ್ಥಗಳೆಂದು ಹೇಳಲ್ಪಡುತ್ತದೆ. ಧರ್ಮವೇ ಕಾಮಾರ್ಥಗಳೆಂದೂ ಹೇಳಲ್ಪಡುತ್ತದೆ. ತ್ರಿವರ್ಗದೊಳಗೆ ಅರ್ಥವೇ ಶ್ರೇಯಸ್ಸು ಎಂಬುದು ವಸ್ತುತಃ ಇರತಕ್ಕ ವಿಷಯವಾಗಿದೆ.

೧೯೪. ಬ್ರಾಹ್ಮಣನಾದವನು ತನಗೆ ವಿಶೇಷವಾಗಿ ತೊಂದರೆಯಾಗಿದ್ದರೂ ತಂದೆ, ತಾಯಿ, ಸಹೋದರ, ಆಚಾರ್ಯರು ಇವರುಗಳನ್ನು ಅವಮಾನ ಮಾಡಬಾರದು.

೧೯೫. ಆಚಾರ್ಯನು ಪರಬ್ರಹ್ಮಸ್ವರೂಪನು, ತಂದೆಯು ಚತುರ್ಮುಖ ಬ್ರಹ್ಮಸ್ವರೂಪನು, ತಾಯಿಯು ದೇವಮಾತೆಯಾದ ಅದಿತಿಸ್ವರೂಪೆ, ಸಹೋದರನು ತನ್ನ ಸ್ವರೂಪವೇ ಆಗಿರುತ್ತಾನೆ.

೧೯೬. ತಾನು ಗರ್ಭದಿಂದ ಹೊರಗೆ ಬರುವಾಗ ತಂದೆತಾಯಿಗಳು ದೈಹಿಕ ಮಾನಸಿಕಗಳಾದ ಯಾವ ದುಃಖಗಳನ್ನು ಅನುಭವಿಸುತ್ತಾರೋ ಅದಕ್ಕೆ ನೂರುವರ್ಷ ಅವರ ಸೇವೆಮಾಡಿದರೂ ಸರಿಯಾದ ಪರಿಹಾರವಾಗುವುದಿಲ್ಲ.

೧೯೭. ಆಚಾರ್ಯನಿಗೂ, ತಾಯಿತಂದೆಗಳಿಗೂ ನಿತ್ಯವೂ ಪ್ರಿಯವನ್ನೇ ಮಾಡಬೇಕು. ಆ ಮೂವರೂ ತೃಪ್ತರಾದರೆ ಸಮಸ್ತ ತಪಸ್ಸುಗಳೂ ಸಿದ್ಧಿಯಾದಂತೆಯೇ ಸರಿ.

**ತೇಷಾಂ ತ್ರಯಾಣಾಂ ಶುಶ್ರೂಷಾ ಪರಮಂ ತಪ ಉಚ್ಯತೇ ।**
**ನ ತೈರನಭ್ಯನುಜ್ಞಾತೋ ಧರ್ಮಮನ್ಯಂ ಸಮಾಚರೇತ್ ॥ ೧೯೮ ॥**

**ತ ಏವ ಹಿ ತ್ರಯೋ ಲೋಕಾಸ್ತ ಏವ ತ್ರಯ ಆಶ್ರಮಾಃ ।**
**ತ ಏವ ಚ ತ್ರಯೋ ವೇದಾಸ್ತ ಏವೋಕ್ತಾಸ್ತ್ರಯೋಽಗ್ನಯಃ ॥ ೧೯೯ ॥**

**ಮಾತಾ ವೈ ಗಾರ್ಹಪತ್ಯಾಗ್ನಿಃ ಪಿತಾ ವೈ ದಕ್ಷಿಣಃ ಸ್ಮೃತಃ ।**
**ಗುರುರಾಹವನೀಯಶ್ಚ ಸಾಗ್ನಿತ್ರೇತಾ ಗರೀಯಸೀ ॥ ೨೦೦ ॥**

**ತ್ರಿಷು ತುಷ್ಟೇಷು ಚೈತೇಷು ತ್ರೀನ್ಲೋಕಾನ್ ಜಯತೇ ಗೃಹೀ ।**
**ದೀಪ್ಯಮಾನಃ ಸ್ವವಪುಷಾ ದೇವವದ್ದಿವಿ ಮೋದತೇ ॥ ೨೦೧ ॥**

**ಇಮಂ ಲೋಕಂ ತಾತಭಕ್ತ್ಯಾ ಮಾತೃಭಕ್ತ್ಯಾ ತು ಮಧ್ಯಮಂ ।**
**ಗುರುಶುಶ್ರೂಷಯಾ ಚೈವ ಗಚ್ಛೇಚ್ಛಕ್ರಸಲೋಕತಾಂ ॥ ೨೦೨ ॥**

---

೧೯೮. ಆ ಮೂವರನ್ನು ಸೇವಿಸುವುದೇ ಶ್ರೇಷ್ಠವಾದ ತಪಸ್ಸೆಂದು ಹೇಳಿದ್ದಾರೆ. ಅವರ ಸಮ್ಮತಿಯಿಲ್ಲದೆ ಬೇರೇ ಧರ್ಮವನ್ನು ಆಚರಿಸಬಾರದು.

೧೯೯. ಅವರೇ ಮೂರು ಲೋಕಗಳು, ಅವರೇ ಮೂರು ಆಶ್ರಮಗಳು, ಅವರೇ ಮೂರು ವೇದಗಳು, ಅವರೇ ಮೂರು ಅಗ್ನಿಗಳು ಎಂದು ಉಕ್ತವಾಗಿದೆ.

೨೦೦. ತಾಯಿಯು ಗಾರ್ಹಪತ್ಯಾಗ್ನಿಯು, ತಂದೆಯು ದಕ್ಷಿಣಾಗ್ನಿಯು, ಗುರುವು ಆಹವನೀಯಾಗ್ನಿಯು, ಹೀಗೆ ಇವರೇ ಶ್ರೇಷ್ಠವಾದ ತ್ರೇತಾಗ್ನಿಗಳು.

೨೦೧. ಇವರು ಮೂವರೂ ತೃಪ್ತರಾದರೆ ಗೃಹಸ್ಥನು ಮೂರು ಲೋಕಗಳನ್ನೂ ಜಯಿಸುತ್ತಾನೆ. ದಿವ್ಯ ತೇಜಸ್ಸಿನಿಂದ ಬೆಳಗುತ್ತಿರುವ ಶರೀರವುಳ್ಳವನಾಗಿ ಸ್ವರ್ಗದಲ್ಲಿ ದೇವತೆಗಳಂತೆ ಸಂತೋಷವನ್ನು ಅನುಭವಿಸುತ್ತಾನೆ.

೨೦೨. ಪಿತೃಭಕ್ತಿಮಾಡುವುದರಿಂದ ಪ್ರತ್ಯಕ್ಷವಾದ ಈ ಲೋಕಸುಖವನ್ನೂ ಮಾತೃಭಕ್ತಿಯಿಂದ ಮಧ್ಯಮಲೋಕಸುಖವನ್ನೂ ಗುರುಶುಶ್ರೂಷೆಯಿಂದ ಇಂದ್ರಲೋಕವನ್ನೂ ಪಡೆಯುತ್ತಾನೆ.

ಸರ್ವೇ ತೇನಾದೃತಾ ಧರ್ಮಾ ಯಸ್ಯೈತೇ ತ್ರಯ ಆದೃತಾಃ ।
ಅನಾದೃತಾಸ್ತು ಯೇನೈತೇ ಸರ್ವಾಸ್ತಸ್ಯಾಫಲಾಃ ಕ್ರಿಯಾಃ ॥ ೨೦೩ ॥

ಯಾವತ್ರಯಸ್ತೇ ಜೀವೇಯುಸ್ತಾವನ್ನಾನ್ಯತ್ಸಮಾಚರೇತ್ ।
ತೇಷ್ವೇವ ನಿತ್ಯಂ ಶುಶ್ರೂಷಾಂ ಕುರ್ಯಾತ್ಪ್ರಿಯಹಿತೇ ರತಃ ॥ ೨೦೪ ॥

ತೇಷಾಮನುಪರೋಧೇನ ಪವಿತ್ರಂ ಯದ್ಯದಾಚರೇತ್ ।
ತತ್ತನ್ನಿವೇದಯೇತ್ತೇಭ್ಯೋ ಮನೋವಚನಕರ್ಮಭಿಃ ॥ ೨೦೫ ॥

ತ್ರಿಷ್ವೇತೇಷ್ವಿತಿಕೃತ್ಯಂ ಹಿ ಪುರುಷಸ್ಯ ಸಮಾಪ್ಯತೇ ।
ಏಷ ಧರ್ಮಃ ಪರಃ ಸಾಕ್ಷಾತ್ ಉಪಧರ್ಮೋಽನ್ಯ ಉಚ್ಯತೇ ॥ ೨೦೬ ॥

ಶ್ರದ್ಧಧಾನಃ ಶುಭಾಂ ವಿದ್ಯಾಮಾದದೀತಾವರಾದಪಿ ।
ಅಂತ್ಯಾದಪಿ ಪರಂ ಧರ್ಮಂ ಸ್ತ್ರೀರತ್ನಂ ದುಷ್ಕುಲಾದಪಿ ॥ ೨೦೭ ॥

---

೨೦೩. ಯಾವನು ಈ ಮೂರು ಜನರನ್ನೂ ಆದರಿಸುವನೋ, ಅವನು ಎಲ್ಲಾ ಧರ್ಮಗಳನ್ನೂ ಆದರಿಸಿದಂತಾಗುವುದು. ಯಾರು ಇವರನ್ನು ಆದರಿಸುವುದಿಲ್ಲವೋ ಅವರ ಕಾರ್ಯಗಳೆಲ್ಲಾ ನಿಷ್ಫಲಗಳು.

೨೦೪. ಈ ಮೂವರು ಬದುಕಿರುವವರೆಗೂ ಇವರ ಶುಶ್ರೂಷೆಯನ್ನು ಬಿಟ್ಟು ಬೇರೆ ಯಾವುದನ್ನೂ ಮಾಡಬಾರದು. ತನಗೆ ಪ್ರಿಯವೂ ಹಿತವೂ ಆಗಬೇಕೆಂಬ ಅಭಿಲಾಷೆಯುಳ್ಳವನು ಯಾವಾಗಲೂ ಇವರ ಶುಶ್ರೂಷೆಯನ್ನೇ ಮಾಡಬೇಕು.

೨೦೫ ಅವರಿಗೆ ತೊಂದರೆಮಾಡದೆ ತನುಮನಗಳಿಂದಲೂ ಕಾರ್ಯದಿಂದಲೂ, ಪವಿತ್ರವಾದ ಯಾವ ಕೆಲಸವನ್ನು ಮಾಡಬೇಕಾದರೂ ಅದನ್ನು ಅವರಿಗೆ ವಿಜ್ಞಾಪಿಸಬೇಕು.

೨೦೬ ಈ ಮೂವರ ವಿಷಯದಲ್ಲಿಯೂ ಹೀಗೆ ಆಚರಿಸಿದರೆ ಮಾಡಬೇಕಾದ ಕೆಲಸವು ಪೂರ್ಣವಾಗುವುದು. ಇದು ಸಾಕ್ಷಾತ್ ಧರ್ಮವು. ಇನ್ನು ಉಪಧರ್ಮವೆಂಬುದನ್ನು ಹೇಳುತ್ತೇನೆ.

೨೦೭. ಶ್ರದ್ಧೆಯುಳ್ಳವನು ಶುಭಕರವಾದ ವಿದ್ಯೆಯನ್ನು ಶ್ರೇಷ್ಠನಲ್ಲದವನಿಂದಲಾದರೂ ಪಡೆಯಬಹುದು. ಪರಮಧರ್ಮ ವಿಚಾರವನ್ನು ಅಂತ್ಯಜರಿಂದಲಾದರೂ ತಿಳಿಯಬಹುದು. ಸರ್ವಶ್ರೇಷ್ಠಳಾದ ಸ್ತ್ರೀಯನ್ನು ದುಷ್ಕುಲದಿಂದಲಾದರೂ ಗ್ರಹಿಸಬಹುದು.

**ವಿಷಾದಪ್ಯಮೃತಂ ಗ್ರಾಹ್ಯಂ ಬಾಲಾದಪಿ ಸುಭಾಷಿತಂ ।**
**ಅಮಿತ್ರಾದಪಿ ಸದ್ವೃತ್ತಮಮೇಧ್ಯಾದಪಿ ಕಾಂಚನಂ ॥ ೨೦೮ ॥**

**ಸ್ತ್ರಿಯೋ ರತ್ನಂ ನಯೋ ವಿದ್ಯಾ ಧರ್ಮಃ ಶೌಚಂ ಸುಭಾಷಿತಂ ।**
**ವಿವಿಧಾನಿ ಚ ಶಿಲ್ಪಾನಿ ಸಮಾದೇಯಾನಿ ಸರ್ವಶಃ ॥ ೨೦೯ ॥**

**ಅಬ್ರಾಹ್ಮಣಾದಧ್ಯಯನಮಾಪತ್ಕಾಲೇ ವಿಧೀಯತೇ ।**
**ಅನುವ್ರಜ್ಯಾ ಚ ಶುಶ್ರೂಷಾ ಯಾವದಧ್ಯಯನಂ ಗುರೋಃ ॥ ೨೧೦ ॥**

**ನಾಬ್ರಾಹ್ಮಣೇ ಗುರೌ ಶಿಷ್ಯೋ ವಾಸಮಾತ್ಯಂತಿಕಂ ವಸೇತ್ ।**
**ಬ್ರಾಹ್ಮಣೇ ಚಾನನೂಚಾನೇ ಕಾಂಕ್ಷನ್ ಗತಿಮನುತ್ತಮಾಂ ॥ ೨೧೧ ॥**

**ಯದಿ ತ್ವಾತ್ಯಂತಿಕೋ ವಾಸೋ ರೋಚತೇ ಚ ಗುರೋಃ ಕುಲೇ ।**
**ಯುಕ್ತಃ ಪರಿಚರೇದೇನಂ ಆಶರೀರವಿಮೋಕ್ಷಣಾತ್ ॥ ೨೧೨ ॥**

---

೨೦೮. ರೋಗಾದಿಗಳ ನಿವಾರಣದ್ವಾರಾ ತನಗೆ ಸುಖವುಂಟುಮಾಡಿಕೊಳ್ಳುವ (ಅಮೃತ) ಪದಾರ್ಥವನ್ನು ವಿಷದಿಂದಲಾದರೂ ಗ್ರಹಿಸಬಹುದು. ಒಳ್ಳೆಯ ಮಾತನ್ನು ಬಾಲಕನಿಂದಲಾದರೂ ತಿಳಿದುಕೊಳ್ಳಬಹುದು. ಒಳ್ಳೆಯ ನಡತೆಯನ್ನು ಶತ್ರುವಿನಿಂದಲಾದರೂ ಗ್ರಹಿಸಬೇಕು.

೨೦೯. ರತ್ನ, ನೀತಿ, ವಿದ್ಯೆ, ಶುಚಿತ್ವ, ಸುಭಾಷಿತ, ವಿವಿಧವಾದ ಶಿಲ್ಪಗಳು, ಇವುಗಳನ್ನು ಎಲ್ಲಿಂದಲಾದರೂ ಸ್ವೀಕರಿಸಬಹುದು.

೨೧೦. ಅಬ್ರಾಹ್ಮಣನಲ್ಲಿ ಅಧ್ಯಯನ ಮಾಡಬಾರದೆಂದಿದ್ದರೂ ಆಪತ್ಕಾಲದಲ್ಲಿ ಮಾತ್ರ ಮಾಡಬಹುದೆಂದು ಅನುಜ್ಞಾತವಾಗಿವೆ. ವಿದ್ಯಾಭ್ಯಾಸ ಮುಗಿಯುವವರೆಗೂ ಗುರುವು ಹೋದಕಡೆಯೇ ಹೋಗುತ್ತಾ ಶುಶ್ರೂಷೆಮಾಡಬೇಕು.

೨೧೧. ಬ್ರಾಹ್ಮಣನಲ್ಲದ ಗುರುವಿನಬಳಿ ಶಿಷ್ಯನು ಸ್ಥಿರವಾಗಿ ನಿಲ್ಲಬಾರದು. ಸದ್ಗತಿಯನ್ನು ಪಡೆಯಬೇಕೆಂಬ ಶಿಷ್ಯನು ವಂಶಾನುಕ್ರಮವಾಗಿ ಬಂದ ಬ್ರಾಹ್ಮಣ ಗುರುವಿನ ಸಮೀಪದಲ್ಲಿ ಇರಬಹುದು.

೨೧೨. ಗುರುಕುಲದಲ್ಲಿ ಯಾವಾಗಲೂ ವಾಸಿಸುವುದು ಮನಸ್ಸಿಗೆ ಒಗ್ಗುವುದಾದರೆ ಗುರುವಿನ ಮನೆಯಲ್ಲೇ ಸೇರಿ ತನ್ನ ದೇಹಾವಸಾನ ಪರ್ಯಂತ ನ್ಯಾಯವಾದ ರೀತಿಯಲ್ಲಿ ಸೇವೆಮಾಡಬೇಕು.

ಆ ಸಮಾಪ್ತೇಃ ಶರೀರಸ್ಯ ಯಸ್ತು ಶುಶ್ರೂಷತೇ ಗುರುಂ ।
ಸ ಗಚ್ಛತ್ಯಂಜಸಾ ವಿಪ್ರೋ ಬ್ರಹ್ಮಣಃ ಸದ್ಮ ಶಾಶ್ವತಂ ॥ ೨೧೩ ॥

ನ ಪೂರ್ವಂ ಗುರವೇ ಕಿಂಚಿದುಪಕುರ್ವೀತ ಧರ್ಮವಿತ್ ।
ಸ್ನಾನಾಯ ಗುರುಣಾಜ್ಞಪ್ತಃ ಶಕ್ತ್ಯಾ ಗುರ್ವರ್ಥಮಾಹರೇತ್ ॥ ೨೧೪ ॥

ಕ್ಷೇತ್ರಂ ಹಿರಣ್ಯಂ ಗಾಮಶ್ವಂ ಛತ್ರೋಪಾನಹಮೇವ ಚ ।
ಧಾನ್ಯಂ ವಾಸಾಂಸಿ ಶಾಕಂ ವಾ ಗುರವೇ ಪ್ರೀತಮಾಹರೇತ್ ॥ ೨೧೫ ॥

ಸ್ವರ್ಗತೇ ಗಾಂ ಪರಿತ್ಯಜ್ಯ ಗುರೌ ಭರತಸತ್ತಮ ।
ಗುಣಾನ್ವಿತೇ ಗುರುಸುತೇ ಗುರುದಾರೇಽಥವಾ ನೃಪ ॥
ಸಪಿಂಡೇ ವಾ ಗುರೋಶ್ಚಾಪಿ ಗುರುವದ್ವೃತ್ತಿಮಾಚರೇತ್ ॥ ೨೧೬ ॥

---

೨೧೩. ಹೀಗೆ ಶರೀರಾವಸಾನಪರ್ಯಂತ ಯಾವನು ಗುರುಶುಶ್ರೂಷೆ ಮಾಡುವನೋ, ಅಂತಹ ಬ್ರಾಹ್ಮಣನು ಶಾಶ್ವತವಾದ ಬ್ರಹ್ಮಲೋಕ ವಾಸವನ್ನು ಜಾಗ್ರತೆಯಾಗಿ ಪಡೆಯುತ್ತಾನೆ.

೨೧೪. ಧರ್ಮವನ್ನು ತಿಳಿದವನು ಗುರುವು ಹೇಳುವುದಕ್ಕಿಂತ ಮುಂಚೆ ಯಾವ ಉಪಕಾರವನ್ನೂ ಮಾಡಬಾರದು. 'ಸ್ನಾತಕನಾಗು' ಎಂದು ಗುರು ಅಪ್ಪಣೆಯನ್ನು ಕೊಟ್ಟರೆ ಆಗ ದಕ್ಷಿಣಾದ್ರವ್ಯವಗಳನ್ನು ಶಕ್ತ್ಯನುಸಾರ ಗುರುವಿಗೆ ತಂದುಕೊಡಬೇಕು.

೨೧೫. ಗುರುಗಳಿಗೆ ಇಷ್ಟವಾದ ಕ್ಷೇತ್ರವನ್ನು ಸಂಪಾದಿಸಿಕೊಡಬೇಕು. ದನ, ಹಸು, ಕುದುರೆ, ಛತ್ರಿ, ಪಾದರಕ್ಷೆ, ದವಸ, ವಸ್ತ್ರಗಳು, ಕಾಯಿಪಲ್ಯ ಇವುಗಳಲ್ಲಿ ಅವರಿಗೆ ಪ್ರೀತಿಕರವಾದವುಗಳನ್ನು ತಂದುಕೊಡಬೇಕು.

೨೧೬. ಅಯ್ಯಾ ರಾಜಶ್ರೇಷ್ಠನೇ ! ಗುರುವು ಭೂಲೋಕವನ್ನು ತ್ಯಜಿಸಿ ಸ್ವರ್ಗಕ್ಕೆ ಹೋಗಲಾಗಿ ಗುಣವಂತನಾದ ಗುರುಪುತ್ರನಲ್ಲಿಯೂ, ಗುಣವತಿಯಾದ ಗುರುಪತ್ನಿಯಲ್ಲಿಯೂ, ಗುರುವಿನ ಸಮೀಪಜ್ಞಾತಿಗಳಲ್ಲಿಯೂ ಗುರುವಿನಲ್ಲಿ ಹೇಗೋ ಹಾಗೆಯೇ ಮರ್ಯಾದೆಯಿಂದ ನಡೆದುಕೊಳ್ಳಬೇಕು.

ಏತೇಷ್ವವಿದ್ಯಮಾನೇಷು ಸ್ಥಾನಾಸನವಿಹಾರವಾನ್ ।
ಪ್ರಯುಂಜಾನೋಽಗ್ನಿ ಶುಶ್ರೂಷಾಂ ಸಾಧಯೇದ್ದೇಹಮಾತ್ಮನಃ ॥ ೨೧೭ ॥

ವೀರಸ್ಯ ಕುರ್ವನ್ ಶುಶ್ರೂಷಾಂ ಯಾತಿ ವೀರಸಲೋಕತಾಂ ।
ಚರತ್ಯೇವಂ ಹಿ ಯೋ ವಿಪ್ರೋ ಬ್ರಹ್ಮಚರ್ಯಮವಿಪ್ಲುತಃ ।
ಸ ಗತ್ವಾ ಬ್ರಹ್ಮಸದನಂ ಬ್ರಹ್ಮಣಾ ಸಹ ಮೋದತೇ ॥ ೨೧೮ ॥

ಇತ್ಯೇಷ ಕಥಿತೋ ಧರ್ಮಃ ಪ್ರಥಮಂ ಬ್ರಹ್ಮಚಾರಿಣಃ ।
ಗೃಹಸ್ಥಸ್ಯಾಪಿ ರಾಜೇಂದ್ರ ಶೃಣು ಧರ್ಮಮಶೇಷತಃ ॥ ೨೧೯ ॥

ಕಾಲೇ ಪ್ರಾಪ್ಯ ವ್ರತಂ ವಿಪ್ರ ಋತುಯೋಗೇನ ಭಾರತ ।
ಪ್ರಪಾಲಯನ್ ವ್ರತಂ ಯಾತಿ ಬ್ರಹ್ಮಸಾಲೋಕ್ಯತಾಂ ವಿಭೋ ॥ ೨೨೦ ॥

---

೨೧೭. ಗುರುವಿನ ಪತ್ನಿ, ಪುತ್ರ ಇವರು ಯಾರೂ ಇಲ್ಲದೆ ಗುರುವು ಸ್ವರ್ಗಸ್ಥನಾದರೆ ಶಿಷ್ಯನು ತಾನು ಗುರುವಿನ ಮನೆ ಮುಂತಾದುವನ್ನು ನೋಡಿಕೊಳ್ಳುತ್ತಾ ಅಗ್ನಿಶುಶ್ರೂಷೆಯನ್ನು ಮಾಡುತ್ತಾ ತನ್ನ ದೇಹವನ್ನು ಸಾರ್ಥಕಪಡಿಸಿಕೊಳ್ಳಬೇಕು.

೨೧೮. ವೀರ ಎಂದರೆ ಅಗ್ನಿಯನ್ನು ಶುಶ್ರೂಷೆಮಾಡಿದವನು ಅಗ್ನಿಸಾಲೋಕ್ಯವನ್ನು ಪಡೆಯುವನು. ಯಾವನು ಈರೀತಿ ಅವಿಚ್ಛಿನ್ನವಾಗಿ ಬ್ರಹ್ಮಚರ್ಯವನ್ನು ಪಾಲಿಸುವನೋ ಅವನು ಬ್ರಹ್ಮಲೋಕವನ್ನು ಸೇರಿ ಬ್ರಹ್ಮನೊಡನೆ ಆನಂದಿಸುತ್ತಾನೆ.

೨೧೯. ಈರೀತಿ ಪ್ರಾರಂಭದಲ್ಲಿ ಬ್ರಹ್ಮಚರ್ಯಾಶ್ರಮಧರ್ಮವನ್ನು ಹೇಳಲಾಯಿತು. ಅಯ್ಯಾ ರಾಜನೇ! ಗೃಹಸ್ಥನ ಧರ್ಮವೇನೆಂಬುದನ್ನು ಸಮಗ್ರವಾಗಿ ತಿಳಿದುಕೊ.

೨೨೦. ಎಲೈ ಭರತಕುಲಶ್ರೇಷ್ಠನೇ! ಆಯಾ ಋತುವಿಗೆ ಅನುಸಾರವಾಗಿ ಸರಿಯಾದ ಕಾಲಗಳಲ್ಲಿ ವ್ರತಗಳನ್ನು ಪ್ರಾರಂಭಿಸಿ ಅದನ್ನು ಪಾಲಿಸುವ ಬ್ರಾಹ್ಮಣನು ಬ್ರಹ್ಮಲೋಕಕ್ಕೆ ಹೋಗುತ್ತಾನೆ.

ಸದೋಪನಯನಂ ಶಸ್ತಂ ವಸಂತೇ ಬ್ರಾಹ್ಮಣಸ್ಯ ತು ।
ಕ್ಷತ್ರಿಯಸ್ಯ ತತೋ ಗ್ರೀಷ್ಮೇ ಪ್ರಶಸ್ತಂ ಮನುಬ್ರವೀತ್ ॥ ೨೨೧ ॥

ಪ್ರಾಪ್ತೇ ಶರದಿ ವೈಶ್ಯಸ್ಯ ಸದೋಪನಯನಂ ಪರಂ ।
ಇತ್ಯೇಷ ತ್ರಿವಿಧಃ ಕಾಲಃ ಕಥಿತೋ ವ್ರತಯೋಜನೇ ॥ ೨೨೨ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಉಪನಯನ ವಿಧಿ ವರ್ಣನಂ ನಾಮ ಚತುರ್ಥೋಽಧ್ಯಾಯಃ



---

೨೨೧. ಬ್ರಾಹ್ಮಣನಿಗೆ ವಸಂತಋತುವಿನಲ್ಲಿ ಉಪನಯನ ಮಾಡುವುದು ಯಾವಾಗಲೂ ಶ್ರೇಷ್ಠ. ಕ್ಷತ್ರಿಯನಿಗೆ ಗ್ರೀಷ್ಮಋತುವಿನಲ್ಲಿ ಉಪನಯನ ಮಾಡುವುದು ಶ್ರೇಷ್ಠ ಎಂಬದಾಗಿ ಮನುವು ಹೇಳಿದ್ದಾನೆ.

೨೨೨. ವೈಶ್ಯನಿಗೆ ಯಾವಾಗಲೂ ಶರದೃತುವಿನಲ್ಲಿ ಉಪನಯನ ಮಾಡುವುದು ಪ್ರಶಸ್ತವೆಂದು ಹೇಳಿದೆ. ಈರೀತಿ ಉಪನಯನ ವ್ರತಯೋಜನೆಗೆ ಅರ್ಹವಾದ ಕಾಲವು ಮೂರು ಬಗೆಯಾಗಿ ಹೇಳಲ್ಪಟ್ಟಿದೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಉಪನಯನವಿಧಿ ವರ್ಣನೆಯೆಂಬ ನಾಲ್ಕನೆಯ ಅಧ್ಯಾಯವು ಮುಗಿದಿದೆ.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಪಂಚಮೋಽಧ್ಯಾಯಃ

॥ ಸುಮಂತುರುವಾಚ ॥

ಷಟ್‌ತ್ರಿಂಶದಾಬ್ದಿಕಂ ಚರ್ಯಂ ಗುರೌ ತ್ರೈವೇದಿಕಂ ವ್ರತಂ ।
ತದರ್ಧಿಕಂ ಪಾದಿಕಂ ವಾ ಗ್ರಹಣಾಂತಿಕಮೇವ ಚ ॥ ೧ ॥

ವೇದಾನಧೀತ್ಯ ವೇದೌ ವಾ ವೇದಂ ವಾ ಪಿ ನೃಪೋತ್ತಮ ।
ಅವಿಪ್ಲುತಬ್ರಹ್ಮಚರ್ಯೋ ಗೃಹಸ್ಥಾಶ್ರಮಮಾವಸೇತ್ ॥ ೨ ॥

---

## ಐದನೆಯ ಅಧ್ಯಾಯವು

೧. ಸುಮಂತು ಮುನಿವರ್ಯರು ಹೇಳುತ್ತಾರೆ—ಗುರುಕುಲದಲ್ಲಿ ವೇದತ್ರಯವನ್ನು ಅಧ್ಯಯನಮಾಡಿ ಮುಗಿಸಬೇಕಾದರೆ ಒಂದೊಂದು ವೇದವನ್ನು ಮುಗಿಸಲು ಹನ್ನೆರಡು ವರ್ಷದಂತೆ ಮೂವತ್ತಾರುವರ್ಷ ತೆಗೆದುಕೊಳ್ಳಬಹುದು. ಈ ಕ್ಲ್ಪಪ್ತ ಕಾಲದ ಅರ್ಧಭಾಗ ಎಂದರೆ ಹದಿನೆಂಟುವರ್ಷದಲ್ಲೇ ಮುಗಿಸುವುದಾದರೆ ಆ ಪರ್ಯಂತವೂ, ಕ್ಲ್ಪಪ್ತಕಾಲದ ಕಾಲುಭಾಗದಲ್ಲಿ ಎಂದರೆ ಒಂಬತ್ತು ವರ್ಷದಲ್ಲೇ ಮುಗಿಸುವುದಾದರೆ ಆಪರ್ಯಂತವೂ, ಅಥವಾ ಆಯಾ ವೇದವನ್ನು ಗ್ರಹಿಸಿ ಪೂರೈಸುವವರೆಗಾದರೂ, ವ್ರತಾಚರಣೆ ಮಾಡಬಹುದು.

೨. ಓ ರಾಜನೇ! ಬ್ರಹ್ಮಚರ್ಯವ್ರತಕ್ಕೆ ಲೋಪವಿಲ್ಲವೆ ನಡೆಯುತ್ತಾ ಮೂರು ವೇದಗಳನ್ನೋ; ಎರಡು ವೇದಗಳನ್ನೋ ಅಥವಾ ಒಂದೇ ವೇದವನ್ನೋ, ಅಧ್ಯಯನ ಮಾಡಿ ಅನಂತರ ಗೃಹಸ್ಥಾಶ್ರಮಿಯಾಗಬೇಕು.

ತಂ ಪ್ರತೀತಂ ಸ್ವಧರ್ಮೇಣ ಬ್ರಹ್ಮದಾಯಹರಂ ಪಿತುಃ ।
ಸ್ರಗ್ವಿಣಂ ತಪ ಆಸೀನಂ ಅರ್ಹಯೇತ್ ಪ್ರಥಮಂ ಗವಾ ॥ ೩ ॥

ಗುರುಣಾ ಸಮನುಜ್ಞಾತಃ ಸಮಾವೃತ್ತೋ ಯಥಾವಿಧಿ ।
ಉದ್ವಹೇತ ದ್ವಿಜೋ ಭಾರ್ಯಾಂ ಸವರ್ಣಾಂ ಲಕ್ಷಣಾನ್ವಿತಾಂ ॥ ೪ ॥

॥ ಶತಾನೀಕ ಉವಾಚ ॥

ಲಕ್ಷಣಂ ದ್ವಿಜಶಾರ್ದೂಲ ಸ್ತ್ರೀಣಾಂ ವದ ಮಹಾಮುನೇ ।
ಕೀದೃಗ್ಲಕ್ಷಣಸಂಯುಕ್ತಾ ಕನ್ಯಾ ಸ್ಯಾತ್ಸುಖದಾ ನೃಪ ॥ ೫ ॥

॥ ಸುಮಂತುರುವಾಚ ॥

ಯದುಕ್ತಂ ಬ್ರಹ್ಮಣಾ ಪೂರ್ವಂ ಸ್ತ್ರೀಲಕ್ಷಣಮನುತ್ತಮಮ್ ।
ಶ್ರೇಯಸೇ ಸರ್ವಲೋಕಾನಾಂ ಶುಭಾಶುಭಫಲಪ್ರದಂ ॥ ೬ ॥

---

೩. ವಿದ್ಯಾಭ್ಯಾಸ ಮುಗಿದಮೇಲೆ ಸ್ವಧರ್ಮಾಚರಣೆ ಮಾಡುವವನೆಂದು ಪ್ರಸಿದ್ಧನೂ, ತಂದೆಯಿಂದ ಜ್ಞಾನವೆಂಬ ದಾಯಭಾಗವನ್ನು (ಬ್ರಹ್ಮೋಪದೇಶವನ್ನು) ಪಡೆದವನೂ, ಸ್ರಕ್‌ಧಾರಣವೆಂಬ ಸ್ನಾತಕ ವ್ರತವನ್ನು ಆಚರಿಸಿದವನೂ, ಕಡೆಗೆ ತಪಸ್ಸಿಗೆ ಕೂತಿರುವವನೂ ಆದ ಗುರುಸಮೀಪವನ್ನು ಸೇರಿ ಮೊದಲು ಗೋಸಮರ್ಪಣೆ ಮಾಡಿ ಪೂಜಿಸಬೇಕು.

೪ ಗುರುವಿನಿಂದ ಅನುಜ್ಞೆಪಡೆದ ಆ ದ್ವಿಜನು ಶಾಸ್ತ್ರೋಕ್ತರೀತಿಯಲ್ಲಿ ಗುರುಕುಲದಿಂದ ಹಿಂದಿರುಗಿ ಬಂದು ಯಥೋಕ್ತಲಕ್ಷಣಗಳಿಂದ ಕೂಡಿದ ಕನ್ಯೆಯನ್ನು ವಿವಾಹಮಾಡಿಕೊಳ್ಳಬೇಕು.

೫. ಶತಾನೀಕ ಮಹಾರಾಜನು ಕೇಳುತ್ತಾನೆ—"ಬ್ರಾಹ್ಮಣಶ್ರೇಷ್ಠನಾದ ಮುನಿವರ್ಯನೇ! ಸ್ತ್ರೀಯರಿಗಿರಬೇಕಾದ ಲಕ್ಷಣಗಳು ಆವುವು? ಯಾವ ಲಕ್ಷಣವುಳ್ಳ ಕನ್ಯೆಯು ಸುಖವನ್ನು ಕೊಡುವಳು? ಅವನ್ನು ನನಗೆ ತಿಳಿಸು" ಎಂದನು.

೬-೭. ಸುಮಂತು ಮುನಿವರ್ಯರು ಹೇಳುತ್ತಾರೆ—ಅಯ್ಯಾ ರಾಜನೇ! ಸ್ತ್ರೀಯರ ಶುಭಾಶುಭ ಫಲಗಳನ್ನು ಕೊಡುವ ಲಕ್ಷಣವನ್ನು ಸಮಸ್ತಲೋಕಗಳ ಶ್ರೇಯಸ್ಸಿ

ತತ್ತೇ ವಚ್ಮಿ ಮಹಾಬಾಹೋ ಶೃಣುಷ್ವೈಕಮನಾ ನೃಪ ।
ಶ್ರುತೇನ ಯೇನ ಜಾನೀಷೇ ಕನ್ಯಾಂ ಶೋಭನಲಕ್ಷಣಾಂ ॥ ೭ ॥

ಸುಖಾಸೀನಂ ಸುರಶ್ರೇಷ್ಠಮಭಿಗಮ್ಯ ಮಹರ್ಷಯಃ ।
ಪಪ್ರಚ್ಛುರ್ಲಕ್ಷಣಂ ಸ್ತ್ರೀಣಾಂ ಯತ್ಪೃಷ್ಟೋಽಹಂ ತ್ವಯಾಽಧುನಾ ॥ ೮ ॥

ಪ್ರಣಮ್ಯ ಶಿರಸಾ ದೇವಮಿದಂ ವಚನಮಬ್ರುವನ್ ।
ಭಗವನ್‌ಬ್ರೂಹಿ ನಃ ಸರ್ವಂ ಸ್ತ್ರೀಣಾಂ ಲಕ್ಷಣಮುತ್ತಮಂ ॥ ೯ ॥

ಶ್ರೇಯಸೇ ಸರ್ವಲೋಕಾನಾಂ ಶುಭಾಶುಭಫಲಪ್ರದಂ ।
ಪ್ರಶಸ್ತಾಮಪ್ರಶಸ್ತಾಂ ಚ ಜಾನೀಮೋ ಯೇನ ಕನ್ಯಕಾಂ ॥ ೧೦ ॥

ತೇಷಾಂ ತದ್ವಚನಂ ಶ್ರುತ್ವಾ ವಿರಿಂಚೋ ವಾಕ್ಯಮಬ್ರವೀತ್ ।
ಶೃಣುಧ್ವಂ ದ್ವಿಜಶಾರ್ದೂಲಾ ವಚ್ಮಿ ಯುಷ್ಮಾಸ್ವಶೇಷತಃ ॥ ೧೧ ॥

---

ಗಾಗಿ ಬ್ರಹ್ಮನು ಪೂರ್ವದಲ್ಲಿ ಹೇಳಿದ್ದ ರೀತಿಯಲ್ಲಿಯೇ ಈಗ ನಾನು ನಿನಗೆ ಹೇಳು ತ್ತೇನೆ. ಸ್ಥಿರಚಿತ್ತದಿಂದ ಕೇಳು. ಇದನ್ನು ಕೇಳಿದರೆ ಕನ್ಯೆಯು ಶೋಭನ ಲಕ್ಷಣ ವುಳ್ಳವಳೇ? ಅಥವಾ ಅಲ್ಲವೇ ಎಂಬುದು ನಿನಗೆ ಗೊತ್ತಾಗುವುದು.

೮. ಒಂದಾನೊಂದು ಕಾಲದಲ್ಲಿ ಮಹರ್ಷಿಗಳು ಬ್ರಹ್ಮಲೋಕಕ್ಕೆ ಹೋಗಿ ಸುಖವಾಗಿ ಕುಳಿತಿರುವ ಬ್ರಹ್ಮನಿಗೆ ಉದ್ದಕ್ಕೆ ಅಡ್ಡಬಿದ್ದು ನೀನು ಈಗ ನನ್ನನ್ನು ಪ್ರಶ್ನಿಸಿದ ರೀತಿಯಲ್ಲಿಯೇ ಅವನನ್ನು ಈರೀತಿ ಕೇಳಿದರು.

೯–೧೦. "ಪೂಜ್ಯನಾದ ಪಿತಾಮಹನೇ! ಸರ್ವಲೋಕಕ್ಕೂ ಶ್ರೇಯಸ್ಕರವೂ, ಉತ್ತಮವೂ, ಮಾನವನಿಗೆ ಶುಭಾಶುಭ ಫಲಪ್ರಾಪ್ತಿಗೆ ಕಾರಣವೂ ಆದ ಸ್ತ್ರೀಲಕ್ಷಣ ವನ್ನು ನಮಗೆ ತಿಳಿಸು. ಅದರ ತಿಳಿವಳಿಕೆಯಿಂದ ಕನ್ಯೆ ಪ್ರಶಸ್ತಳೋ, ಅಪ್ರಶಸ್ತಳೋ ಎಂಬುದು ಗೊತ್ತಾಗಬಹುದು" ಎಂದು ಕೇಳಿದರು.

೧೧. ಬ್ರಹ್ಮನು ಅವರ ಪ್ರಾರ್ಥನೆಯನ್ನು ಲಾಲಿಸಿ, "ಎಲೈ ಬ್ರಾಹ್ಮಣೋತ್ತ ಮರೇ! ಆ ವಿಚಾರವನ್ನು ನಿಮಗೆ ಸಮಗ್ರವಾಗಿ ಹೇಳುತ್ತೇನೆ ಕೇಳಿರಿ" ಎಂದು ಹೇಳತೊಡಗಿದನು.

**ಪ್ರತಿಷ್ಠಿತತಲೌ ಸಮ್ಯಕ್ ರಕ್ತಾಂಭೋಜಸಮಪ್ರಭೌ ।**
**ಈದೃಶೌ ಚರಣೌ ಧನ್ಯೌ ಯೋಷಿತಾಂ ಭೋಗವರ್ಧನೌ ॥ ೧೨ ॥**

**ಕರಾಲೈರತಿನಿರ್ಮಾಂಸೈ ರೂಕ್ಷೈರರ್ಧಶಿರಾನ್ವಿತೈಃ ।**
**ದ್ದಾರಿದ್ರ್ಯಂ ದುರ್ಭಗತ್ವಂ ಚ ಪ್ರಾಪ್ನುವಂತಿ ನ ಸಂಶಯಃ ॥ ೧೩ ॥**

**ಅಂಗುಲ್ಯಃ ಸಂಹತಾ ವೃತ್ತಾಃ ಸ್ನಿಗ್ಧಾಃ ಸೂಕ್ಷ್ಮನಖಾಸ್ತಥಾ ।**
**ಕುರ್ವಂತ್ಯತ್ಯಂತಮೈಶ್ವರ್ಯಂ ರಾಜಭಾವಂ ಚ ಯೋಷಿತಃ ॥ ೧೪ ॥**

**ಹ್ರಸ್ವಾಃ ಸುಜೀವಿತಂ ಹ್ರಸ್ವಾ ವಿರಲಾ ವಿತ್ತಹಾನಯೇ ।**
**ದಾರಿದ್ರ್ಯಂ ಮೂಲಮಗ್ನಾಸು ಪ್ರೇಷ್ಯಂ ಚ ಪೃಥುಲಾಸು ಚ ॥ ೧೫ ॥**

---

೧೨. ಯಾವ ಸ್ತ್ರೀಯ ಪಾದಗಳೆರಡೂ ಕೆಂದಾವರೆಯಂತೆ ಪ್ರಕಾಶಿಸುತ್ತಿರುವುವೋ ಅಂಥ ಪಾದಗಳನ್ನು ಕನ್ಯೆಗೆ ನಿರ್ಮಾಣಮಾಡಿದ್ದು ಸಾರ್ಥಕಗಳಾಗಿ ಸುಖವನ್ನು ಹೆಚ್ಚಿಸತಕ್ಕವಾಗುತ್ತವೆ.

೧೩. ಯಾರ ಕಾಲುಗಳು ಕಪ್ಪಾಗಿ ಮಾಂಸಪುಷ್ಟಿಯಿಲ್ಲದೆ ನೋಡುವುದಕ್ಕೆ ಹಿತಕರಗಳಲ್ಲದೆ ನರಗಳು ಅರ್ಧ ಎದ್ದು ಕಾಣುವುವೋ ಅಂಥವರು ಅವಲಕ್ಷಣ ಮತ್ತು ಬಡತನ ಇವನ್ನು ಹೊಂದುವರೆಂಬುದಕ್ಕೆ ಸಂಶಯವಿಲ್ಲ.

೧೪. ಕೈಬೆರಳುಗಳು ಸಂದು ಇಲ್ಲದಂತೆ ಒಟ್ಟುಗೂಡಿದವುಗಳೂ, ದುಂಡಾದುವೂ, ಮಿಂಚುತ್ತಿರುವುವೂ, ಸಣ್ಣ ಉಗುರುಗಳುಳ್ಳವೂ ಆಗಿರುವ ಸ್ತ್ರೀಯರು ಪತಿಗಳಿಗೆ ಹೆಚ್ಚಾಗಿ ಅಧಿಕಾರವನ್ನೂ ಐಶ್ವರ್ಯವನ್ನೂ ರಾಜಭಾವವನ್ನೂ ಉಂಟುಮಾಡಲು ಕಾರಣರಾಗುತ್ತಾರೆ.

೧೫. ಬೆರಳು ಮೋಟಾಗಿದ್ದರೆ ಅವರಿಗೆ ಸುಖಜೀವನವನ್ನುಂಟುಮಾಡುತ್ತವೆ. ಬೆರಳು ಮೋಟಾಗಿಯೂ ಸೇರಿಸಿದಾಗ ಸಂದು ಬಿಡುವದಾಗಿಯೂ ಇದ್ದರೆ ದ್ರವ್ಯನಾಶಕರಗಳು. ಬುಡದಲ್ಲೇ ಮುಳುಗಿದಂತಿದ್ದರೆ ಬಡತನವನ್ನು ಕೊಡುವುವು. ದಪ್ಪನಾಗಿದ್ದರೆ ಪತಿಗೆ ಭೃತ್ಯಭಾವವನ್ನುಂಟುಮಾಡುತ್ತವೆ.

ಪರಸ್ಪರ ಸಮಾರೂಢೈಸ್ತನುಭಿರ್ವೃತ್ತಪರ್ವಭಿಃ ।
ಬಹೂನಪಿ ಪತೀನ್ ಹತ್ವಾ ದಾಸೀ ಭವತಿ ವೈ ದ್ವಿಜಾಃ ॥ ೧೬ ॥

ಅಂಗುಷ್ಠೋನ್ನತಪರ್ವಾಣಃ ತುಂಗಾಗ್ರಾಃ ಕೋಮಲಾನ್ವಿತಾ ।
ರಕ್ತೈಕಾಂಚನಲಾಭಾಯ ವಿಪರೀತಾ ವಿಪತ್ತಯೇ ॥ ೧೭ ॥

ಸುಭಗತ್ವಂ ನಖೈಃ ಸ್ನಿಗ್ಧೈರಾತಾಮ್ರೈಶ್ಚ ಧನಾಢ್ಯತಾ ।
ಪುತ್ರಾಸ್ಸ್ಯುರುನ್ನತೈರೇಭಿಃ ಸುಸೂಕ್ಷ್ಮೈಶ್ಚಾಪಿ ರಾಜತಾ ॥ ೧೮ ॥

ಪಾಂಡುರೈಃ ಸ್ಫುಟಿತೈ ರೂಕ್ಷೈರ್ನೀಲೈರ್ಧೂಮ್ರೈಸ್ತಥಾ ಖರೈಃ ।
ನಿಃಸ್ವತಾ ಭವತಿ ಸ್ತ್ರೀಣಾಂ ಪೀತೈಶ್ಚಾಭಕ್ಷ್ಯಭಕ್ಷಣಂ ॥ ೧೯ ॥

ಗುಲ್ಫಾಃ ಸ್ನಿಗ್ಧಾಶ್ಚ ವೃತ್ತಾಶ್ಚ ಸಮಾರೂಢಶಿರಾಸ್ತಥಾ ।
ಯದಿ ಸ್ಯುರ್ನೂಪುರಾನ್ಬಧ್ಯಬಾಂಧವಾದ್ಯಾಂಶ್ಚ ಪ್ರಾಪ್ನುಯುಃ ॥ ೨೦ ॥

---

೧೬. ಬೆರಳುಗಳು ಒಂದರಮೇಲೊಂದು ಏರಿಕೊಂಡು (ಒಂದನ್ನೊಂದು ಹೊತ್ತುಕೊಂಡು) ಸಣ್ಣನಾಗಿಯೂ, ದುಂಡಾಗಿಯೂ ಇರುವ ಗಿಣ್ಣುಳ್ಳವಳಾಗಿದ್ದರೆ ಅಂಥವಳು ಅನೇಕ ಪತಿಗಳನ್ನು ಕೊಂದುಹಾಕಿ ಸೇವಕಿಯಾಗಿ ಬಾಳುತ್ತಾಳೆ.

೧೭. ಯಾರ ಹೆಬ್ಬೆರಳಗಿಣ್ಣು ಉಬ್ಬಿಕೊಂಡು ಉಳಿದ ಬೆರಳುಗಳ ತುದಿಗಳು ಎತ್ತರವೂ ಮೃದುವೂ ಆಗಿ ಇರುವುವೋ ಅಂಥವಳ ಪತಿಗೆ ರತ್ನ, ಚಿನ್ನ ಇವು ಲಭ್ಯವಾಗುವುವು. ಇದಕ್ಕೆ ವಿರುದ್ಧವಾದ ಲಕ್ಷಣವಿದ್ದರೆ ವಿಪತ್ತಿಗೆ ಕಾರಣವಾಗುತ್ತದೆ.

೧೮. ಉಗುರುಗಳು ಮಿಂಚುವ ಬಣ್ಣವುಳ್ಳವುಗಳಾಗಿದ್ದರೆ ಸೌಭಾಗ್ಯಕರ, ವಿಶೇಷ ಕೆಂಪಾಗಿದ್ದರೆ ಧನಿಕತೆಯುಂಟು ಬೆರಳು ಎತ್ತರವಾಗಿದ್ದರೆ ಪುತ್ರಪ್ರದಗಳಾಗುವುವು. ಅಷ್ಟು ದಪ್ಪವಿಲ್ಲದೆ ಸೂಕ್ಷ್ಮವಾಗಿದ್ದರೆ ಪತಿಗೆ ರಾಜಭಾವವುಂಟಾಗುತ್ತದೆ.

೧೯. ಉಗುರು ಬಿಳಿಚಿಕೊಂಡೋ, ಬಿರುಕುಬಿಟ್ಟವಾಗಿಯೋ, ಒರಟಾಗಿಯೋ ಕಪ್ಪಗೋ, ಕೆಂಪು ಮಿಶ್ರವಾದ ಬಣ್ಣವುಳ್ಳವಾಗಿಯೋ, ಅತಿ ಉದ್ದವುಳ್ಳವುಗಳಾಗಿಯೋ ಇದ್ದರೆ ತಿನ್ನಬಾರದುದನ್ನು ತಿನ್ನುವ ಅವಸ್ಥೆಯುಂಟಾಗುತ್ತದೆ.

೨೦. ಯಾವ ಸ್ತ್ರೀಯ ಕಾಲಿನಹರಡು ಮಿಂಚುತ್ತಾ ದುಂಡಾಗಿ ನರಗಳು ಉಬ್ಬಿಕೊಂಡಿದ್ದು ಕಾಲುಸರ ಧರಿಸಿಕೊಂಡಿದ್ದರೆ ಅಂಥವರಿಗೆ ಅನೇಕ ಬಂಧುಗಳು ಆಗುವರು.

ಅಶಿರಾಃ ಶರಕಾಂಡಾಭಾಃ ಸುವೃತ್ತಾಲ್ಪತನೂರುಹಾಃ ।
ಜಂಘಾ ಕುರ್ವಂತಿ ಸೌಭಾಗ್ಯಂ ಯಾನಂ ಚ ಗಜವಾಜಿಭಿಃ ॥ ೨೧ ॥

ಕ್ಲಿಶ್ಯತೇ ರೋಮಜಂಘಾಸ್ತ್ರೀ ಭ್ರಮತ್ಯುದ್ಧತಪಿಂಡಿಕಾ ।
ಕಾಕಜಂಘಾ ಪತಿಂ ಹಂತಿ ವಾಚಾಟಾ ಕಪಿಲಾ ಚ ಯಾ ॥ ೨೨ ॥

ಜಾನುಭಿಶ್ಚೈವ ಮಾರ್ಜಾರಸಿಂಹಜಾನ್ವನುಕಾರಿಭಿಃ ।
ಶ್ರಿಯಮಾಪ್ಯ ಸುಭಾಗ್ಯತ್ವಂ ಪ್ರಾಪ್ನುವಂತಿ ಸುತಾಂಸ್ತಥಾ ॥ ೨೩ ॥

ಘಟಾಭೈರಧ್ವಗಾ ನಾರ್ಯೋ ನಿರ್ಮಾಂಸೈಃ ಕುಲಟಾಃ ಸ್ತ್ರಿಯಃ ।
ಶಿರಾಲೈರಪಿ ಹಿಂಸ್ರಾಃ ಸ್ಯುರ್ವಿಶ್ಲಿಷ್ಟೈರ್ಧನವರ್ಜಿತಾಃ ॥ ೨೪ ॥

---

೨೧. ಮೊಣಕಾಲಿನಲ್ಲಿ ನರಗಳು ಕಾಣಿಸದೆ ಜೊಂಡಿನಕಡ್ಡಿಯಂತೆ ಒಣ್ಣ ವಾಗಿದ್ದು ತುಂಬ ದುಂಡಾಗಿ ಸ್ವಲ್ಪವೇ ರೋಮಗಳು ಉಳ್ಳ ಸ್ತ್ರೀಯರು ತಮ್ಮ ಪತಿಗಳಿಗೆ ಸೌಭಾಗ್ಯವನ್ನೂ, ಆನೆ, ಕುದುರೆ, ರಥಗಳಲ್ಲಿ ತಿರುಗುವ ಭಾಗ್ಯವನ್ನೂ ಉಂಟು ಮಾಡುತ್ತಾರೆ.

೨೨ ಮೊಣಕಾಲಿನಲ್ಲಿ ರೋಮ ಹೆಚ್ಚಾಗಿರುವ ಹೆಂಗಸು ಕ್ಲೇಶಕ್ಕೆ ಗುರಿಯಾಗುತ್ತಾಳೆ. ಪಿಂಡಿಕೆಯು ಎಂದರೆ (ಕೀಲಾಯವು) ಎತ್ತರವಾಗಿದ್ದರೆ ತಿರುಗುವ ಸ್ವಭಾವವುಳ್ಳವಳಾಗುತ್ತಾಳೆ. ಕಾಗೆಯ ಕಾಲಿನಂತೆ ಮೊಣಕಾಲುಳ್ಳವಳು ಗಂಡನ ನಾಶಕ್ಕೆ ಕಾರಣಳಾಗುತ್ತಾಳೆ. ಬಹು ಕಪಿಲವರ್ಣದವಳು ದುಷ್ಟವಾಗಿ ಮಾತನಾಡ ತಕ್ಕವಳಾಗಿರುವಳು

೨೩. ಬೆಕ್ಕು, ಸಿಂಹ ಇವುಗಳ ಮಂಡಿಗಳಂತಿರುವ ಮಂಡಿಯುಳ್ಳವಳು ಸಂಪತ್ತನ್ನೂ, ಸೌಭಾಗ್ಯವನ್ನೂ, ಪುತ್ರರನ್ನೂ ಪಡೆಯುವಳು.

೨೪. ಹರಡುಗಳು ಗಡಿಗೆಯಂತೆ ದಪ್ಪವಾಗಿದ್ದವರು ಯಾವಾಗಲೂ ದಾರಿ ನಡೆಯುವರು. ಮಾಂಸವಿಲ್ಲದೆ ಇರುವವರು ವ್ಯಭಿಚಾರಿಣಿಯರಾಗುವರು, ನರಗಳು ಹೆಣೆದುಕೊಂಡಿದ್ದರೆ ಹಿಂಸಕರೂ, ಅವು ಸೇರಿಕೊಂಡಿರದೆ ಬೇರೆ ಬೇರೆಯಾಗಿದ್ದರೆ ಧನವರ್ಜಿತರೂ ಆಗುವರು.

**ಅತ್ಯಂತಕುಟಿಲ್ಶೈ ರೂಕ್ಷೈ ಸ್ಫುಟಿತಾಗ್ರೈರ್ಗುಡ ಪ್ರಭೈಃ ।**
**ಅನೇಕಜೈಸ್ತಥಾ ರೋಮ್ಯಾ ಕೇಶೈಶ್ಚಾಪಿ ತಥಾವಿಧೈಃ ॥ ೧೫ ॥**

**ಅತ್ಯಂತಪಿಂಗಲಾ ನಾರೀ ವಿಷತುಲ್ಯೇತಿ ನಿಶ್ಚಿತಂ ।**
**ಸಪ್ತಾಹಾಭ್ಯಂತರೇ ಪಾಪಾ ಪತಿಂ ಹನ್ಯಾನ್ನ ಸಂಶಯಃ ॥ ೧೬ ॥**

**ಹಸ್ತಿಹಸ್ತನಿಭೈರ್ವೃತ್ತೈ ರಂಭಾಭೈಃ ಕರಭೋಪಮ್ಯೈಃ ।**
**ಪ್ರಾಪ್ನುವಂತ್ಯೂರುಭಿಃ ಶಶ್ವತ್ ಸ್ತ್ರಿಯಃ ಸುಖಮನಂಗಜಂ ॥ ೧೭ ॥**

**ದೌರ್ಭಾಗ್ಯಂ ಬದ್ಧಮಾಂಸೈಶ್ಚ ಬಂಧನಂ ರೋಮಶೋರುಭಿಃ ।**
**ತನುಭಿರ್ವಧಮಿತ್ಯಾಹುಃ ಮಧ್ಯಚ್ಛಿದ್ರೇಷ್ವನೀಶತಾ ॥ ೧೮ ॥**

**ಸಂಧ್ಯಾವರ್ಣಂ ಸಮಂ ಚಾರು ಸೂಕ್ಷ್ಮರೋಮಾನ್ವಿತಂ ಪೃಥು ।**
**ಜಘನಂ ಶಸ್ಯತೇ ಸ್ತ್ರೀಣಾಂ ರತಿಸೌಖ್ಯಕರಂ ದ್ವಿಜ ॥ ೧೯ ॥**

---

೧೫ ವೈರೋಮಗಳೂ ತಲೆಕೂದಲೂ ಬಹುವಕ್ರವೂ, ಒರಟೂ, ತುದಿ ಬಿರಿದವುಗಳೂ. ಬೆಲ್ಲದ ಬಣ್ಣವುಳ್ಳವೂ, ಅನೇಕ ಭಾಗವಾಗಿ ಕವಲೊಡೆದಿರುವವೂ ಆಗಿ ಇದ್ದರೆ ಧನವಿಹೀನೆಯೆನಿಸುವಳು.

೧೬. ತುಂಬಾ ಪಿಂಗಳವರ್ಣವುಳ್ಳ ಹೆಂಗಸು ವಿಷಸದೃಶಳು (ವಿಷಕನ್ಯೆ) ಎಂಬುದು ನಿರ್ಧರವಾದ ವಿಷಯ. ಆ ಪಾಪಿಷ್ಠೆಯನ್ನು ಮದುವೆಯಾದ ಏಳು ದಿನಗಳೊಳಗೆ ಗಂಡನು ನಾಶವಾಗುವನೆಂಬುದರಲ್ಲಿ ಸಂದೇಹವಿಲ್ಲ.

೧೭. ಆನೆಯ ಸೊಂಡಿಲಂತೆ ದುಂಡಾಗಿಯೂ, ಬಾಳೆಯ ದಿಂಡಿನಂತೆ ಕಾಂತಿಯುಳ್ಳದ್ದಾಗಿಯೂ, ಕರಭದಂತೆ (ಕರಬಹಿರ್ಭಾಗದಂತೆ) ಮೂಳೆ ಕಾಣದ್ದೂ ಆದ ತೊಡೆಗಳುಳ್ಳ ಸ್ತ್ರೀಯರು ಸರ್ವದಾ ಕಾಮಸೌಖ್ಯವನ್ನು ಅನುಭವಿಸುತ್ತಾರೆ.

೧೮. ತೊಡೆಯ ಮಾಂಸವು ಹತ್ತಿಕೊಂಡಂತೆ ಇದ್ದರೆ ದೌರ್ಭಾಗ್ಯ. ರೋಮಯುಕ್ತವಾದ ತೊಡೆಗಳುಳ್ಳವಳು ಬಂಧನಕ್ಕೆ ಒಳಗಾಗುವಳು. ತೊಡೆಗಳು ಕೃಶವಾಗಿದ್ದರೆ ಕೊಲೆಪಾತಕಿಯಾಗುವಳು. ಮಧ್ಯದಲ್ಲಿ ಒಡೆದಿದ್ದರೆ ವಿಧವೆಯಾಗುವಳು.

೧೯. ಸ್ತ್ರೀಯ ಜಘನಪ್ರದೇಶವು (ಕಟಿಯ ಮುಂಭಾಗವು) ಸಂಜೆಗೆಂಪಿನ ಬಣ್ಣವಾಗಿಯೂ, ಅತಿಸ್ಥೂಲವೋ ಅಥವಾ ಅತಿಕೃಶವೋ ಆಗಿರದೆ ಸಮವಾಗಿಯೂ, ಮನೋಹರವಾಗಿಯೂ, ಸೂಕ್ಷ್ಮವಾದ ರೋಮವುಳ್ಳದಾಗಿಯೂ, ವಿಶಾಲವಾಗಿಯೂ ಇದ್ದರೆ ರತಿಸೌಖ್ಯಕರವೆಂದು ಹೇಳಿದೆ.

ಅರೋಮಕೋ ಭಗೋ ಯಸ್ಯಾಂ ಸಮಃ ಸುಶ್ಲಿಷ್ಟಸಂಸ್ಥಿತಃ
ಅಪಿ ನೀಚಕುಲೋತ್ಪನ್ನಾ ರಾಜಪತ್ನೀ ಭವತ್ಯಸೌ ॥ ೩೦ ॥

ಅಶ್ವತ್ಥಪತ್ರಸದೃಶಃ ಕೂರ್ಮಪೃಷ್ಠೋನ್ನತಸ್ತಥಾ ।
ಶಶಿಬಿಂಬನಿಭಶ್ಚಾಪಿ ತಥೈವ ಕಲಶಾಕೃತಿಃ ॥
ಭಗಶ್ಚಸ್ತತಮಃ ಸ್ತ್ರೀಣಾಂ ರತಿಸೌಭಾಗ್ಯವರ್ಧನಃ ॥ ೩೧ ॥

ತಿಲಪುಷ್ಪನಿಭೋ ಯಶ್ಚ ಯದ್ಯಗ್ರೇ ಖುರಸನ್ನಿಭಃ ।
ದ್ವಾವಪ್ಯೇತೌ ಪರಪ್ರೇಷ್ಯಂ ಕುರ್ವಾತೇ ಚ ದರಿದ್ರತಾಂ ॥ ೩೨ ॥

ಉಲೂಖಲನಿಭೈಃ ಶೋಕಂ ಮರಣಂ ವಿವೃತಾನನೈಃ ।
ವಿರೂಪೈಃ ಪೂತಿನಿರ್ಮಾಂಸೈಃ ಗಜಸನ್ನಿಭರೋಮಭಿಃ ॥
ದೌಃಶೀಲ್ಯಂ ದುರ್ಭಗತ್ವಂ ಚ ದಾರಿದ್ರ್ಯಮಧಿಗಚ್ಛತಿ ॥ ೩೩ ॥

---

೩೦. ಯಾವಳ ಗುಹ್ಯೇಂದ್ರಿಯವು ರೋಮಗಳಿಲ್ಲದೆ ಸಮವಾಗಿ ಜೋಡಿಸಲ್ಪಟ್ಟಂತೆ ಇರುವುದೋ, ಆಕೆಯು ಹೀನವಂಶದಲ್ಲಿ ಹುಟ್ಟಿದ್ದರೂ, ರಾಜನ ಹೆಂಡತಿಯಾಗುತ್ತಾಳೆ.

೩೧. ಸ್ತ್ರೀಯರ ಗುಹ್ಯೇಂದ್ರಿಯವು ಅರಳಿಯಎಲೆಯ ಆಕಾರವುಳ್ಳದ್ದಾಗಿಯೂ, ಆಮೆಯ ಬೆನ್ನಿನಂತೆ ಉಬ್ಬಿಕೊಂಡೂ ಚಂದ್ರಮಂಡಲದಂತೆ ಕಾಂತಿಯುಕ್ತವಾಗಿಯೂ, ಕಲಶದ ಆಕಾರವುಳ್ಳದ್ದಾಗಿಯೂ ಇದ್ದರೆ ಅದು ರತಿಕಾಲದಲ್ಲಿ ಹೆಚ್ಚು ಸೌಖ್ಯವನ್ನು ಕೊಡುವುದೆಂದೂ ಬಹು ಪ್ರಶಸ್ತವಾದುದೆಂದೂ ತಿಳಿಯಬೇಕು.

೩೨. ಅದೇ ಅವಯವ ಎಳ್ಳುಹೂವಿನಂತೆ ಬಣ್ಣವುಳ್ಳದ್ದಾಗಿದ್ದರೂ ಗೊರಸಿನ ಆಕೃತಿಯಂತೆ ಆಕಾರವುಳ್ಳದ್ದಾಗಿದ್ದರೂ ಇವೆರಡು ಲಕ್ಷಣವೂ ಪರರಲ್ಲಿ ಸೇವಕಿಯಾಗಿರುವಿಕೆಯನ್ನೂ ದಾರಿದ್ರ್ಯವನ್ನೂ ಉಂಟುಮಾಡುತ್ತವೆ.

೩೩. ಗುಹ್ಯೇಂದ್ರಿಯವು ಒರಳಿನಂತೆ ಆಳವಾಗಿದ್ದರೆ ದುಃಖವನ್ನುಂಟುಮಾಡುತ್ತದೆ. ಒರಳಿನಂತೆ ಅಗಲವಾದ ಬಾಯುಳ್ಳದಾಗಿದ್ದರೆ ಮೃತಿಹೊಂದುವಳು, ವಿಕಾರವುಳ್ಳದ್ದಾಗಿಯೂ, ದುರ್ಗಂಧಯುಕ್ತವಾಗಿಯೂ, ಮಾಂಸರಹಿತವಾಗಿಯೂ, ಆನೆಯ ಕೂದಲಂತೆ ಒರಟಾದ ಕೂದಲುಳ್ಳದ್ದಾಗಿಯೂ ಇದ್ದರೆ ಅವರು ಕೆಟ್ಟ ಚಾಳಿಯನ್ನೂ, ಕುರೂಪಿತ್ವವನ್ನೂ, ಬಡತನವನ್ನೂ ಹೊಂದುತ್ತಾರೆ,

ಕಪಿತ್ಥಫಲಸಂಕಾಶಃ ಪೀನೋ ವಲಿವಿವರ್ಜಿತಃ ।
ಸ್ಫೀತಃ ಪ್ರಶಸ್ಯತೇ ಸ್ತ್ರೀಣಾಂ ನಿಂದಿತಶ್ಚಾನ್ಯಥಾ ದ್ವಿಜಾಃ ॥ ೩೪ ॥

ಪಯೋಧರಭರಾನಮ್ರಪ್ರಚಲತ್ರಿವಲೀಗುರುಃ ।
ಮಧ್ಯಃ ಶುಭಾವಹಃ ಸ್ತ್ರೀಣಾಂ ರೋಮರಾಜೀವಿಭೂಷಿತಃ ॥ ೩೫ ॥

ಪಣವಾಭೈರ್ಮೃದಂಗಾಭೈಸ್ತಥಾ ಮಧ್ಯೇ ಯವೋಪಮೈಃ ।
ಪ್ರಾಪ್ನುವಂತಿ ಭಯಾಯಾಸಕ್ಲೇಶದೌಃಶೀಲ್ಯಮೀದೃಶೈಃ ॥ ೩೬ ॥

ಅವಕ್ರಾನುಲ್ಬಣಂ ಪೃಷ್ಠಮರೋಮಶಮಗರ್ಹಿತಂ ।
ನಾನಾಸ್ತರಣಪರ್ಯಂಕರತಿಸೌಖ್ಯಕರಂ ಪರಂ ॥ ೩೭ ॥

ಕುಬ್ಜಮದ್ರೋಣಿಕಂ ಪೃಷ್ಠಂ ರೋಮಶಂ ಯದಿ ಯೋಷಿತಃ ।
ಸ್ವಪ್ನಾಂತರೇ ಸುಖಂ ತಸ್ಯಾ ನಾಸ್ತಿ ಹನ್ಯಾತ್ಪತಿಂ ಚ ಸಾ ॥ ೩೮ ॥

---

೩೪. ಓ ಬ್ರಾಹ್ಮಣರೇ! ಬೇಲದಹಣ್ಣಿನಂತೆ ದುಂಡಾಗಿ ದಪ್ಪವಾಗಿಯೂ, ಸುಕ್ಕುಗಳಿಲ್ಲದ್ದಾಗಿಯೂ ಇರುವ ಸ್ತನವು ಪ್ರಶಸ್ತವು. ತದ್ವಿರುದ್ಧವಾಗಿದ್ದಲ್ಲಿ ನಿಂದಿತವು.

೩೫. ಸ್ತನಭಾರದಿಂದ ಬಗ್ಗಿ ಚಲಿಸುವ ತ್ರಿವಳಿ (ಹೊಟ್ಟೆಯಮಡಿಕೆ) ಉಳ್ಳದ್ದಾಗಿ ರೋಮಪಂಕ್ತಿಯಿಂದ ಅಲಂಕೃತವಾಗಿರುವ ಸ್ತ್ರೀಯರ ಮಧ್ಯ (ಸೊಂಟ) ವು ಮಂಗಳಕರವಾದುದು.

೩೬. ಪಣವವೆಂಬ ವಾದ್ಯದಂತಿರುವುದೂ, ಮೃದಂಗವೆಂಬ ವಾದ್ಯದಂತಿರುವುದೂ, ಯವಧಾನ್ಯ ಸದೃಶವೂ ಆಗಿರುವ ಮಧ್ಯವುಳ್ಳವರಾಗಿದ್ದರೆ ಭಯ, ಕ್ಲೇಶ, ದುಶ್ಶೀಲತೆ ಇವನ್ನು ಹೊಂದುತ್ತಾರೆ.

೩೭. ಪೃಷ್ಠವು ಕೊಂಕಿಲ್ಲದೆಯೂ, ಅಷ್ಟು ಎತ್ತರವಾಗಿಲ್ಲದೆಯೂ, ರೋಮಗಳಿಲ್ಲದೆಯೂ, ನಿಂದಿತವಲ್ಲದೆಯೂ, ಇದ್ದರೆ ಬಗೆಬಗೆಯ ಹಾಸಿಗೆ, ಮಂಚ ಇವು ಲಭಿಸಿ ರತಿಸೌಖ್ಯಕ್ಕೂ ಕಾರಣವಾಗುತ್ತದೆ.

೩೮. ಹೆಂಗಸಿನ ಬೆನ್ನು ಗೂನಾಗಿಯೂ ಮಧ್ಯದಲ್ಲಿ ದ್ರೋಣ ಎಂದರೆ (ಹಳ್ಳ) ವಿಲ್ಲದೆಯೂ, ರೋಮಭರಿತವಾಗಿಯೂ ಇದ್ದರೆ ಅಂಥವಳಿಗೆ ಸ್ವಪ್ನದಲ್ಲಿ ಸಹ ಸುಖವಿಲ್ಲ. ಅವಳು ಗಂಡನ ಮೃತಿಗೆ ಕಾರಣಳಾಗುವಳು.

ವಿಪುಲೈಃ ಸುಕುಮಾರೈಶ್ಚ ಕುಕ್ಷಿಭಿಃ ಸುಬಹುಪ್ರಜಾಃ ।
ಮಂಡೂಕಕುಕ್ಷಿರ್ಯಾ ನಾರೀ ರಾಜಾನಂ ಸಾ ಪ್ರಸೂಯತೇ ॥ ೩೯ ॥

ಉನ್ನತೈರ್ಬಲಿಭಿರ್ವಂಧ್ಯಾ ಸುವೃತ್ತೈಃ ಕುಲಟಾಃಸ್ತ್ರಿಯಃ ।
ಜಾರಕರ್ಮರತಾಸ್ತಾಃ ಸ್ಯುಃ ಪ್ರವ್ರಜ್ಯಾಂ ವಾ ಸಮಾಪ್ನುಯುಃ ॥ ೪೦ ॥

ಉನ್ನತಾ ಚ ನತೈಃ ಕ್ಷುದ್ರಾ ವಿಷಮೈರ್ವಿಷಮಾಶಯಾ ।
ಆಯುರೈಶ್ವರ್ಯಸಂಪನ್ನಾ ವನಿತಾ ಹೃದಯೈಃ ಸಮೈಃ ॥ ೪೧ ॥

ಸುವೃತ್ತಮುನ್ನತಂ ಪೀನಮದೂರೋನ್ನತಮಾಯತಂ ।
ಸ್ತನಯುಗ್ಮಮಿದಂ ಶಂಸ್ತಂ ಅತೋನ್ಯದಸುಖಾವಹಂ ॥ ೪೨ ॥

ಉನ್ನತಿಃ ಪ್ರಥಮೇಗರ್ಭೇ ದ್ವಯೋರೇಕಸ್ಯ ಭೂಯಸೀ ।
ವಾಮೇ ತು ಜಾಯತೇ ಕನ್ಯಾ ದಕ್ಷಿಣೇ ತು ಭವೇತ್ಸುತಃ ॥ ೪೩ ॥

---

೩೯. ಮೃದುವಾಗಿಯೂ ವಿಸ್ತಾರವಾಗಿಯೂ ಇರುವ ಹೊಟ್ಟೆಯ ಪ್ರದೇಶವುಳ್ಳವಳು ಬಹು ಸಂತಾನವನ್ನು ಪಡೆಯುತ್ತಾಳೆ. ಯಾವಳ ಹೊಟ್ಟೆಯು ಕಪ್ಪೆಯ ಹೊಟ್ಟೆಯಂತಿರುವುದೋ ಅವಳು ಪ್ರಸುವಿಸಿದ ಮಗು ರಾಜನಾಗುವುದು.

೪೦. ಹೊಟ್ಟೆಯ ಮಡಿಕೆಗಳು ಎತ್ತರವಾಗಿದ್ದರೆ ಬಂಜೆಯರಾಗುವರು. ಬಹಳ ದುಂಡಾಗಿದ್ದರೆ ವ್ಯಭಿಚಾರಿಣಿಯರಾಗುವರು. ಅಂಥವರು ದುರ್ವ್ಯಾಪಾರದಲ್ಲಿ ಆಸಕ್ತರಾಗುವರು. ಅಥವಾ ಸನ್ಯಾಸಿನಿಯರಾಗುವರು.

೪೧. ಹೃದಯ ಪ್ರದೇಶ ತಗ್ಗಾಗಿದ್ದರೆ ಔನ್ನತ್ಯವುಳ್ಳವಳೂ, ಕ್ಷುದ್ರಳೂ, ವಿಷಮಗಳಾಗಿದ್ದರೆ ವಿಷಮಾಭಿಪ್ರಾಯವುಳ್ಳವಳೂ ಆಗುವಳು. ಸಮವಾದ ಹೃದಯವುಳ್ಳವಳಾಗಿದ್ದರೆ ಆಯಸ್ಸು, ಐಶ್ವರ್ಯ, ಇವುಗಳಿಂದ ಕೂಡಿದವಳಾಗುವಳು.

೪೨. ಸ್ತನಗಳು ಬಹಳ ದುಂಡಾಗಿಯೂ, ಅತ್ಯಂತ ಎತ್ತರವಾಗಿಯೂ, ದಪ್ಪವಾಗಿಯೂ, ಒಂದಕ್ಕೊಂದು ಹತ್ತಿರವಾಗಿಯೂ ಇದ್ದರೆ ಬಹಳ ಪ್ರಶಸ್ತವೆನಿಸುವುದು. ಇದಕ್ಕೆ ವ್ಯತಿರಿಕ್ತ ರೀತಿಯಾಗಿದ್ದರೆ ಸುಖಕರವಲ್ಲ.

೪೩. ಸ್ತ್ರೀಯು ಚೊಚ್ಚಲು ಬಸುರಿಯಾದಾಗ ಕೆಲವುವೇಳೆ ಎರಡು ಸ್ತನಗಳಲ್ಲಿ ಒಂದು ಹೆಚ್ಚು ಗಾತ್ರವಾಗುವುದುಂಟು. ಹೀಗೆ ಎಡಗಡೆ ಸ್ತನವು ಗಾತ್ರವಾದರೆ ಹೆಣ್ಣುಮಗುವಾಗುವುದೆಂದೂ, ಬಲಗಡೆ ಸ್ತನವು ಗಾತ್ರವಾದರೆ ಗಂಡುಮಗುವಾಗುವುದೆಂದೂ ತಿಳಿಯಬೇಕು.

**ದೀರ್ಘೇ ತು ಚೂಚುಕೇ ಯಸ್ಯಾಃ ಸಾ ಸ್ತ್ರೀ ಧೂರ್ತಾ ರತಿಪ್ರಿಯಾ ।**
**ಸುವೃತ್ತೇ ತು ಪುನರ್ಯಸ್ಯಾ ದ್ವೇಷ್ಟಿ ಸಾ ಪುರುಷಂ ಸದಾ ॥ ೪೪ ॥**

**ಸ್ತನೈಃ ಸರ್ಪಫಣಾಕಾರೈಃ ಶ್ವಜಿಹ್ವಾಕೃತಿಭಿಸ್ತಥಾ ।**
**ದಾರಿದ್ರ್ಯಮಧಿಗಚ್ಛಂತಿ ಸ್ತ್ರಿಯಃ ಪುರುಷಚೇಷ್ಟಿತಾಃ ॥**
**ಅವಷ್ಟಬ್ಧಘಟೀತುಲ್ಯಾ ಭವಂತಿ ಚ ತಥಾ ದ್ವಿಜಾಃ ॥ ೪೫ ॥**

**ಸುಸಮಂ ಮಾಂಸಲಂ ಚಾರು ಶಿರೋ ರೋಮವಿವರ್ಜಿತಂ ।**
**ವಕ್ಷೋ ಯಸ್ಯಾ ಭವೇನ್ನಾರ್ಯಾ ಭೋಗಾನ್ ಭುಂಕ್ತೇ ಯಥೇಪ್ಸಿತಾನ್ ॥ ೪೬ ॥**

**ಹಿಂಸ್ರಾ ಭವತಿ ವಕ್ರೇಣ ದೌಃಶೀಲ್ಯಂ ರೋಮಶೇನ ತು ।**
**ನಿರ್ಮಾಂಸೇನ ತು ವೈಧವ್ಯಂ ವಿಸ್ತೀರ್ಣೇ ಕಲಹಪ್ರಿಯಾ ॥ ೪೭ ॥**

**ಚತಸ್ರೋ ರಕ್ತಗಂಭೀರಾ ರೇಖಾಃ ಸ್ನಿಗ್ಧಾಃ ಕರೇ ಸ್ತ್ರಿಯಾಃ ।**
**ಯದಿ ಸ್ಯುಃ ಸುಖಮಾಪ್ನೋತಿ ವಿಚ್ಛಿನ್ನಾಭಿರನೀಶತಾ ॥ ೪೮ ॥**

---

೪೪. ಯಾವ ಸ್ತ್ರೀಯ ಮೊಲೆತೊಟ್ಟುಗಳು ಉದ್ದವಾಗಿರುವುವೋ ಅವಳು ವಂಚಕಳೂ, ರತಿಪ್ರಿಯಳೂ ಆಗುವಳು. ಈ ತೊಟ್ಟುಗಳು ಬಹುಗುಂಡಾಗಿದ್ದರೆ ಯಾವಾಗಲೂ ಗಂಡನನ್ನು ದ್ವೇಷಿಸುವಳು.

೪೫. ಸ್ತನಗಳು ಹಾವಿನ ಹೆಡೆಯಾಕಾರವಾಗಿಯೂ, ನಾಯಿಯ ನಾಲಗೆಯಂತೆಯೂ, ಇರುವ ಸ್ತ್ರೀಯರು ಗಂಡುಬೀರಿಗಳಾಗಿ ಬಡತನವನ್ನು ಹೊಂದುತ್ತಾರೆ. ಇವರು ಗಡಿಗೆಯನ್ನು ಕಟ್ಟಿಕೊಂಡಹಾಗೆ ಕಾಣುತ್ತಾರೆ.

೪೬. ಎಲೈ ಬ್ರಾಹ್ಮಣರೇ! ಯಾವಳ ವಕ್ಷಸ್ಥಳವು ಸಮವಾಗಿಯೂ ಮಾಂಸಪುಷ್ಟಿಯುಳ್ಳದ್ದಾಗಿಯೂ, ಮನೋಹರವಾಗಿಯೂ, ರೋಮಾಗ್ರಗಳಿಲ್ಲದೆಯೂ, ಇರುವುದೋ ಅವಳು ತನಗೆ ಇಚ್ಛೆಯಾದ ಸುಖವನ್ನು ಸಮೃದ್ಧಿಯಾಗಿ ಅನುಭವಿಸುತ್ತಾಳೆ.

೪೭. ವಕ್ಷಸ್ಥಳವು ವಕ್ರವಾಗಿದ್ದರೆ ಹಿಂಸಾಕರಳಾಗುತ್ತಾಳೆ. ರೋಮಯುಕ್ತವಾಗಿದ್ದರೆ ದುಃಸ್ವಭಾವವುಳ್ಳವಳಾಗುತ್ತಾಳೆ. ಮಾಂಸಪುಷ್ಟಿಯಿಲ್ಲದಿದ್ದರೆ ವೈಧವ್ಯವನ್ನು ಹೊಂದುತ್ತಾಳೆ. ಬಹು ವಿಸ್ತಾರವಾಗಿದ್ದರೆ ಕಲಹಪ್ರಿಯಳಾಗುತ್ತಾಳೆ.

೪೮. ಯಾವಳ ಅಂಗೈಯಲ್ಲಿ ಕೆಂಪಾಗಿಯೂ, ಆಳವಾಗಿಯೂ, ನಯವಾಗಿಯೂ, ಇರುವ ನಾಲ್ಕು ಗೆರೆಗಳು ಇರುವುವೋ, ಅಂಥ ಸ್ತ್ರೀಯು ಸುಖಹೊಂದುತ್ತಾಳೆ. ಈ ಗೆರೆಗಳು ಅಲ್ಲಲ್ಲಿ ತುಂಡಾಗಿದ್ದರೆ ವೈಧವ್ಯಬರುವುದು.

ರೇಖಾಃ ಕನಿಷ್ಠಿಕಾಮೂಲಾದ್ಯಸ್ಯಾಃ ಪ್ರಾಪ್ತಾಃ ಪ್ರದೇಶಿನೀಂ ।
ಶತಮಾಯುರ್ಭವೇತ್ತಸ್ಯಾಸ್ತ್ರಯಾಣಾಮುನ್ನತೌ ಕ್ರಮಾತ್ ॥ ೪೯ ॥

ಸಂವೃತ್ತಾಃ ಸಮಪರ್ವಾಣಸ್ತೀಕ್ಷ್ಣಾಗ್ರಾಃ ಕೋಮಲತ್ವಚಃ ।
ಸಮಾ ಹ್ಯಂಗುಲಯೋ ಯಸ್ಯಾಃ ಸಾ ನಾರೀ ಭೋಗವರ್ಧಿನೀ ॥ ೫೦ ॥

ಬಂಧುಜೀವಾರುಣೈಸ್ತುಂಗೈರ್ನಖೈರೈಶ್ವರ್ಯಮಾಪ್ನುಯಾತ್ ।
ಖರೈರ್ವಕ್ರೈ ರ್ವಿವರ್ಣಾಭೈಃ ಶ್ವೇತಪ್ರಾಂತೈರನೀಶತಾ ॥ ೫೧ ॥

ರಕ್ತೈರ್ಮೃದುಭಿರೈಶ್ವರ್ಯಂ ನಿಶ್ಛಿದ್ರಾಂಗುಲಿಭಿರ್ದ್ವಿಜಾಃ ।
ಸ್ಫುಟಿತೈರ್ವಿಷಮೈ ರೂಕ್ಷೈಃ ಕ್ಲೇಶಂ ಪಾಣಿಭಿರಾಪ್ನುಯುಃ ॥ ೫೨ ॥

---

೪೯. ಕೈಯ ಕಿರುಬೆರಳಿನ ಬುಡದಿಂದ ಆರಂಭವಾದ ರೇಖೆಗಳು ತರ್ಜನೀ ಬೆರಳಿನವರೆಗೂ ಅವಿಚ್ಛಿನ್ನವಾಗಿದ್ದು ಕನಿಷ್ಠಿಕಾ, ಅನಾಮಿಕಾ, ಮಧ್ಯಮಾ ಎಂಬ ಮೂರು ಬೆರಳುಗಳ ಬುಡದವರೆಗೂ ಈ ರೇಖೆ ಕ್ರಮವಾಗಿ ಏರಿದಂತಿರುವ ಸ್ತ್ರೀಯು ನೂರುವರ್ಷ ಆಯುಸ್ಸುಳ್ಳವಳಾಗುವಳು.

೫೦. ಯಾವ ಸ್ತ್ರೀಯ ಕೈಬೆರಳು ಬಹಳ ದೊಡ್ಡವಾಗಿಯೂ ಸಮವಾದ ಗಿಣ್ಣುಳ್ಳವಾಗಿಯೂ ಮೊನಚಾದ ತುದಿಗಳುಳ್ಳವಾಗಿಯೂ ಮೃದುವಾದ ಚರ್ಮವುಳ್ಳವಾಗಿಯೂ ಇರುವುವೋ ಆ ಸ್ತ್ರೀಯು ಸುಖವನ್ನು ವೃದ್ಧಿಹೊಂದಿಸತಕ್ಕವಳಾಗುವಳು.

೫೧. ಕೆಂಪುದಾಸವಾಳದ ಹೂವಿನಂತೆ ಕೆಂಪಾಗಿಯೂ ಎತ್ತರವಾಗಿಯೂ ಇರುವ ಉಗುರುಗಳಿದ್ದರೆ ಐಶ್ವರ್ಯ ಹೊಂದುತ್ತಾಳೆ. ತೀಕ್ಷ್ಣವೂ ಡೊಂಕಾದುದೂ, ಬಣ್ಣ, ಕಾಂತಿ ಇವು ಇಲ್ಲದುದೂ, ಬೆಳ್ಳಗಿರುವುದೂ, ಅಗಲವಾದುದೂ, ಆದ ಉಗುರು ಇದ್ದರೆ ವೈಧವ್ಯವುಂಟಾಗುವುದು.

೫೨. ಓ ಬ್ರಾಹ್ಮಣರೇ! ಯಾವಳ ಕೈಬೆರಳುಗಳು ಕೂಡಿಸಿದಾಗ ಸಂದುಬಿಡದಂತೆಯೂ ಕೆಂಪಗೂ ಮೃದುವಾಗಿಯೂ ಇರುವುವೋ ಅಂಥವಳು ಐಶ್ವರ್ಯ ಹೊಂದುತ್ತಾಳೆ. ಅಂಗೈಗಳು ಚರ್ಮಸೀಳಿಯೂ ಒಂದೇ ಸಮನಾಗಿರದೆ ಹೆಚ್ಚು ಕಮ್ಮಿಯಾಗಿಯೂ ಒರಟಾಗಿಯೂ ಇದ್ದರೆ ಕ್ಲೇಶವನ್ನು ಹೊಂದುವಳು.

ಕಮರೇಖಾ ಯವಾ ಯಾಸಾಮಂಗುಷ್ಠಾಂಗುಲಿ ಪರ್ವಸು ।
ತಾಸಾಂ ಹಿ ವಿಪುಲಂ ಸೌಖ್ಯಂ ಧನಂ ಧಾನ್ಯಂ ತಥಾಕ್ಷಯಂ　　॥ ೫೩ ॥

ಮಣಿಬಂಧೋವ್ಯವಚ್ಛಿನ್ನೋ ರೇಖಾತ್ರಯ ವಿಭೂಷಿತಃ ।
ದದಾತಿ ನ ಚಿರಾದೇವ ಭೋಗಮಾಯುಸ್ತಥಾಕ್ಷಯಂ　　॥ ೫೪ ॥

ಶ್ರೀವತ್ಸಧ್ವಜಪದ್ಮಾಕ್ಷಗಜವಾಜಿ ನಿವೇಶನೈಃ ।
ಚಕ್ರಸ್ವಸ್ತಿಕವಜ್ರಾಸಿಪೂರ್ಣಕುಂಭನಿಭಾಂಕುಶೈಃ　　॥ ೫೫ ॥

ಪ್ರಾಸಾದಚ್ಛತ್ರಮುಕುಟೈರ್ಹಾರಕೇಯೂರಕುಂಡಲೈ ।
ಶಂಖತೋರಣನಿರ್ವ್ಯೂಹೈರ್ಹಸ್ತನ್ಯಸ್ತೈರ್ನೃಪಸ್ತ್ರಿಯಃ　　॥ ೫೬ ॥

ಯಸ್ಯಾಃ ಪಾಣಿತಲೇ ರಕ್ತಾ ಯೂಪಕುಂಭಾಶ್ಚ ಕುಂಡಿಕಾಃ ।
ದೃಶ್ಯಂತೇ ಚರಣೇ ಯಸ್ಯಾ ಯಜ್ಞಪತ್ನೀ ಭವತ್ಯಸೌ　　॥ ೫೭ ॥

---

೫೩. ಯಾವ ಸ್ತ್ರೀಯರಿಗೆ ಹೆಬ್ಬೆರಳಿನ ಗಿಣ್ಣಿನಲ್ಲಿ ಸಮವಾದ ಎರಡು ಗೆರೆಗಳಿದ್ದು ಮಧ್ಯೆ ಒಂದು ಅಕ್ಕಿಯಕಾಳನ್ನು ಇಟ್ಟಹಾಗೆ ಇರುವುದೋ ಅಂಥವರಿಗೆ ಅಕ್ಷಯವಾದ ಧನಧಾನ್ಯವೂ ಹೆಚ್ಚಾದ ಸೌಖ್ಯವೂ ಉಂಟಾಗುತ್ತದೆ.

೫೪. ಕೈಯಹರಡಿನ ಪ್ರದೇಶವು ತುಂಬಿಕೊಂಡು ಮೂರು ಗೆರೆಗಳಿಂದ ಅಲಂಕೃತವಾಗಿದ್ದರೆ ಶೀಘ್ರದಲ್ಲಿಯೇ ಭೋಗವನ್ನೂ ಅಕ್ಷಯವಾದ ಆಯುಸ್ಸನ್ನೂ ಉಂಟುಮಾಡುವಳು.

೫೫. ಕೈಗಳಲ್ಲಿ ಶ್ರೀವತ್ಸ, ಧ್ವಜ, ತಾವರೆಮಣಿ, ಆನೆ, ಕುದುರೆ, ಗೃಹಚಕ್ರ, ಸ್ವಸ್ತಿಕ, ವಜ್ರಾಯುಧ, ಕತ್ತಿ, ಪೂರ್ಣಕುಂಭ, ಅಂಕುಶ ಮುಂತಾದ ಚಿಹ್ನೆಯಿಂದ ಕೂಡಿದ್ದರೆ

೫೬. ಪ್ರಾಸಾದನಿವಾಸಿಗಳೂ ಛತ್ರಿ, ಕಿರೀಟ, ಅಂಗದ, ಹಾರ, ಕುಂಡಲ ಇವನ್ನು ಉಳ್ಳವರೂ ಆಗುತ್ತಾರೆ. ಶಂಖ, ತೋರಣ ಇವುಗಳಿದ್ದರೆ ರಾಜಪತ್ನಿಯರಾಗುವರು

೫೭. ಯಾವ ಸ್ತ್ರೀಯ ಅಂಗೈಗಳು ಕೆಂಪಾಗಿದ್ದು ಯೂಪಸ್ತಂಭ, ಪೂರ್ಣಕುಂಭ, ಅಗ್ನಿಕುಂಡ ಇವುಗಳ ರೇಖೆಗಳುಳ್ಳವಾಗಿರುತ್ತವೋ ಆಕೆಯು ಯಜ್ಞದೀಕ್ಷಿತನ ಪತ್ನಿಯಾಗುವಳು.

ವೀಥ್ಯಾಪಣತುಲಾಮಾನ್ಯೈಸ್ತಥಾ ಮುದ್ರಾದಿಭಿಃ ಸ್ತ್ರಿಯಃ ।
ಭವಂತಿ ವಣಿಜಾಂ ಪತ್ನ್ಯೋ ರತ್ನಕಾಂಚನಶಾಲಿನಾಂ ॥ ೫೮ ॥

ದಾತ್ರಯೋಕ್ತ್ರಯುಗಾಬಂಧ ಫಲೋಲೂಖಲ ಲಾಂಗಲೈಃ ।
ಭವಂತಿ ಧನಧಾನ್ಯಾಢ್ಯಾಃ ಕೃಷೀವಲಜನಾಂಗನಾಃ ॥ ೫೯ ॥

ಅನುನ್ನತಶಿರಾಸಂಧಿ ಪೀನಂ ರೋಮವಿವರ್ಜಿತಂ ।
ಗೋಪುಚ್ಛಾಕೃತಿ ನಾರೀಣಾಂ ಭುಜಯೋರ್ಯುಗಲಂ ಶುಭಂ ॥ ೬೦ ॥

ನಿಗೂಢಗ್ರಂಥಯೋ ಯಸ್ಯಾಃ ಕೂರ್ಪರೌ ರೋಮವರ್ಜಿತೌ ।
ಬಾಹೂ ವೈ ಲಲಿತೌ ಯಸ್ಯಾಃ ಪ್ರಶಸ್ತೌ ವೃತ್ತಕೋಮಲೌ ॥ ೬೧ ॥

ಉನ್ನತಾವನತೌ ಚೈವ ನಾತಿಸ್ಥೂಲೌ ನ ರೋಮಶೌ ।
ಸುಖದೌ ತು ಸದಾ ಸ್ತ್ರೀಣಾಂ ಸೌಭಾಗ್ಯಾರೋಗ್ಯವರ್ಧನೌ ॥ ೬೨ ॥

---

೫೮. ಹೆಂಗಸಿನ ಕೈಯಲ್ಲಿ ವೀಥೀರೇಖೆ, ಅಂಗಡಿಯ ಚಿಹ್ನೆ, ತಕ್ಕಡಿಚಿಹ್ನೆ, ಅಳತೆಸೇರು ಪಾವು ಮೊದಲಾದುವುಗಳ ಚಿಹ್ನೆ, ಇವು ಇದ್ದರೆ ನಾಣ್ಯಗಳನ್ನಿಟ್ಟುಕೊಂಡು ವ್ಯವಹರಿಸುವ ಮತ್ತು ಬಂಗಾರ, ರತ್ನ ಇವುಗಳನ್ನು ಸಮೃದ್ಧಿಯಾಗಿ ಇಟ್ಟುಕೊಂಡಿರುವ ವರ್ತಕನಿಗೆ ಹೆಂಡತಿಯಾಗುವಳು.

೫೯. ಕುಡುಗೋಲು; ಕೊಡಲಿ ಮೊದಲಾದ ಕತ್ತರಿಸುವ ಆಯುಧಗಳು, ಮಿಣಿ, ನೊಗಕ್ಕೆ ಕಟ್ಟುವಹಗ್ಗ, ಚಿಮುಟ, ಒರಳು, ನೇಗಿಲು ಇವುಗಳಿದ್ದರೆ ಧನಧಾನ್ಯಗಳಿಂದ ಸಮೃದ್ಧರಾದ ಆರಂಬಗಾರರ ಹೆಂಗಸರಾಗುವರು.

೬೦. ಸ್ತ್ರೀಯ ತೋಳುಗಳೆರಡೂ ಉಬ್ಬಿಕೊಳ್ಳದ ನರಗಳ ಸಂಧಿಗಳುಳ್ಳದ್ದೂ, ದಪ್ಪವೂ ರೋಮಗಳಿಲ್ಲದ್ದೂ, ಮತ್ತು ಹಸುವಿನ ಬಾಲದ ಆಕೃತಿಯುಳ್ಳದ್ದೂ, ಆಗಿರುವುದು ಒಳ್ಳೆಯದು.

೬೧. ಯಾವಳ ಮೊಳಕೈಗಳಲ್ಲಿನ ಗಂಟುಗಳು ಮುಚ್ಚಿಕೊಂಡು (ಮಾಂಸ ಪುಷ್ಟಿಯಾಗಿ) ರೋಮಗಳಿಲ್ಲದೆ ಇರುವುವೋ ಅವಳು ಅದೃಷ್ಟವಂತೆ.

೬೨. ಯಾವಳ ತೋಳುಗಳು ಮನೋಹರವಾಗಿಯೂ, ಪ್ರಶಸ್ತಗಳಾಗಿಯೂ ದುಂಡಗೂ ಮೃದುವಾಗಿಯೂ ಎಲ್ಲೆಲ್ಲಿ ಬೇಕೋ ಅಲ್ಲಲ್ಲಿ ಉಬ್ಬಿಯೂ ತಗ್ಗಿಯೂ ಅತಿ ಸ್ಥೂಲವಲ್ಲದೆಯೂ ರೋಮಗಳಿಲ್ಲದೆಯೂ ಇರುವುವೋ ಅಂಥ ಸ್ತ್ರೀಯು ಸುಖವನ್ನೂ ಸೌಭಾಗ್ಯವನ್ನೂ ಆರೋಗ್ಯವನ್ನೂ ವೃದ್ಧಿಹೊಂದಿಸುವಳು.

**ಸ್ಥೂಲೇ ಸ್ಕಂಧೇ ವಹೇದ್ಭಾರಂ ರೋಮಶೇ ವ್ಯಾಧಿತಾ ಭವೇತ್ ।**
**ವಕ್ರಸ್ಕಂಧೇ ಭವೇದ್ವಂಧ್ಯಾ ಕುಲಟಾಚೋನ್ನತಾನನೇ ॥ ೬೩ ॥**

**ಸ್ಪಷ್ಟಂ ರೇಖಾತ್ರಯಂ ಯಸ್ಯಾ ಗ್ರೀವಾಯಾಂ ಚತುರಂಗುಲಂ ।**
**ಮಣಿಕಾಂಚನಮುಕ್ತಾಢ್ಯಂ ಸಾ ದಧಾತಿ ವಿಭೂಷಣಂ ॥ ೬೪ ॥**

**ಅಧನಾ ಸ್ತ್ರೀ ಕೃಶಗ್ರೀವಾ ದೀರ್ಘಗ್ರೀವಾ ಚ ಬಂಧಕೀ ।**
**ಹ್ರಸ್ವಗ್ರೀವಾ ಮೃತಾಪತ್ಯಾ ಸ್ಥೂಲಗ್ರೀವಾ ಚ ದುಃಖಿತಾ ॥ ೬೫ ॥**

**ಅನುನ್ನತಾ ಸಮಾಂಸಾ ಚ ಸಮಾ ಯಸ್ಯಾಃ ಕೃಕಾಟಿಕಾ ।**
**ಸುದೀರ್ಘಮಾಯುಸ್ತಸ್ಯಾಸ್ತು ಚಿರಂ ಭರ್ತಾ ಚ ಜೀವತಿ ॥ ೬೬ ॥**

**ನಿರ್ಮಾಂಸಾ ಬಹುಮಾಂಸಾ ಚ ಶಿರಾಲಾ ರೋಮಶಾ ತಥಾ ।**
**ಕುಟಿಲಾ ವಿಕಟಾ ಚೈವ ವಿಸ್ತೀರ್ಣಾ ನ ಚ ಶಸ್ಯತೇ ॥ ೬೭ ॥**

---

೬೩. ಹೆಗಲು ದಪ್ಪವಾಗಿದ್ದ ಸ್ತ್ರೀಯು ಭಾರ ಹೊರುವವಳಾಗುತ್ತಾಳೆ. ಸ್ಕಂಧದಲ್ಲಿ ರೋಮಗಳಿದ್ದರೆ ವ್ಯಾಧಿಪೀಡಿತಳಾಗುವಳು. ಹೆಗಲು ಡೊಂಕಾದರೆ ಬಂಜೆಯಾಗುವಳು. ಮುಖವು ಎತ್ತರವಾಗಿದ್ದರೆ ವ್ಯಭಿಚಾರಿಣಿಯಾಗುವಳು.

೬೪. ಯಾವಳ ಕುತ್ತಿಗೆಯಲ್ಲಿ ನಾಲ್ಕು ಅಂಗುಲ ಉದ್ದವುಳ್ಳ ಮೂರು ಗೆರೆಗಳು ವ್ಯಕ್ತವಾಗಿರುವುವೋ ಅಂಥವಳು ಮುತ್ತು, ರತ್ನ, ಚಿನ್ನ ಇವುಗಳಿಂದ ಕೂಡಿದ ಕಂಠಾಭರಣವನ್ನು ಧರಿಸುತ್ತಾಳೆ.

೬೫. ಕೃಶವಾದ ಕತ್ತುಳ್ಳವಳು ದರಿದ್ರಳಾಗುವಳು. ನೀಳವಾದ ಕತ್ತುಳ್ಳವಳು ವ್ಯಭಿಚಾರಿಣಿಯಾಗುವಳು. ಕುತ್ತಿಗೆ ಮೋಟಾಗಿದ್ದರೆ ಅವಳಲ್ಲಿ ಹುಟ್ಟಿದ ಮಕ್ಕಳು ಸಾಯುವರು. ಕುತ್ತಿಗೆ ದಪ್ಪವಾಗಿದ್ದರೆ ದುಃಖಿತೆಯಾಗುವಳು.

೬೬. ಹೆಗ್ಗತ್ತು ಅಷ್ಟುವಿಸ್ತಾರವಿಲ್ಲದೆಯೂ, ಭುಜ ಶಿರಸ್ಸಿನಷ್ಟೇ ಎತ್ತರವಾಗಿಯೂ, ಯಾವಳಿಗೆ ಇರುವುದೋ ಅಂಥವಳು ದೀರ್ಘಾಯುಸ್ಸುಳ್ಳವಳಾಗುವಳು. ಅಂಥವಳ ಗಂಡನು ದೀರ್ಘಕಾಲ ಜೀವಿಸಿರುವನು.

೬೭. ಹೆಗ್ಗತ್ತಿನಲ್ಲಿ ಮಾಂಸವು ಸುತರಾಂ ಇಲ್ಲದೆ ಇದ್ದರೂ, ಅಥವಾ ಹೆಚ್ಚಾಗಿ ಮಾಂಸದಿಂದ ಕೂಡಿದ್ದರೂ, ಅಥವಾ ನರಮಯವಾಗಿಯೂ, ರೋಮಯುಕ್ತವಾ

ನ ಸ್ಥೂಲೋ ನ ಕೃಶೋತ್ಯರ್ಥಂ ನ ವಕ್ರೋ ನ ಚ ರೋಮಶಃ ।
ಹನುರೇವಂ ವಿಧಃ ಶ್ರೇಯಾಂಸ್ತತೋನ್ಯೋ ನ ಪ್ರಶಸ್ಯತೇ ॥ ೬೮ ॥

ಚತುರಸ್ರಮುಖೀ ಧೂರ್ತಾ ಮಂಡಲಾಸ್ಯಾ ಶಿವಾ ಭವೇತ್ ।
ಅಪ್ರಜಾ ವಾಜಿವಕ್ತ್ರಾ ಸ್ತ್ರೀ ಮಹಾವಕ್ತ್ರಾ ಚ ದುರ್ಭಗಾ ॥ ೬೯ ॥

ಶ್ವವರಾಹವೃಕೋಲೂಕಮರ್ಕಟಾಸ್ಯಾಶ್ಚ ಯಾಃ ಸ್ತ್ರಿಯಃ ।
ಕ್ರೂರಾಸ್ತಾಃ ಪಾಪಕರ್ಮಿಣ್ಯಃ ಪ್ರಜಾಬಾಂಧವವರ್ಜಿತಾಃ ॥ ೭೦ ॥

ಮಾಲತೀಬಕುಲಾಂಭೋಜನೀಲೋತ್ಪಲ ಸುಗಂಧಿ ಯತ್ ।
ವದನಂ ಮುಚ್ಯತೇ ನೈತತ್ ಪಾನತಾಂಬೂಲಭೋಜನ್ಯೈಃ ॥ ೭೧ ॥

---

ಗಿಯೂ, ವಕ್ರವಾಗಿಯೂ, ಒರಟಾಗಿಯೂ, ಅಗಲವಾಗಿಯೂ ಇದ್ದರೂ ಅದು ಪ್ರಶಸ್ತವಲ್ಲ.

೬೮. ಕೆನ್ನೆಯು ಅತಿದಪ್ಪವೂ, ಅತಿಸಣ್ಣವೂ, ಅಲ್ಲದೆಯೂ, ವಕ್ರವಿಲ್ಲದೆಯೂ, ರೋಮಯುಕ್ತವಲ್ಲದೆಯೂ ಇದ್ದರೆ ಒಳ್ಳೆಯದು ಹೀಗಿಲ್ಲದಿದ್ದರೆ ಕೆಟ್ಟದ್ದು.

೬೯. ಮುಖವು ಚೌಕನಾಗಿದ್ದರೆ ವಂಚಕಳು, ದುಂಡುಮುಖವುಳ್ಳವಳು ಶುಭಕರಳು, ಕುದುರೆಯ ಮುಖದಂತೆ ಮುಖವುಳ್ಳ ಹೆಂಗಸು ಸಂತಾನಹೀನೆಯು. ದೊಡ್ಡ ಮುಖವುಳ್ಳವಳು ದರಿದ್ರಳಾಗುವಳು.

೭೦. ಯಾವ ಹೆಂಗಸರ ಮೋರೆಗಳು, ನಾಯಿ, ಹಂದಿ, ತೋಳ, ಗೂಬೆ, ಕಪಿ ಇವುಗಳ ಮುಖಗಳಂತಿರುವುವೋ ಅವರು ನಿರ್ದಯರೂ, ಪಾಪಕಾರ್ಯ ಮಾಡತಕ್ಕವರೂ ಆಗಿರುತ್ತಾರೆ. ಅವರಿಗೆ ಮಕ್ಕಳಾಗಲಿ, ಬಂಧುಗಳಾಗಲಿ ಇರುವುದಿಲ್ಲ.

೭೧. ಜಾಜಿಹೂವು, ಪಗಡೆಹೂವು, ಕಮಲ, ನೈದಿಲೆ ಇವುಗಳಂತೆ ಯಾರ ಮುಖವು ಸುವಾಸನಾಯುಕ್ತವಾಗಿರುವುದೋ, ಅವರುಗಳಿಗೆ ಯಾವಾಗಲೂ ಪಾನ ದ್ರವ್ಯಗಳು, ತಾಂಬೂಲ, ಭೋಜನ ಇವು ತಪ್ಪುವುದೇ ಇಲ್ಲ.

**ತಾಮ್ರಾಭಃ ಕಿಂಚಿದಾಲಂಭಃ ಸ್ಥೌಲ್ಯಕಾರ್ಶ್ಯವಿವರ್ಜಿತಃ ।**
**ಅಧರೋ ಯದಿ ತುಂಗಶ್ಚ ನಾರೀಣಾಂ ಭೋಗದಃ ಸದಾ ॥ ೭೨ ॥**

**ಸ್ಥೂಲೇ ಕಲಹಶೀಲಾ ಸ್ಯಾತ್ ದ್ವಿವರ್ಣೇ ಚಾತಿದುಃಖಿತಾ ।**
**ಉತ್ತರೋಷ್ಠೇನ ತೀಕ್ಷ್ಣೇನ ವನಿತಾ ಚಾತಿಕೋಪನಾ ॥ ೭೩ ॥**

**ಜಿಹ್ವಾ ತನುತರಾ ವಕ್ರಾ ತಾಮ್ರಾ ದೀರ್ಘಾ ಚ ಶಸ್ಯತೇ ।**
**ಸ್ಥೂಲಾ ಹ್ರಸ್ವಾ ವಿವರ್ಣಾಯು ವಕ್ರಾ ಭಿನ್ನಾ ಚ ನಿಂದಿತಾ ॥ ೭೪ ॥**

**ಶಂಖಕುಂದೇಂದುಧವಲೈಃ ಸ್ನಿಗ್ಧೈಸ್ತುಂಗೈರಸಂಧಿಭಿಃ ।**
**ಮಿಷ್ಟಾನ್ನ ಪಾನಮಾಪ್ನೋತಿ ದಂತೈರೇಭಿರನುನ್ನತೈಃ ॥ ೭೫ ॥**

---

೭೨. ಹೆಂಗಸಿನ ತುಟಿಯು ತಾಮ್ರದಂತೆ ಕೆಂಪುಬಣ್ಣವುಳ್ಳದೂ, ಸ್ವಲ್ಪ ಜೋಲುತ್ತಿರುವುದೂ, ಅತಿದಪ್ಪವೂ, ಅತಿಸಣ್ಣವೂ ಅಲ್ಲದೆ ಎತ್ತರವುಳ್ಳದ್ದೂ ಆಗಿದ್ದರೆ ಅದು ಸ್ತ್ರೀಯರಿಗೆ ಯಾವಾಗಲೂ ಭೋಗವನ್ನುಂಟುಮಾಡುವುದು.

೭೩, ತುಟಿದಪ್ಪವಾಗಿದ್ದ ಸ್ತ್ರೀಯು ಜಗಳಗಂಟಿಯಾಗುವಳು ಒಂದೊಂದು ಕಡೆ ಒಂದೊಂದು ಬಣ್ಣವಾಗಿದ್ದರೆ ತುಂಬ ದುಃಖಪ್ರದಳಾಗುವಳು. ಮೇಲ್ಗಡೆ ತುಟಿಯು ತೀಕ್ಷ್ಣವಾಗಿದ್ದರೆ ಅವಳು ಕೋಪಿಷ್ಠೆಯಾಗುವಳು.

೭೪ ನಾಲಗೆಯು ತೆಳ್ಳಗೂ ಕೆಂಪಾಗಿಯೂ ಡೊಂಕಾಗಿಯೂ ನೀಳವಾಗಿಯೂ ಇದ್ದರೆ ಪ್ರಶಸ್ತವು. ದಪ್ಪನಾಗಿಯೂ, ಮೋಟಾಗಿಯೂ, ಯಥೋಕ್ತ ಬಣ್ಣವಿಲ್ಲದೆ ಕಪ್ಪಾಗಿಯೂ ಡೊಂಕು ಇಲ್ಲದೆ ಒಡಕಲಾಗಿಯೂ ಎಂದರೆ ಸೀಳಿಯೂ ಇರುವುದು ದುರ್ಲಕ್ಷಣ.

೭೫. ಶಂಖ, ಮಲ್ಲಿಗೆಯಹೂ, ಚಂದ್ರ ಇವರಂತೆ ಹಲ್ಲುಗಳು ಶುಭ್ರವಾಗಿಯೂ ಮಿಂಚುತ್ತಲೂ ಎತ್ತರವಾಗಿಯೂ ಕಂಡಿಗಳಿಲ್ಲದೆಯೂ ಉಬ್ಬಿಕೊಳ್ಳದೆಯೂ ಇದ್ದರೆ, ಆಕೆ ಮಧುರಾನ್ನಭೋಜನ, ಮಧುರಪಾನ, ಇವನ್ನು ಹೊಂದುವಳು.

ಸೂಕ್ಷ್ಮೈರತಿಕೃಶೈರ್ಹ್ರಸ್ವೈಃ ಸ್ಫುಟಿತೈರ್ವಿರಲೈಸ್ತಥಾ ।
ರೂಕ್ಷೈಶ್ಚ ದುಃಖಿತಾ ನಿತ್ಯಂ ವಿಕಟೈರ್ಭಾಮಿನೀ ಭವೇತ್ ॥ ೭೬ ॥

ಸುಮೃಷ್ಟದರ್ಪಣಾಂಭೋಜ ಪೂರ್ಣಬಿಂಬೇಂದುಸನ್ನಿಭಂ ।
ವದನಂ ವರನಾರೀಣಾಂ ಅಭೀಷ್ಟಫಲದಂ ಸ್ಮೃತಂ ॥ ೭೭ ॥

ನ ಸ್ಥೂಲಾ ನ ಕೃಶಾ ವಕ್ರಾ ನಾತಿದೀರ್ಘಾ ಸಮುನ್ನತಾ ।
ಈದೃಶೀ ನಾಸಿಕಾ ಯಸ್ಯಾಃ ಸಾ ಧನ್ಯಾ ತು ಶುಭಂಕರೀ ॥ ೭೮ ॥

ಉನ್ನತಾ ಮೃದುಲಾ ಯಾ ಚ ರೇಖಾ ಶುದ್ಧಾ ನ ಸಂಗತಾ ।
ಭ್ರೂರ್ವಕ್ತ್ರತುಲ್ಯಾ ಸೂಕ್ಷ್ಮಾ ಚ ಯೋಷಿತಾಂ ಸಾ ಸುಖಾವಹಾ ॥ ೭೯ ॥

ಧನುಸ್ತುಲ್ಯಾಭಿಃ ಸೌಭಾಗ್ಯಂ ವಂಧ್ಯಾಸ್ಯಾದ್ದೀರ್ಘರೋಮಭಿಃ ।
ಪಿಂಗಲಾ ಸಂಗತಾ ಹ್ರಸ್ವಾ ದಾರಿದ್ರ್ಯಾಯ ನ ಸಂಶಯ ॥ ೮೦ ॥

---

೭೬. ಸಣ್ಣವಾಗಿಯೂ, ಬಹಳ ತೆಳ್ಳಗೂ, ಮೋಟಾಗಿಯೂ, ಒಡಕಾಗಿಯೂ, ದೂರದೂರವಾಗಿಯೂ, ಒರಟಾಗಿಯೂ, ಇರುವ ಹಲ್ಲುಳ್ಳವಳು ನಿತ್ಯದುಃಖಿನಿಯಾಗುವಳು. ಹಲ್ಲುಗಳು ನೋಡುವುದಕ್ಕೆ (ವಿಕಟ) ಅಸಹ್ಯಗಳಾಗಿದ್ದರೆ ಕೋಪಿಷ್ಠೆಯಾಗುವಳು.

೭೭. ಚೆನ್ನಾಗಿ ಒರಸಿದ ಕನ್ನಡಿ, ಕಮಲ, ಪೂರ್ಣಚಂದ್ರಬಿಂಬ, ಇವುಗಳಂತೆ ಮುಖವು ಮನೋಹರವಾಗಿದ್ದರೆ ಇಷ್ಟಾರ್ಥವನ್ನು ಕೊಡತಕ್ಕದ್ದಾಗುತ್ತದೆಂದು ಹೇಳಿಪ್ಪೆ

೭೮. ಯಾವಳ ಮೂಗು ಅತಿದಪ್ಪಗೂ ಅತಿಸಣ್ಣಗೂ ಇಲ್ಲದೆ, ಡೊಂಕಿಲ್ಲದೆ, ಬಹಳ ಉದ್ದವೂ ಎತ್ತರವೂ ಇಲ್ಲದೆ, ಇರುವುದೋ ಅವಳೇ ಧನ್ಯೆ. ಅವಳಿಂದ ಒಳ್ಳೆಯದಾಗುವುದು.

೭೯. ಹುಬ್ಬುಗಳ ರೇಖೆಯು ಉನ್ನತವಾಗಿಯೂ, ಮೃದುವಾಗಿಯೂ, ಮುಖಕ್ಕೆ ಒಪ್ಪುವಂತೆ ಹೊಂದಿಕೊಂಡೂ, ಸೂಕ್ಷ್ಮವಾಗಿಯೂ, ಇದ್ದರೆ ಆ ಹೆಂಗಸರು, ಸುಖವನ್ನುಂಟುಮಾಡತಕ್ಕವರಾಗುವರು.

೮೦. ಹುಬ್ಬುಗಳು ಧನುಸ್ಸಿನಾಕಾರವಾಗಿದ್ದರೆ ಆಕೆಗೆ ಸೌಭಾಗ್ಯವುಂಟಾಗುತ್ತದೆ. ಯಾರ ಹುಬ್ಬಿನ ಕೂದಲು ಬಹಳ ಉದ್ದವಾಗಿ ಎಂದರೆ ಸಾಮಾನ್ಯವಾಗಿರ

**ನೀಲೋತ್ಪಲದಲಪ್ರಖ್ಯೈರಾತಾಮ್ರೈಶ್ಚಾರುಪಕ್ಷ್ಮಭಿಃ ।**
**ವನಿತಾನಯನೈರೇಭಿಃ ಭೋಗಸೌಭಾಗ್ಯಭಾಗಿನೀ ॥ ೮೧ ॥**

**ಖಂಜನಾಕ್ಷೀ ಮೃಗಾಕ್ಷೀ ಚ ವರಾಹಾಕ್ಷೀ ವರಾಂಗನಾ ।**
**ಯತ್ರಯತ್ರ ಸಮುತ್ಪನ್ನಾ ಮಹಾಂತಂ ಭೋಗಮಶ್ನುತೇ ॥ ೮೨ ॥**

**ಅಗಂಭೀರೈರಸಂಶ್ಲಿಷ್ಟೈರ್ಬಹುರೇಖಾ ವಿಭೂಷಿತೈಃ ।**
**ರಾಜಪತ್ನ್ಯೋ ಭವಂತೀಹ ನಯನೈರ್ಮಧುಪಿಂಗಲೈಃ ॥ ೮೩ ॥**

**ವಾಯಸಾಕೃತಿನೇತ್ರಾಣಿ ದೀರ್ಘಾಪಾಂಗಾನಿ ಯೋಷಿತಾಂ ।**
**ಅನಾವಿಲಾನಿ ಚಾರೂಣಿ ಭವಂತಿ ಹಿ ವಿಭೂತಯೇ ॥ ೮೪ ॥**

---

ಬೇಕಾದ ಪರಿಮಾಣಕ್ಕಿಂತ ನೀಳವಾಗಿರುವುದೋ ಅಂಥವಳು ಬಂಜೆಯಾಗುವಳು. ಪಿಂಗಳವರ್ಣವಾಗಿ ಪರಸ್ಪರ ಕೂಡಿಕೊಂಡು ತುಂಡಾಗಿದ್ದರೆ ಬಡತನವುಂಟಾಗುವುದು ನಿಶ್ಚಯ.

೮೧. ನೈದಿಲೆಯ ಎಸಳಿನಂತೆ ಶೋಭಿಸುವುದೂ, ಸ್ವಲ್ಪ ಕೆಂಪುಬಣ್ಣವುಳ್ಳದೂ, ಸುಂದರವಾದ ರೆಪ್ಪೆಯುಳ್ಳದೂ, ಆಗಿರುವ ಕಣ್ಣುಗಳಿಂದ ಕೂಡಿದವಳು ಭೋಗವನ್ನೂ ಸೌಭಾಗ್ಯವನ್ನೂ ಹೆಚ್ಚಿಸತಕ್ಕವಳಾಗುವಳು.

೮೨. ಖಂಜನವೆಂಬ ಪಕ್ಷಿಯ ಕಣ್ಣುಗಳಂತೆ ಕಪ್ಪಾದ ಕಣ್ಣುಗಳುಳ್ಳವಳೂ, ಜಿಂಕೆಯಕಣ್ಣಿನಂತೆ ಕಣ್ಣುಳ್ಳವಳೂ, ಮತ್ತು ಹಂದಿಯ ಕಣ್ಣುಗಳಂತೆ ಕಣ್ಣುಳ್ಳವಳೂ, ಆದ ಸ್ತ್ರೀಯು ಶ್ರೇಷ್ಠಳು. ಆಕೆ ಯಾವ ಕುಲದಲ್ಲಿ ಹುಟ್ಟಿರುವಳಾದರೂ ಮಹಾಭೋಗವನ್ನನುಭವಿಸುತ್ತಾಳೆ.

೮೩. ಆಳವಿಲ್ಲದೆ, (ಗುಳಿಗಣ್ಣಿಲ್ಲದ) ಒಂದರೊಡನೊಂದು ಸೇರದೆ, ಅನೇಕ ಗೆರೆಗಳಿಂದ ಅಲಂಕೃತಗಳಾದ, ಕಣ್ಣುಗಳು, ಜೇನು ತುಪ್ಪದಂತೆ ಪಿಂಗಳ ವರ್ಣಗಳಾಗಿದ್ದರೆ ಅಂತಹ ಸ್ತ್ರೀಯರು ರಾಜರ ಹೆಂಡತಿಯರಾಗುವರು.

೮೪. ಕಾಗೆಯ ಕಣ್ಣಿನಂತೆ ಆಕಾರವಾಗಿ ಉದ್ದವಾದ ಕಡೆಗಣ್ಣುಗಳುಳ್ಳದ್ದಾಗಿ ನಿರ್ಮಲವಾಗಿ ಮನೋಹರಗಳಾಗಿರುವ ಕಣ್ಣುಗಳುಳ್ಳ ಸ್ತ್ರೀಯರು ಸಂಪತ್ತನ್ನುಂಟು ಮಾಡುತ್ತಾರೆ

ಗಂಭೀರೈಃ ಪಿಂಗಲೈಶ್ಚೈವ ದುಃಖಿತಾಃ ಸ್ಯುಶ್ಚಿರಾಯುಷಃ ।
ವಯೋಮಧ್ಯೇ ತ್ಯಜೇತ್ ಪ್ರಾಣಾನ್ ಉನ್ನತಾಕ್ಷೀ ತು ಯಾಂಗನಾ ॥೮೫॥

ರಕ್ತಾಕ್ಷೀ ವಿಷಮಾಕ್ಷೀ ಚ ಧೂಮ್ರಾಕ್ಷೀ ಪ್ರೇತಲೋಚನಾ ।
ವರ್ಜನೀಯಾ ಸದಾ ನಾರೀ ಶ್ವನೇತ್ರಾಚೈವ ದೂರತಃ ॥ ೮೬ ॥

ಉದ್ಭ್ರಾಂತಕೈಃ ಕರೈಶ್ಚಿತ್ರೈರ್ನಯನೈಸ್ತ್ವಂಗನಾ ಸ್ತ್ವಿಹ ।
ಮದ್ಯಮಾಂಸಪ್ರಿಯಾ ನಿತ್ಯಂ ಚಪಲಾಶ್ಚೈವ ಸರ್ವತಃ ॥ ೮೭ ॥

ಕರಾಲಾಕೃತಯಃ ಕರ್ಣಾ ನಭಃ ಶಬ್ದಾಸ್ತು ಸಂಸ್ಥಿತಾಃ ।
ವಹಂತಿ ವಿಕಸತ್ಕಾಂತಿ ಹೇಮರತ್ನವಿಭೂಷಣಂ ॥ ೮೮ ॥

---

೮೫. ಕಣ್ಣುಗಳು ಆಳವಾಗಿಯೂ ಮತ್ತು ಹಳದಿಬಣ್ಣವುಳ್ಳವಾಗಿಯೂ ಇದ್ದರೆ ದುಃಖಿತೆಯರೂ ದೀರ್ಘಾಯುಷ್ಮತಿಯರೂ ಆಗುವರು. ಯಾವ ಹೆಂಗಸಿನ ಕಣ್ಣುಗಳು ಎತ್ತರವಾಗಿರುವವೋ ಅವಳು ಮಧ್ಯವಯಸ್ಸಿನಲ್ಲೇ ಪ್ರಾಣಗಳನ್ನು ಕಳೆದುಕೊಳ್ಳುವಳು.

೮೬. ಕೆಂಪು ಕಣ್ಣುಗಳುಳ್ಳವಳನ್ನೂ, ಒಂದುಮೇಲೆ ಒಂದುಕೆಳಗೆ ಹೀಗೆ ವ್ಯತ್ಯಾಸವಾದ ಕಣ್ಣುಗಳುಳ್ಳವಳನ್ನೂ, ಊದಾಬಣ್ಣದ ಕಣ್ಣುಗಳುಳ್ಳವಳನ್ನೂ, ಹೆಣದ ಕಣ್ಣುಗಳಂತಹ ಕಣ್ಣುಗಳುಳ್ಳವಳನ್ನೂ, ನಾಯಿಯ ಕಣ್ಣುಗಳಂತಹ ಕಣ್ಣುಳ್ಳವಳನ್ನೂ, ದೂರಮಾಡಬೇಕು.

೮೭. ಮೇಲಕ್ಕೆತ್ತಿ ಆಡಿಸುತ್ತಿರುವ ಕೈಯುಳ್ಳವರಾಗಿ ಅನೇಕ ವರ್ಣಗಳ ಕಣ್ಣುಗಳಿಂದ ಕೂಡಿದ ಹೆಂಗಸರು, ಲೋಕದಲ್ಲಿ ಮದ್ಯಮಾಂಸಪ್ರಿಯರಾಗಿ ಚಪಲರಾಗಿ ಎಲ್ಲೆಲ್ಲಿಯೂ ತಿರುಗುತ್ತಿರುತ್ತಾರೆ.

೮೮. ಕಿವಿಗಳು ಜೃಂಭಿತಗಳಾಗಿಯೂ ಆಕಾಶವೆಂಬ ಶಬ್ದಗುಣವುಳ್ಳದ್ದಾಗಿಯೂ ಇದ್ದರೆ ಕಾಂತಿಯುಕ್ತವಾದ ಸ್ವರ್ಣರತ್ನಗಳಿಂದ ಪ್ರಕಾಶಿಸುವ ಒಡವೆಗಳನ್ನು ಧರಿಸುತ್ತಾರೆ.

**ಖರೋಷ್ಟ್ರ ನಕುಲೋಲೂಕ ಕಪಿಲಶ್ರವಣಾಃ ಸ್ತ್ರಿಯಃ ।**
**ಪ್ರಾಪ್ನುವಂತಿ ಮಹದ್ದುಃಖಂ ಪ್ರಾಯಶಃ ಪ್ರವ್ರಜಂತಿ ಚ ॥ ೮೯ ॥**

**ಈಷದಾಪಾಂಡುಗಂಡಾಯಾ ಸುವೃತ್ತಾ ಪರ್ವಣಿ ತ್ವಿಹ ।**
**ಪ್ರಶಸ್ತಾ ನಿಂದಿತಾ ತ್ವನ್ಯಾ ರೋಮಕೂಪಕದೂಷಿತಾ ॥ ೯೦ ॥**

**ಅರ್ಧೇಂದುಪ್ರತಿಮಾಭೋಗಮರೋಮಂ ತು ಸಮಾಹಿತಂ ।**
**ಭೋಗಾರೋಗ್ಯಕರಂ ಶ್ರೇಷ್ಠಂ ಲಲಾಟಂ ವರಯೋಷಿತಾಂ ॥ ೯೧ ॥**

**ದ್ವಿಗುಣಂ ಪರಿಣಾಹೇನ ಲಲಾಟಂ ವಿಹಿತಂ ಚ ಯತ್ ।**
**ಶಿರಃ ಪ್ರಶಸ್ತಂ ನಾರೀಣಾಮಧನ್ಯಾ ಹಸ್ತಿಮಸ್ತಕಾ ॥ ೯೨ ॥**

**ಸೂಕ್ಷ್ಮಾಃ ಕೃಷ್ಣಾ ಮೃದುಸ್ನಿಗ್ಧಾಃ ಕುಂಚಿತಾಗ್ರಾ ಶಿರೋರುಹಾಃ ।**
**ಭವಂತಿ ಶ್ರೇಯಸೇ ಸ್ತ್ರೀಣಾಮನ್ಯೇ ಸ್ಯುಃ ಕ್ಲೇಶಶೋಕದಾ ॥ ೯೩ ॥**

---

೮೯. ಕತ್ತೆ, ಒಂಟೆ, ಮುಂಗಸಿ, ಗೂಬೆ ಇವುಗಳಂತೆ ಕಪಿಲವರ್ಣದ ಕಿವಿಗಳುಳ್ಳ ಹೆಂಗಸರು ಹೆಚ್ಚು ದುಃಖಕ್ಕೆ ಗುರಿಯಾಗುವರು. ಅಂಥವರು ಪ್ರಾಯಶಃ ಮನೆಯನ್ನು ಬಿಟ್ಟು ಸನ್ಯಾಸಿನಿಯರಾಗಿ ಹೋಗುತ್ತಾರೆ.

೯೦. ಯಾವಳ ಕೆನ್ನೆಯು ಬಹುಶುಭ್ರವಾಗಿಯೂ ಬೆರಳ ಗಿಣ್ಣುಗಳು ಬಹುದುಂಡಾಗಿಯೂ ಇರುವುವೋ ಅವಳು ಶ್ಲಾಘ್ಯಳು. ಹಾಗಿರದೆ ರೋಮಕೂಪಗಳಿಂದ ದೂಷಿತಳಾಗಿದ್ದರೆ ನಿಂದಿತಳಾಗುವಳು.

೯೧. ಉತ್ತಮಸ್ತ್ರೀಯರಿಗೆ ಅರ್ಧಚಂದ್ರನಂತೆ ವಿಸ್ತಾರವುಳ್ಳದ್ದಾಗಿ, ಕೂದಲುಗಳಿಲ್ಲದ ಶ್ರೇಷ್ಠವಾದ ಹಣೆಯು ಇರುವುದು. ಇದು ಭೋಗವನ್ನೂ ಆರೋಗ್ಯವನ್ನೂ ಉಂಟುಮಾಡುವುದು.

೯೨. ಈಗ ಹೇಳಿದುದರ ದ್ವಿಗುಣವಾದ ವಿಸ್ತಾರವುಳ್ಳ ಲಲಾಟವೂ ಇದ್ದು, ತಲೆಯೂ ಪ್ರಶಸ್ತವಾಗಿದ್ದರೆ ಒಳ್ಳೆಯದು. ಆನೆಯ ತಲೆಯಂತೆ ಅತಿದಪ್ಪವಾದ ತಲೆಯುಳ್ಳವಳು ಪುಣ್ಯವಂತೆಯಲ್ಲ.

೯೩. ತಲೆಯ ಕೂದಲುಗಳು ಸಣ್ಣನಾಗಿಯೂ, ಕಪ್ಪಗೂ, ಮೃದುವಾಗಿ ಮಿಂಚುತ್ತಲೂ, ತುದಿಯಲ್ಲಿ ಸ್ವಲ್ಪಬಗ್ಗಿಯೂ, ಇದ್ದರೆ ಸ್ತ್ರೀಯರಿಗೆ ಶ್ರೇಯಸ್ಕರಗಳಾಗುವುವು. ಬೇರೆಯವು ದುಃಖಶೋಕಗಳನ್ನು ಕೊಡುವುವು.

ಹಂಸಕೋಕಿಲವೀಣಾಲಿಶಿಖಿವೇಣುಸ್ವರಾ ಸ್ತ್ರಿಯಃ ।
ಪ್ರಾಪ್ನುವಂತಿ ಬಹೂನ್ ಭೋಗಾನ್ ಭೃತ್ಯಾನಾಜ್ಞಾಪೆಯಾಃ ॥ ೯೪ ॥

ಭಿನ್ನಕಾಂಸ್ಯಸ್ವರಾ ನಾರೀ ಖರಕಾಕಸ್ವರಾ ಚ ಯಾ ।
ರೋಗಂ ವ್ಯಾಧಿಂ ಭಯಂ ಶೋಕಂ ದಾರಿದ್ರ್ಯಂಚಾಧಿಗಚ್ಛತಿ ॥ ೯೫ ॥

ಹಂಸಗೋವೃಷಚಕ್ರಾಹ್ವಮತ್ತಮಾತಂಗಗಾಮಿನೀ ।
ಸ್ವಕುಲಂ ದ್ಯೋತಯೇನ್ನಾರೀ ಮಹಿಷೀ ಪಾರ್ಥಿವಸ್ಯ ಚ ॥ ೯೬ ॥

ಶ್ವಶೃಗಾಲಗತಿರ್ನಿಂದ್ಯಾ ಯಾ ಚ ವಾಯಸವದ್ವ್ರಜೇತ್ ।
ದಾಸೀಮೃಗಗತಿರ್ನಾರೀ ದ್ರುತಗಾಮೀ ಚ ಬಂಧಕೀ ॥ ೯೭ ॥

---

೯೪. ಹಂಸಪಕ್ಷಿ, ಕೋಗಿಲೆ, ವೀಣೆ, ದುಂಬಿ, ನವಿಲು, ಕೊಳಲು ಇವುಗಳ ಸ್ವರಗಳಂತೆ ಸ್ವರಗಳುಳ್ಳ ಸ್ತ್ರೀಯರು ಅನೇಕ ಸುಖಗಳನ್ನು ಪಡೆದು ಭೃತ್ಯರಿಗೆ ಅಪ್ಪಣೆ ಮಾಡುತ್ತಾರೆ. ಎಂದರೆ ಅನೇಕ ಭೃತ್ಯರನ್ನು ನೇಮಿಸಿಕೊಳ್ಳುವ ಉತ್ತಮಸ್ಥಿತಿಯುಳ್ಳವರಾಗುತ್ತಾರೆ.

೯೫. ಒಡಕುಕಂಚಿನ ಶಬ್ದದಂತೆ ಯಾವಳ ಧ್ವನಿಯಿರುವುದೋ ಯಾವಳ ಸ್ವರವು ಕಾಗೆಯ ಸ್ವರದಂತೆ ಕ್ರೂರವಾಗಿರುವುದೋ ಅವಳು ಮನೋರೋಗ, ಶಾರೀರ ರೋಗವನ್ನೂ ಭಯ, ಶೋಕ, ಬಡತನ ಇವುಗಳನ್ನೂ ಹೊಂದುತ್ತಾಳೆ.

೯೬. ಹಂಸಪಕ್ಷಿ, ಎತ್ತು, ಚಕ್ರವಾಕಪಕ್ಷಿ, ಮದಿಸಿದ ಆನೆ ಇವುಗಳ ನಡಗೆಯಂತೆ ನಡಗೆಯುಳ್ಳವಳು ತನ್ನ ವಂಶವನ್ನು ಬೆಳಗುವಳು. ಮತ್ತು ದೊರೆಯ ಪಟ್ಟದರಾಣಿಯಾಗುವಳು.

೯೭. ನಾಯಿನರಿಗಳಂತೆಯೂ ಕಾಗೆಯಂತೆಯೂ ನಡೆಯುವವಳು ನಿಂದ್ಯಳು. ಜಿಂಕೆಯಂತೆ ನಡೆಯುವವಳು ಚಾಕರಳಾಗುವಳು. ಬೇಗಬೇಗ ನಡೆಯುವಳು ವ್ಯಭಿಚಾರಿಣಿಯಾಗುವಳು.

ಫಲಿನೀರೋಚನಾಹೇಮಕುಂಕುಮಪ್ರಭ ಏವ ಚ ।
ವರ್ಣಃ ಶುಭಕರಃ ಸ್ತ್ರೀಣಾಂ ಯಶ್ಚ ದೂರ್ವಾಂಕುರೋಪಮಃ ॥ ೯೮ ॥

ಮೃದೂನಿ ಮೃದುರೋಮಾಣಿ ನಾತ್ಯಂತಸ್ವೇದಕಾನಿ ಚ ।
ಸುರಭೀಣಿ ಚ ಗಾತ್ರಾಣಿ ಯಾಸಾಂ ತಾಃ ಪೂಜಿತಾಃ ಸ್ತ್ರಿಯಃ ॥ ೯೯ ॥

ನೋದ್ವಹೇತ್ ಕಪಿಲಾಂ ಕನ್ಯಾಂ ನಾಧಿಕಾಂಗೀಂ ನ ರೋಹಿಣೀಂ ।
ನಾಲೋಮಿಕಾಂ ನಾತಿಹ್ರಸ್ವಾಂ ನ ವಾಚಾಟಾಂ ನ ಪಿಂಗಲಾಂ ॥ ೧೦೦ ॥

ನರ್ಕ್ಷವೃಕ್ಷನದೀನಾಮ್ನೀಂ ನಾಂತ್ಯಪರ್ವತನಾಮಿಕಾಂ ।
ನ ಪಕ್ಷ್ಯಹಿಪ್ರೇಷ್ಯನಾಮ್ನೀಂ ನ ಚ ಭೀಷಣನಾಮಿಕಾಂ ॥ ೧೦೧ ॥

---

೯೮. ಮೈಬಣ್ಣವು ನವಣೆ, ಗೋರೋಚನ, ಚಿನ್ನ, ಕುಂಕುಮಕೇಸರಿ ಇವುಗಳ ಬಣ್ಣದಂತಿರುವುದು ಶುಭಕರವು. ಮತ್ತು ಎಳಗರಿಕೆಯಂತಹ ಬಣ್ಣವೂ ಒಳ್ಳೆಯದು.

೯೯. ಯಾವಳ ಮೈಯಲ್ಲಿ ಮೃದುತ್ವವೂ ಮೃದುರೋಮಗಳೂ ಇದ್ದು ಹೆಚ್ಚಾಗಿ ಬೆವರಿಲ್ಲದೇ ಇರುವುದೋ ಮತ್ತು ಯಾರ ಅಂಗಗಳಲ್ಲಿ ಸುಗಂಧ (ಒಳ್ಳೆಯ ವಾಸನೆ) ಇರುವುದೋ ಆ ಸ್ತ್ರೀಯರು ಶ್ಲಾಘ್ಯರು.

೧೦೦. ಕೆಂಚುಬಣ್ಣವುಳ್ಳವಳೂ, ಆರುಬೆರಳು ಮುಂತಾದ ಹೆಚ್ಚು ಅಂಗಗಳುಳ್ಳವಳೂ, ರೋಗಿಷ್ಠೆಯೂ, ಮೈಯಲ್ಲಿ ರೋಮಗಳಿಲ್ಲದವಳೂ, ಬಹು ಗಿಡ್ಡಾದವಳೂ, ಬಹಳ ದೂಷ್ಯವಾದ ಮಾತುಗಳುಳ್ಳವಳೂ, ಹಳದಿ ಬಣ್ಣವುಳ್ಳವಳೂ, ನಕ್ಷತ್ರನಾಮವುಳ್ಳವಳೂ, ವೃಕ್ಷನಾಮವುಳ್ಳವಳೂ, (ಗಿರಿಯಮ್ಮ, ಬೆಟ್ಟಮ್ಮ ಮೊದಲಾಗಿ) ಬೆಟ್ಟಗಳ ಹೆಸರುಗಳುಳ್ಳವಳೂ,

೧೦೧. ಗುಬ್ಬಮ್ಮ, ಅಂಚಮ್ಮ ಎಂಬದಾಗಿ ಪಕ್ಷಿಗಳ ಹೆಸರುಗಳುಳ್ಳವರು ನಾಗಮ್ಮ ಭುಜಂಗಮ್ಮ, ಭೋಗಮ್ಮ ಎಂಬದಾಗಿ ಸರ್ಪದ ಹೆಸರುಳ್ಳವರು, ದಾಸಿ ಮೊದಲಾದ ಸೇವಕಜನರ ಹೆಸರುಳ್ಳವರು ಇಂತಹ ಸ್ತ್ರೀಯರನ್ನು ಮದುವೆಯಾಗಬಾರದು.

ಅವ್ಯಂಗಾಂಗೀಂ ಸೌಮ್ಯನಾಮ್ನೀಂ ಹಂಸವಾರಣಗಾಮಿನೀಂ ।
ತನುಲೋಮಕೇಶದಶನಾಂ ಮೃದ್ವಂಗೀಮುದ್ವಹೇತ್ ಸ್ತ್ರಿಯಂ ॥ ೧೦೨ ॥

ಮಹಾಂತ್ಯಪಿ ಸಮೃದ್ಧಾನಿ ಗೋಜಾವಿಧನಧಾನ್ಯತಃ ।
ಸ್ತ್ರೀಸಂಬಂಧೇ ದಶೈತಾನಿ ಕುಲಾನಿ ಪರಿವರ್ಜಯೇತ್ ॥ ೧೦೩ ॥

ಹೀನಕ್ರಿಯಂ ನಿಷ್ಪುರುಷಂ ನಿಶ್ಛಂದೋ ರೋಮಶಾರ್ಶಸಮ್ ।
ಕ್ಷಯಾಮಯಾವ್ಯಪಸ್ಮಾರಿಶ್ವಿತ್ರ ಕುಷ್ಠಿ ಕುಲಾನಿ ಚ ॥ ೧೦೪ ॥

ಪಾದೌ ಸುಗುಲ್ಫೌ ಪ್ರಥಮಂ ಪ್ರತಿಷ್ಠೌ ।
ಜಂಘೇ ದ್ವಿತೀಯಂ ಚ ಸುಜಾನುಚಕ್ರೇ ॥
ಮೇಢ್ರೋರು ಗುಹ್ಯಂ ಚ ತತಸ್ತೃತೀಯಂ ।
ನಾಭಿಃ ಕಟಿಶ್ಚೇತಿ ಚತುರ್ಥಮಾಹುಃ ॥ ೧೦೫ ॥

---

೧೦೨. ವಿರೂಪಗಳಾದ ಅಂಗಗಳಿಲ್ಲದವಳೂ ಒಳ್ಳೆಯ ಹೆಸರುಳ್ಳವಳೂ ಹಂಸ, ಆನೆ ಇವುಗಳಂತೆ ನಡುಗೆಯುಳ್ಳವಳೂ ಸರಿಯಾಗಿರುವ ಕೂದಲುಗಳೂ ಹಲ್ಲುಗಳೂ, ಉಳ್ಳವಳೂ, ಮೃದುವಾದ ಮೈಯುಳ್ಳವಳೂ, ಆದ ಸ್ತ್ರೀಯನ್ನು ಮದುವೆಯಾಗ ಬೇಕು.

೧೦೩. ಸ್ತ್ರೀಸಂಬಂಧಮಾಡುವುದರಲ್ಲಿ ಮಿಕ್ಕ ದನ, ಆಡು, ಕುರಿ, ಧನ, ಧಾನ್ಯ ಇವುಗಳ ಸಮೃದ್ಧಿಗಿಂತಲೂ ಈ ಲಕ್ಷಣ ಮುಖ್ಯ. ದುರ್ಲಕ್ಷಣದವರು ಹುಟ್ಟಿ ದಂತಹ ಹತ್ತುಕುಲಗಳನ್ನು ಬಿಟ್ಟೇ ಬಿಡಬೇಕು.

೧೦೪. ನೀಚಕಾರ್ಯಗಳನ್ನು ಮಾಡುವವನು, ಪುರುಷಶಕ್ತಿ (ಗಂಡಸುತನ) ಇಲ್ಲದವನು, ವಿಶೇಷರೋಮವಿಲ್ಲದವನು, ಮೊಳೆರೋಗ (ಮೂಲವ್ಯಾಧಿ) ಉಳ್ಳವನು ಕ್ಷಯರೋಗ, ಅಪಸ್ಮಾರ (ಬೀಳುವರೋಗ) ವುಳ್ಳವನು, ತೊನ್ನುಳ್ಳವಂಶದಲ್ಲಿ ಎಲ್ಲಿ ಯಾದರೂ ಹುಟ್ಟಿದವನು, ಇಂಥವರು ಸಂಬಂಧಕ್ಕೆ ಉತ್ತಮರಲ್ಲ.

೧೦೫. ಪಾದಗಳಲ್ಲಿನ ಹರಡು ಸುಂದರವಾಗಿರುವುದೂ ಪಾದಗಳು ನೆಲದ ಮೇಲೆ ಚೆನ್ನಾಗಿ ಊರುವಂತೆ ಇರುವುದೂ ಒಂದನೆಯದು. ದುಂಡಗಿರುವ ಮೊಣ ಕಾಲುಗಳು ಮಂಡಿ ಇವು ಇರುವುದು ಎರಡನೆಯದು. ಮೇಢ್ರ ತೊಡೆಗಳು ಗುಪ್ತ ಸ್ಥಾನ ಇವುಗಳ ವಿಚಾರ ಮೂರನೆಯದು. ಹೊಕ್ಕಳು, ಸೊಂಟ ಇವುಗಳವಿಚಾರ ನಾಲ್ಕನೆಯದು.

ಉದರಂ ಕಥಯಂತಿ ಪಂಚಮಂ ।
ಹೃದಯಂ ಷಷ್ಠಮಥ ಸ್ತನಾನ್ವಿತಂ ॥
ಅಥ ಸಪ್ತಮಮಂಸಜತ್ರುಣೀ ।
ಕಥಯಂತ್ಯಷ್ಟಮಮೋಷ್ಠಕಂಧರೇ ॥ ೧೦೬ ॥

ನವಮಂ ನಯನೇ ಚ ಸಭ್ರುಣೀ ।
ಸಲಲಾಟಂ ದಶಮಂ ಶಿರಸ್ತಥಾ ॥
ಅಶುಭೇಷ್ವಶುಭಂ ದಶಾಪಲಂ ।
ಚರಣಾದ್ಯಂ ಸು ಶುಭೇಷು ಶೋಭನಂ ॥ ೧೦೭ ॥

ಇದಂ ಮಹಾತ್ಮಾ ಸ ಮಹಾನುಭಾವಃ ।
ಶಚೀನಿಮಿತ್ತಂ ಗುರುರಬ್ರವೀದ್ದ್ವಿಜಾಃ ॥
ಶಕ್ರೇಣ ಪೃಷ್ಟಃ ಸವಿಶೇಷಮುತ್ತಮಂ ।
ಸಂಲಕ್ಷ್ಯಮುಕ್ತಂ ವರಯೋಷಲಕ್ಷಣಂ ॥ ೧೦೮ ॥

ಮತ್ಸಕಾಶಾತ್ಪುನಃ ಶ್ರುತ್ವಾ ಲಕ್ಷಣಂ ಪುರುಷಸ್ಯ ಚ ।
ಯಥಾಧುನಾ ಭವದ್ಭಿಸ್ತು ಶ್ರುತಂ ಮತ್ತೋ ದ್ವಿಜೋತ್ತಮಾಃ ॥ ೧೦೯ ॥

---

೧೦೬. ಹೊಟ್ಟೆಯ ಲಕ್ಷಣ ಐದನೆಯದು. ಸ್ತನಗಳಿಂದ ಕೂಡಿದ ಹೃದಯ ಆರನೆಯದು. ಹೆಗಲು ಮತ್ತು ಕುತ್ತಿಗೆಯ ಸಂಧಿಸ್ಥಾನ ಏಳನೆಯದು. ತುಟಿ ಮತ್ತು ಕತ್ತು ಇವು ಎಂಟನೆಯದು. ಹುಬ್ಬು ಸಹಿತವಾದಕಣ್ಣು ಒಂಭತ್ತನೆಯದು. ಹಣೆ ಮತ್ತು ತಲೆ ಇವು ಹತ್ತನೆಯದು ಎಂದು ಹೇಳುತ್ತಾರೆ.

೧೦೭. ಪಾದ ಮೊದಲಾದ ಅವಯವಗಳು ಪುರುಷನ ಉತ್ತಮ ದಶಾಫಲಾನುಗುಣವಾಗಿ ಶುಭಲಕ್ಷಣ ಯುಕ್ತವಾಗಿಯೂ ಹೀನದಶಾಫಲಾನುಸಾರ ಅಶುಭಲಕ್ಷಣ ಯುಕ್ತವಾಗಿಯೂ ಇರುವುವು.

೧೦೮. ಓ ಬ್ರಾಹ್ಮಣರೇ! ಮಹಾತ್ಮನೂ ಮಹಾನುಭಾವನೂ ಆದ ಬೃಹಸ್ಪತ್ಯಾಚಾರ್ಯನು ಶಚಿಯನ್ನೇ ವಿಷಯವಾಗಿ ಮಾಡಿಕೊಂಡು ಇಂದ್ರನು ಸ್ತ್ರೀಲಕ್ಷಣವನ್ನು ಕುರಿತು ಕೇಳಿದಾಗ ವಿಶೇಷ ಉತ್ತಮವಾಗಿ ನಾವು ಗಮನಿಸಬೇಕಾಗಿರುವ ವರಲಕ್ಷಣವನ್ನೂ ಸ್ತ್ರೀಲಕ್ಷಣವನ್ನೂ ಹೇಳಿದನು.

೧೦೯. ನನ್ನಿಂದ ಅದನ್ನೇ ಪುನಃ ಕೇಳಿದಿರಿ, ಎಲೈ ಬ್ರಾಹ್ಮಣಶ್ರೇಷ್ಠರೇ! ಈಗ ನನ್ನಿಂದ ಕೇಳಿದಂತೆ;

**ಲಕ್ಷಣೇಭ್ಯಃ ಪ್ರಶಸ್ತಂ ತು ಸ್ತ್ರೀಣಾಂ ಸದ್ವೃತ್ತಮುಚ್ಯತೇ ।**
**ಸದ್ವೃತ್ತಮುಕ್ತ್ವಾ ಯಾ ಸ್ತ್ರೀ ಸಾ ಪ್ರಶಸ್ತಾ ನ ಚ ಲಕ್ಷಣೈಃ ॥ ೧೧೦ ॥**

**ಈದೃಗ್ಲಕ್ಷಣ ಸಂಪನ್ನಾಂ ಸುಕನ್ಯಾಮುದ್ವಹೇತ್ತು ಯಃ ।**
**ಋದ್ಧಿವೃದ್ಧಿಸ್ತಥಾಕೀರ್ತಿಃ ತತ್ರತಿಷ್ಠತಿ ನಿತ್ಯಶಃ ॥ ೧೧೧ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸ್ತ್ರೀಲಕ್ಷಣ ವರ್ಣನಂ ನಾಮ ಪಂಚಮೋಧ್ಯಾಯಃ**



---

೧೧೦. ಸ್ತ್ರೀಯರಿಗೆ ಉತ್ತಮ ಲಕ್ಷಣಗಳಿದ್ದರೆ ಅವರ ನಡತೆಯೂ ಉತ್ತಮವಾಗಿರುವುದು.

೧೧೧. ಹೀಗೆ ಒಳ್ಳೆಯ ನಡತೆಯ ವಿಚಾರವನ್ನು ಹೇಳಿದೆನು. ಪ್ರಶಸ್ತ ಲಕ್ಷಣಗಳಿಂದ ಕೂಡಿದಂತಹ ಒಳ್ಳೆಯ ಹುಡುಗಿಯನ್ನು ಯಾವನು ಮದುವೆಯಾಗುವನೋ ಅವನಲ್ಲಿ (ಋದ್ಧಿ) ವೃದ್ಧಿ, ಕೀರ್ತಿ ಇವು ಯಾವಾಗಲೂ ಇದ್ದೇ ಇರುವುವು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಸ್ತ್ರೀಲಕ್ಷಣವರ್ಣನೆಯೆಂಬ ಐದನೆಯ ಅಧ್ಯಾಯ ಮುಗಿದಿದೆ.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಷಷ್ಠೋಽಧ್ಯಾಯಃ

---

॥ ಶತಾನೀಕ ಉವಾಚ ॥

ಸದ್ವೃತ್ತಂ ಶ್ರೋತುಮಿಚ್ಛಾಮಿ ದೇವಸ್ತ್ರೀಣಾಂ ಸುವಿಸ್ತರಾತ್ ।
ಉತ್ತಮಾಧಮಮಧ್ಯಂ ಚ ಸಂಬಂಧೇ ಸ್ತ್ರೀಕೃತೇ ಯಥಾ ॥ ೧ ॥

॥ ಸುಮಂತುರುವಾಚ ॥

ಶತಾನೀಕ ಮಹಾಬಾಹೋ ಬ್ರಹ್ಮಲೋಕೇ ಪಿತಾಮಹಃ ।
ಉಕ್ತ್ವಾ ಸಲಕ್ಷಣಂ ಸ್ತ್ರೀಣಾಂ ಸದ್ವೃತ್ತಂ ಚೋಕ್ತವಾನ್ ಪುನಃ ॥ ೨ ॥

---

## ಆರನೆಯ ಅಧ್ಯಾಯ

೧. ಶತಾನೀಕ ಮಹಾರಾಜನು ಹೇಳುತ್ತಾನೆ:—ಸ್ವಾಮಿ, ಮುನಿವರ್ಯರೆ! ದೇವತಾ ಸ್ತ್ರೀಯರಲ್ಲಿರಬೇಕಾದ ಒಳ್ಳೆಯನಡತೆ ಯಾವುದೆಂಬುದನ್ನು ವಿಸ್ತಾರವಾಗಿ ತಿಳಿದುಕೊಳ್ಳಲು ಆಶೆಯಿದೆ. ಸ್ತ್ರೀಯರೊಡನೆ ಸಂಬಂಧಮಾಡುವುದರಲ್ಲಿ ಯಾವುದು ಉತ್ತಮ, ಯಾವುದು ಮಧ್ಯಮ, ಯಾವುದು ಅಧಮ, ಎಂಬುದನ್ನು ಹೇಳಬೇಕು ಎಂದನು.

೨. ಅದಕ್ಕೆ ಸುಮಂತು ಮುನಿವರ್ಯರು ಹೇಳುತ್ತಾರೆ—ಅಯ್ಯಾ ರಾಜನೇ ; ಹಿಂದೆ ಬ್ರಹ್ಮಲೋಕದಲ್ಲಿ ಬ್ರಹ್ಮನು ಮಹರ್ಷಿಗಳಿಗೆ ಸ್ತ್ರೀಯರ ಲಕ್ಷಣವನ್ನೂ ಅವರ ಒಳ್ಳೆಯ ನಡೆವಳಿಕೆಯನ್ನೂ ಹೇಳಿದ್ದನು.

ಯಥೋಕ್ತಂ ಬ್ರಹ್ಮಣಾ ತೇಷಾಂ ಋಷೀಣಾಂ ಕುರುನಂದನ ।
ಸ ಪ್ರೇಯೋವಚನಂ ಶ್ರುತ್ವಾ ಬ್ರಹ್ಮಾ ವಚನಮಬ್ರವೀತ್ ॥ ೩ ॥

ಶೃಣುಧ್ವಂ ದ್ವಿಜಶಾರ್ದೂಲಾಃ ಸ್ತ್ರೀಣಾಂ ಸದ್ವೃತ್ತಮಾದಿತಃ ।
ವಕ್ಷ್ಯೇ ಯುಷ್ಮಾನಶೇಷಂ ವೈ ಲೋಕಾನುಗ್ರಹಕಾಮ್ಯಯಾ ॥ ೪ ॥

ತ್ರಿವರ್ಗಪ್ರಾಪ್ತಯೇ ವಕ್ಷ್ಯೇ ಸ್ತ್ರೀವೃತ್ತಂ ಗೃಹಮೇಧಿನಾಂ ।
ಪ್ರಾಗ್ವಿದ್ಯಾದೀನುಪಾದಾಯ ತೈರರ್ಥಾಂಶ್ಚ ಯಥಾಕ್ರಮಂ ॥
ವಿಂದೇತ ಸದೃಶೀಂ ಭಾರ್ಯಾಂ ಶಾಸ್ತ್ರದೃಷ್ಟೇನ ಕರ್ಮಣಾ ॥ ೫ ॥

ಗೃಹಾಶ್ರಮೋ ಹಿ ನಿಃಸ್ವಾನಾಂ ಮಹತ್ಯೇಷಾ ವಿಡಂಬನಾ ।
ತಸ್ಮಾತ್ಪೂರ್ವಮುಪಾದೇಯಂ ವಿತ್ತಮೇವ ಗೃಹೈಷಿಣಾ ॥ ೬ ॥

ವರಂ ಸೋಢಾ ಮನುಷ್ಯೇಣ ತೀವ್ರಾ ನರಕವೇದನಾ ।
ನ ತ್ವೇವ ಚ ಗೃಹೇ ದೃಷ್ಟಂ ಪುತ್ರದಾರಕ್ಷುಧಾರ್ದಿತಂ ॥ ೭ ॥

---

೩. ಅಯ್ಯಾ ಕುರುಶ್ರೇಷ್ಠನೇ! ಋಷಿಗಳ ಪ್ರಿಯವಾದ ಮಾತನ್ನು ಕೇಳಿ ಬ್ರಹ್ಮನು ಅವರಿಗೆ ಯಾವರೀತಿ ವಿವರಿಸಿ ಹೇಳಿದ್ದನೋ ಅದೇ ರೀತಿಯಲ್ಲಿ,

೪. ಲೋಕಕ್ಕೆ ಒಳ್ಳೆಯದಾಗಬೇಕೆಂಬ ಅಪೇಕ್ಷೆಯಿಂದ ನಿನಗೆ ನಾನು ಈಗ ಪುನಃ ಸ್ತ್ರೀಯರ ಒಳ್ಳೆಯ ನಡೆವಳಿಕೆಯನ್ನು ಮೊದಲಿಂದ ಸಮಗ್ರವಾಗಿ ಹೇಳುತ್ತೇನೆ ಕೇಳಿ; ಬ್ರಾಹ್ಮಣೋತ್ತಮರೇ!

೫. ಗೃಹಸ್ಥರಿಗೆ ಧರ್ಮ, ಅರ್ಥ, ಕಾಮಗಳೆಂಬ ತ್ರಿವರ್ಗ ದೊರೆಯುವುದಕ್ಕಾಗಿ ಶಾಸ್ತ್ರೋಕ್ತ ಕರ್ಮಮಾಡಿ ಮೊದಲು ವಿದ್ಯಾರ್ಜನೆ ಮುಂತಾದುವನ್ನೂ, ಅವುಗಳ ಸಹಾಯದಿಂದ ದ್ರವ್ಯವನ್ನೂ ಕ್ರಮವಾಗಿ ಸಂಪಾದಿಸಿದ ಮೇಲೆ ಅನುರೂಪಳಾದ ಭಾರ್ಯೆಯನ್ನು ಹೇಗೆ ಹೊಂದಬೇಕೋ ಆ ಕ್ರಮವನ್ನು ಹೇಳುತ್ತೇನೆ.

೬. ದರಿದ್ರರಿಗೆ ಗೃಹಸ್ಥಾಶ್ರಮವೆಂಬುದು ತುಂಬಾ ನಗೆಗೆ ಈಡಾದ ವಿಷಯ. ಗೃಹಸ್ಥಾಶ್ರಮ ಬೇಕೆನ್ನುವವನು ಮೊದಲು ದ್ರವ್ಯವನ್ನು ಸಂಪಾದಿಸಲೇಬೇಕು.

೭. ಮನುಷ್ಯನು ಘೋರವಾದ ನರಕಯಾತನೆಯನ್ನು ಸಹಿಸುವುದಾದರೂ ಶಕ್ಯವು. ಮನೆಯಲ್ಲಿ ಹೆಂಡತಿ ಮಕ್ಕಳು ಹಸಿವಿನಿಂದ ಕಂಗೆಡುವುದನ್ನು ನೋಡಲು ಆಗುವುದಿಲ್ಲ.

**ಅಸಂಭವೇ ಶಿಶುಂ ದೃಷ್ಟ್ವಾ ರುದಂತಂ ಪ್ರಾರ್ಥನಾಪರಂ ।**
**ವಜ್ರಸಾರಮಯಂ ಮನ್ಯೇ ಹೃದಯಂ ಯನ್ನ ದೀರ್ಯತೇ ।　　॥ ೮ ॥**

**ಸಾಧ್ವೀಂ ಭಾರ್ಯಾಂ ಪ್ರಿಯಾಂ ದೃಷ್ಟ್ವಾ ಕುಚೈಲಾಂ ಕ್ಷುತ್ಕೃಶೀಕೃತಾಂ ।**
**ಅಸ್ಯ ದುಃಖಸ್ಯ ತನ್ನಾಸ್ತಿ ಸುಖಂ ಯತ್ಸಮತಾಂ ವ್ರಜೇತ್　　॥ ೯ ॥**

**ರೂಕ್ಷಾನ್ ವಿವರ್ಣಾನ್ ಕ್ಷುಧಿತಾನ್ ಭೂಮಿಪ್ರಸ್ತರಶಾಯಿನಃ ।**
**ಪುತ್ರದಾರಾನ್ ನಿಜಾನ್ ದೃಷ್ಟ್ವಾ ಕಿಮಕಾರ್ಯಂ ಭವೇನ್ನೃಣಾಂ　　॥ ೧೦ ॥**

**ಬಾಹೂತ್ತರೀಯಂ ಕ್ಷುತ್ಕ್ಷಾಮಂ ದೃಷ್ಟ್ವಾ ದೀನಮುಖಂ ಸುತಂ ।**
**ಮೃತ್ಯುರೇವೋತ್ಸವಃ ಪುಂಸಾಂ ವ್ಯಸನಂ ಜೀವಿತಂ ದ್ವಿಜಾಃ　　॥ ೧೧ ॥**

---

೮. ತನ್ನ ಮನೆಯಲ್ಲಿ ಏನೂ ಇಲ್ಲದೇ ಇರುವಾಗ ಮಗುವು ಅಳುತ್ತಾ ಏನಾದರೂ ಕೊಡು ಎಂದು ಕೇಳುತ್ತಾ ಇರುವುದನ್ನು ನೋಡಿ ಬಿರಿದುಹೋಗದೆ ಇರುವ ಹೃದಯವು ವಜ್ರಮಯವೆಂದು ಭಾವಿಸಬೇಕು.

೯. ಪತಿವ್ರತೆಯೂ, ಪ್ರಿಯಳೂ ಆದ ಹೆಂಡತಿಯು ಹರಕುಸೀರೆಯುಟ್ಟಿರುವುದನ್ನೂ, ಹಸಿವಿನಿಂದ ಕಂಗೆಟ್ಟಿರುವುದನ್ನೂ, ನೋಡಿದಾಗ ಆಗಿನ ದುಃಖವನ್ನು ಹೋಗಲಾಡಿಸಿ ಸರಿಪಡಿಸುವ ಸುಖವು ಇಲ್ಲವೇ ಇಲ್ಲ. ಎಂದರೆ ಆ ವಸ್ತುಗಳನ್ನು ಒದಗಿಸಿದಲ್ಲದೆ ಮತ್ತೇನೂ ಉಪಾಯವೇ ಇಲ್ಲ.

೧೦. ತನ್ನ ಹೆಂಡತಿಯೂ ಮಕ್ಕಳೂ ಒರಟರಾಗಿ ಕಾಂತಿಗುಂದಿ, ಹಸಿವೆಯಿಂದ ಸೊರಗಿ, ನೆಲದಮೇಲೋ, ಕಲ್ಲಮೇಲೋ ಮಲಗಿದ್ದರೆ ಅದನ್ನು ನೋಡುವುದಕ್ಕಿಂತ ಮನುಷ್ಯನಿಗೆ ಬೇರೆ ಅನ್ಯಾಯ ಕಾರ್ಯಯಾವುದಿದೆ ?

೧೧. ತೋಳುಗಳಿಂದಲೇ ಶರೀರವನ್ನು ಮುಚ್ಚಿಕೊಂಡು ಎಂದರೆ ಚಳಿಗೋಸ್ಕರ ಅಪ್ಪುಗೈ ಹೂಡಿಕೊಂಡು ಹಸಿವಿನಿಂದ ಕಂಗೆಟ್ಟು ಕೃಶವಾಗಿ ಪೆಚ್ಚುಮುಖ ಹಾಕಿಕೊಂಡಿರುವ ಮಗನನ್ನು ನೋಡಬೇಕಾದಾಗ ಪುರುಷನಿಗೆ ಮರಣವೇ ಲೇಸೆನಿಸುವುದು. ಬದುಕಿರುವುದೇ ಅವನಿಗೆ ವ್ಯಸನಕರವು.

ಪರಿಸೀದತ್ಸ್ವಪತ್ಯೇಷು ದೃಷ್ಟ್ವಾ ದೀನಮುಖೀಂ ಪ್ರಿಯಾಂ ।
ವಜ್ರಕಾರ್ಯ ಶರೀರಾಸ್ತೇ ಯೇನ ಯಾಂತಿ ಸಹಸ್ರಧಾ ॥ ೧೨ ॥

ತಸ್ಮಾದರ್ಥವಿಹೀನಸ್ಯ ಪುಂಸೋ ದಾರಪರಿಗ್ರಹಾತ್ ।
ಕುತಸ್ತ್ರಿವರ್ಗಸಂಸಿದ್ಧಿಃ ಯಾತನ್ನೈವ ಹಿ ತಸ್ಯ ಸಾ ॥ ೧೩ ॥

ಅಭಾರ್ಯಸ್ಯಾಧಿಕಾರೋಽಸ್ತಿ ನ ದ್ವಿತೀಯಾಶ್ರಮೇ ಯಥಾ ।
ತದ್ವದರ್ಥವಿಹೀನಾನಾಂ ಸರ್ವತ್ರ ನಾಧಿಕಾರಿತಾ ॥ ೧೪ ॥

ಕೇಚಿತ್ವಪತ್ಯಮೇವಾಹುಃ ತ್ರಿವರ್ಗಾವಾಪ್ತಿಸಾಧನಂ ।
ಪುಂಸಾಮರ್ಥಃ ಕಲತ್ರಂ ಚ ಯೇಽನ್ಯೇ ನೀತಿವಿದೋ ವಿದುಃ ॥ ೧೫ ॥

ಧರ್ಮೋಽಪಿ ದ್ವಿವಿಧೋ ಯಸ್ಮಾತ್ ಇಷ್ಟಾಪೂರ್ತಕ್ರಿಯಾತ್ಮಕಃ ।
ಸ ಚ ದಾರಾತ್ಮಕಃ ಸರ್ವಂ ಜ್ಞೇಯಮರ್ಥೈಕಸಾಧನಂ ॥ ೧೬ ॥

---

೧೨. ಮಕ್ಕಳು ಕಷ್ಟಪಡುತ್ತಿರುವುದನ್ನು ಕಂಡು ಪೆಚ್ಚುಮುಖ ಹಾಕಿಕೊಂಡಿರುವ ಹೆಂಡತಿಯನ್ನು ನೋಡಿ ಯಾರ ಹೃದಯ ಸಾವಿರಪಾಲಾಗಿ ಬಿರಿದುಹೋಗುವುದಿಲ್ಲವೋ ಅವರ ಶರೀರವನ್ನು ವಜ್ರನಿರ್ಮಿತವೆಂದೇ ಹೇಳಬೇಕು

೧೩. ಹೀಗಿರುವಲ್ಲಿ ದುಡ್ಡಿಲ್ಲದವನು ಹೆಂಡತಿಯನ್ನು ಕಟ್ಟಿಕೊಂಡ ಮಾತ್ರದಿಂದ ತ್ರಿವರ್ಗಪ್ರಾಪ್ತಿ ಹೇಗಾದೀತು? ಅವನಿಗೆ ಅದು ತೀವ್ರವಾದ ವೇದನೆಯಲ್ಲವೇ.

೧೪. ಹೆಂಡತಿಯಿಲ್ಲದವನಿಗೆ ಗೃಹಸ್ಥಾಶ್ರಮಾಧಿಕಾರವು ಹೇಗೆ ಇಲ್ಲವೋ ಹಾಗೆಯೇ ದುಡ್ಡಿಲ್ಲದವರೆಲ್ಲರಿಗೂ ಆ ಅಧಿಕಾರವು ಇರುವುದಿಲ್ಲ.

೧೫. 'ಅಪುತ್ರಸ್ಯಗತಿರ್ನಾಸ್ತಿ' ಎಂಬ ಮಾತನ್ನು ಅನುಸರಿಸಿ ಕೆಲವರು ಮಗನಿಂದಲೇ ತ್ರಿವರ್ಗವು ಪ್ರಾಪ್ತಿಯಾಗಬೇಕೆಂದು ಹೇಳುತ್ತಾರೆ. ಇತರ ನೀತಿಜ್ಞರು ದ್ರವ್ಯವೂ ಹೆಂಡತಿಯೂ ಸಹ ತ್ರಿವರ್ಗಪ್ರಾಪ್ತಿಗೆ ಸಾಧನವೆಂದು ಹೇಳುತ್ತಾರೆ.

೧೬. ಇಷ್ಟ ಎಂದರೆ ಯಜ್ಞಕರ್ಮ. ಪೂರ್ತ ಎಂದರೆ ಭಾವಿ ಕೊಳ ಇವುಗಳನ್ನು ತೋಡಿಸುವುದು. ಈರೀತಿ ಧರ್ಮವು ಇಷ್ಟ ಪೂರ್ತ ಎಂಬ ಎರಡು ಪ್ರಕಾರವಾಗಿದೆ. ಈ ಎರಡು ಪ್ರಕಾರದ ಧರ್ಮವೂ, ಹೆಂಡತಿಯನ್ನು ಕಟ್ಟಿಕೊಂಡು ಬಾಳುವ ಸಂಸಾರ ನಿರ್ವಗುಣರೂಪವಾದ ಧರ್ಮವೂ; ಎಲ್ಲವೂ ದ್ರವ್ಯಮಾತ್ರದಿಂದಲೇ ಸಾಧ್ಯವು.

**ನಿಜೇನಾಪಿ ದರಿದ್ರೇಣ ಲೋಕೋ ಲಜ್ಜತಿ ಬಂಧುನಾ ।**
**ಪರೋಽಪಿ ಹಿ ಮನುಷ್ಯಾಣಾಂ ಐಶ್ವರ್ಯಾತ್ಸ್ವಜನಾಯತೇ ॥ ೧೭ ॥**

**ನ ದರಿದ್ರಂ ಸಮೀಪೇಽಪಿ ಸ್ಥಿತವಂತಂ ಪ್ರಪಶ್ಯತಿ ।**
**ದೂರಸ್ಥಮಪಿ ವಿತ್ತಾಢ್ಯಮಾದರಾತ್ ಭಜತೇ ಜನಃ ॥ ೧೮ ॥**

**ತಸ್ಮಾತ್ ಪ್ರಯತ್ನತಃ ಪೂರ್ವಮರ್ಥಮೇವ ಪ್ರಸಾಧಯೇತ್ ।**
**ಸ ಹಿ ಮೂಲಂ ತ್ರಿವರ್ಗಸ್ಯ ಗುಣಾನಾಂ ಗೌರವಸ್ಯ ಚ ॥ ೧೯ ॥**

**ಸರ್ವೇಽಪಿ ಹಿ ಗುಣಾ ವಿದ್ಯಾ ಕುಲಶೀಲಾದಯೋ ನೃಣಾಂ ।**
**ಸಂತಿ ತಸ್ಮಿನ್ನಸಂತೋಽಪಿ ಸಂತಿ ಸಂತೋಽಪಿ ನಾಸತಿ ॥ ೨೦ ॥**

**ಶಾಸ್ತ್ರಂ ಶಿಲ್ಪಂ ಕಲಾಃ ಕರ್ಮ ಯಚ್ಚಾನ್ಯದಪಿ ಚೇಷ್ಟಿತಂ ।**
**ಸಾಧನಂ ಸರ್ವಮರ್ಥಾನಾಂ ಅರ್ಥಾ ಧರ್ಮಾದಿ ಸಾಧನಾ ॥ ೨೧ ॥**

---

೧೭. ದರಿದ್ರನಾಗಿರತಕ್ಕವನು ತನ್ನ ಬಂಧುವಾದರೂ ಅವನನ್ನು ಕಂಡಾಗ ತನ್ನ ಬಂಧುವೆನ್ನುವುದಕ್ಕೆ ನಾಚುತ್ತಾನೆ. ಐಶ್ವರ್ಯವಂತನಾಗಿದ್ದವನು ಹೊರಗಿನವನಾದರೂ ಕೂಡ ಸ್ವಜನವೆಂದು ಹೇಳಿಕೊಳ್ಳುತ್ತಾನೆ.

೧೮. ಬಡವನಾದವನು ಹತ್ತಿರದಲ್ಲಿಯೇ ಇದ್ದರೂ ಅವನನ್ನು ಯಾರೂ ನೋಡುವುದೇ ಇಲ್ಲ. ಐಶ್ವರ್ಯವಂತನು ಬಹುದೂರದಲ್ಲಿದ್ದರೂ ಆದರದಿಂದ ಅವನ ಬಳಿಗೆ ಹೋಗುತ್ತಾರೆ. ಇದೆಲ್ಲಾ ಧನದಮಹಿಮೆ.

೧೯. ಆದುದರಿಂದ ಸರ್ವಪ್ರಯತ್ನದಿಂದಲೂ ಮೊದಲು ಹಣವನ್ನು ಸಂಪಾದಿಸಬೇಕು. ಆ ದ್ರವ್ಯವೇ ತ್ರಿವರ್ಗಪ್ರಾಪ್ತಿಗೂ ಗುಣಗಳಿಗೂ ಮೂಲವಾದುದು.

೨೦. ಧನವಂತನಲ್ಲಿ ವಿದ್ಯಾ, ಕುಲ, ಶೀಲ ಮೊದಲಾದ ಗುಣಗಳು ಇಲ್ಲದೆ ಇದ್ದರೂ ಇವೆಯೆಂದು ಭಾವನೆಯಾಗುವುದು. ಆ ಧನವಿಲ್ಲದವನಲ್ಲಿ ಈ ಗುಣಗಳು ಇದ್ದರೂ ಗಣನೆಗೇ ಬರುವುದಿಲ್ಲ.

೨೧. ಶಾಸ್ತ್ರಜ್ಞಾನ, ಕೈಗಾರಿಕೆಯ ಉದ್ಯಮ, ಚಮತ್ಕಾರದ ವಿದ್ಯೆಗಳು, ಉತ್ತಮವಾದ ಕೆಲಸ, ಇನ್ನೂ ಬೇರೆ ವಿಧವಾದ ವ್ಯಾಪಾರಗಳು ಇವೆಲ್ಲಾ ದ್ರವ್ಯ ಸಂಪಾದನೆಯ ಮಾರ್ಗಗಳು. ದ್ರವ್ಯ (ಧನ) ವು ಧರ್ಮಾದಿ ಪುರುಷಾರ್ಥಗಳಿಗೆ ಸಾಧನವು.

ಸಾಧನಾನಾಂ ತ್ರಿವರ್ಗೋಽಸ್ತಿ ತಂ ವಿನಾ ಕೇವಲಂ ನೃಣಾಂ ।
ಅಜಾಗಲಸ್ತನಸ್ಯೇವ ನಿಧನಾಯೈವ ಸಂಭವಃ ॥ ೨೨ ॥

ಪ್ರಾಕ್ಪುಣ್ಯೈರ್ವಿಪುಲಾ ಸಂಪತ್ ಧರ್ಮಕಾಮಾದಿಹೇತುಜಾ ।
ಭೂಯೋ ಧರ್ಮೇಣ ಸಾಮುತ್ರ ತಯಾ ತಾವಿತಿ ಚ ಕ್ರಮಃ ॥ ೨೩ ॥

ಏಕಚಕ್ರಕಮೇತದ್ಧಿ ಪ್ರೋಕ್ತಮನ್ಯೋನ್ಯಹೇತುಕಂ ।
ಪೂರ್ವಪಶ್ಚಿಮಬಾಹುಭ್ಯಾಮುತ್ತರಾಧರ ಮಧ್ಯಮಾಃ ॥ ೨೪ ॥

ವಿಜ್ಞಾಯ ಮತಿಮಾನೇವಂ ಯಸ್ತ್ರಿವರ್ಗಂ ನಿಷೇವತೇ ।
ಸಂಖ್ಯಾಶತಸಮಾಯುಕ್ತೈರವಾಪ್ನೋತ್ಯುತ್ತರೋತ್ತರಮ್ ॥ ೨೫ ॥

ನಾಭಾರ್ಯಸ್ಯಾಧಿಕಾರೋಽಸ್ತಿ ತ್ರಿವರ್ಗೇ ನಿರ್ಧನಸ್ಯ ವಾ ।
ನಾ ಭಾರ್ಯಾಯಾ ಮತಃ ಪೂರ್ವಮರ್ಥಮೇವ ಪ್ರಸಾಧಯೇತ್ ॥ ೨೬ ॥

---

೨೨. ಮನುಷ್ಯರಿಗೆ ಈ ಸಾಧನಗಳ ಮೂಲಕ ತ್ರಿವರ್ಗಪ್ರಾಪ್ತಿ ಇಲ್ಲದಿದ್ದರೆ ಅವರು ಹುಟ್ಟಿದುದು ಆಡಿನ ಕುತ್ತಿಗೆಯ ಮೊಲೆಗಳಂತೆ ನಿಷ್ಫಲ.

೨೩. ಪೂರ್ವಜನ್ಮದಲ್ಲಿ ಮಾಡಿದ ಪುಣ್ಯಗಳಿಂದ ಧರ್ಮಕಾಮಾದಿಗಳ ಆಚರಣೆ; ಆ ಧರ್ಮದಿಂದ ಹೆಚ್ಚಾದ ಸಂಪತ್ತು ಪ್ರಾಪ್ತಿ. ಆ ಸಂಪತ್ತಿನಿಂದ ಪುನಃ ಪುಣ್ಯ ಮಾಡುವುದು; ಮತ್ತೆ ಸಂಪತ್ತು ಬರುವುದು. ಆ ಸಂಪತ್ತಿನಿಂದ ಪುನಃ ಧರ್ಮಕಾಮಾರ್ಜನೆ ಎಂಬೀ ಕ್ರಮವಿರುವುದು.

೨೪. ಧನದಿಂದ ಧರ್ಮಕಾಮಾದಿಗಳೂ ಧರ್ಮಕಾಮಾದಿಗಳಿಂದ ಧನವೂ, ಹೀಗೆ ಧನ ಮತ್ತು ಧರ್ಮಾದಿಗಳು ಪರಸ್ಪರ ಕಾರ್ಯಕಾರಣಭಾವವನ್ನು ಹೊಂದಿ ಒಂದೇ ಚಕ್ರವುಳ್ಳ ಘಟೀಯಂತ್ರ (ಭಾವಿಯಿಂದ ನೀರೆತ್ತುವ ಘಟಚಕ್ರ) ದಂತೆ ಇರುವುವು.

೨೫. ಯಾವ ಬುದ್ಧಿಶಾಲಿಯು ಈ ಪ್ರಕಾರವಾಗಿ ತಿಳಿದು ತ್ರಿವರ್ಗವನ್ನು ಸೇವಿಸುತ್ತಾನೋ ಅವನಿಗೆ ಒಂದಕ್ಕೆ ನೂರರಷ್ಟು ಪ್ರಾಪ್ತವಾಗಿ ಉತ್ತರೋತ್ತರ ವೃದ್ಧಿಯಾಗುವುದು.

೨೬. ಹೆಂಡತಿಯಿಲ್ಲದವನಿಗಾಗಲಿ ಹಣವಿಲ್ಲದವನಿಗಾಗಲಿ ತ್ರಿವರ್ಗ ಸಂಪಾದನೆಯಲ್ಲಿ ಅಧಿಕಾರವಿಲ್ಲ. ಆದಕಾರಣ ಮನುಷ್ಯನು ಹೆಂಡತಿಯನ್ನು ಕಟ್ಟಿಕೊಂಡ ಮೇಲೆ ಮೊದಲು ಅರ್ಥಸಂಪಾದನೆಯ ಕಾರ್ಯವನ್ನೇ ಮಾಡಬೇಕು.

**ತಸ್ಮಾತ್ ಕ್ರಮಾಗತೈರರ್ಥೈಃ ಸ್ವಯಂ ವಾಧಿಗತೈರ್ಯುತಃ ।**
**ಕ್ರಿಯಾಯೋಗ್ಯೈಃ ಸಮರ್ಥಶ್ಚ ಕುರ್ಯಾದ್ದಾರಪರಿಗ್ರಹಂ ॥ ೨೭ ॥**

**ಅನುರೂಪೇ ಕುಲೇ ಜಾತಾಂ ಶ್ರುತವಿತ್ತಕ್ರಿಯಾದಿಭಿಃ ।**
**ಲಭೇತಾನಿಂದಿತಾಂ ಕನ್ಯಾಂ ಮನೋಜ್ಞಾಂ ಧರ್ಮಸಾಧನಾಂ ॥ ೨೮ ॥**

**ಪುಮಾನರ್ಧಪುಮಾಂಸ್ತಾವತ್ ಯಾವದ್ಭಾರ್ಯಾಂ ನ ವಿದಂತಿ ।**
**ತಸ್ಮಾದ್ಯಥಾಕ್ರಮಂ ಕಾಲೇ ಕುರ್ಯಾದ್ದಾರಪರಿಗ್ರಹಂ ॥ ೨೯ ॥**

**ಏಕಚಕ್ರೋ ರಥೋ ಯದ್ವತ್ ಏಕಪಕ್ಷೋ ಯಥಾ ಖಗಃ ।**
**ಅಭಾರ್ಯೋಽಪಿ ನರಸ್ತದ್ವದಯೋಗ್ಯಃ ಸರ್ವಕರ್ಮಸು ॥ ೩೦ ॥**

---

೨೭. ಆದುದರಿಂದ ಕುಲಕ್ರಮಾಗತವಾಗಿ ಬಂದ ಧನದಿಂದಾಗಲಿ ಅಥವಾ ಸ್ವಂತವಾಗಿ ಸಂಪಾದಿಸಿದ ಧನದಿಂದಾಗಲಿ ಗೃಹಕೃತ್ಯದ ಕೆಲಸ ಮಾಡುವುದಕ್ಕೆ ಬೇಕಾದ ಯೋಗ್ಯತೆಯನ್ನು ಸಂಪಾದಿಸಿಕೊಂಡು ನಿರ್ವಾಹ ಸಮರ್ಥನಾಗಿ ,ಪಾಣಿಗ್ರಹಣ ಮಾಡಿಕೊಳ್ಳಬೇಕು.

೨೮. ಶಾಸ್ತ್ರಜ್ಞಾನ, ದ್ರವ್ಯಸಂಪತ್ತು, ಯೋಗ್ಯವಾದ ಕಾರ್ಯನಿರ್ವಾಹ ಇವುಗಳಲ್ಲಿ ತನಗೆ ಅನುರೂಪಳಾದವಳೂ ಸತ್ಕುಲದಲ್ಲಿ ಹುಟ್ಟಿದವಳೂ, ದೂಷಿತಲಕ್ಷಣಗಳಿಲ್ಲದವಳೂ, ಮನೋಹರಳೂ, ಧರ್ಮಸಾಧಕಳೂ, ಆದ ಕನ್ಯೆಯನ್ನು ಮದುವೆ ಮಾಡಿಕೊಳ್ಳಬೇಕು.

೨೯. ಮನುಷ್ಯನು ಹೆಂಡತಿಯನ್ನು ಪಡೆಯುವವರೆಗೆ ಪೂರ್ಣನೆನಿಸುವುದಿಲ್ಲ. (ಪ್ರಜಯಾಹಿ ಮನುಷ್ಯಃ ಪೂರ್ಣಃ ಎಂದು ಶ್ರುತಿ ಇದೆ). ಅಂಥವನು ಅರ್ಧಪುರುಷನೆನಿಸುವನು. ಆದ್ದರಿಂದ ಯೋಗ್ಯಕಾಲದಲ್ಲಿ ಯಥಾಕ್ರಮದಲ್ಲಿ ಪತ್ನೀಸ್ವೀಕಾರ ಮಾಡಬೇಕು.

೩೦. ಒಂದೇ ಚಕ್ರವುಳ್ಳರಥವು ಹೇಗೆ ಮುಂದುವರಿಯಲಾರದೋ ಒಂದೇ ರೆಕ್ಕೆಯುಳ್ಳ ಪಕ್ಷಿ ಹೇಗೆ ಹಾರಿ ಹೋಗಲಾರದೋ ಹಾಗೆ ಹೆಂಡತಿಯಿಲ್ಲದೆ ಒಬ್ಬಂಟಿಗನಾದ ಮನುಷ್ಯನು ಸರ್ವಕರ್ಮಗಳಿಗೂ ಅನರ್ಹನೆನಿಸುವನು.

**ಪತ್ನೀಪರಿಗ್ರಹಾದ್ಧರ್ಮಃ ತಥಾರ್ಥೋ ಬಹು ಲಾಭತಃ ।**
**ಸತ್ಪ್ರೀತಿಯೋಗಾತ್ಕಾಮೋಽಪಿ ತ್ರಯಮಸ್ಮಾಂ ವಿದುರ್ಬುಧಾಃ ॥ ೩೧ ॥**

**ತ್ರಿಧಾ ವಿವಾಹಸಂಬಂಧೋ ಹೀನತುಲ್ಯಾಧಿಕೈಃ ಸಹ ।**
**ತುಲ್ಯೈಃ ಸಹ ಸಮಸ್ತೇಷಾಂ ಇತರೌ ನೀಚಮಧ್ಯಮೌ ॥ ೩೨ ॥**

**ಅಸಮೈರ್ನಿಂದ್ಯತೇ ಸದ್ಭಿಃ ಉತ್ತಮೈಃ ಪರಿಭೂಯತೇ ।**
**ತುಲ್ಯೈಃ ಪ್ರಶಸ್ಯತೇ ಯಸ್ಮಾತ್ ತಸ್ಮಾತ್ ಸಾಧುತಮೋ ಮತಃ ॥ ೩೩ ॥**

**ಕೃತ್ವೈವಾಧಿಕಸಂಬಂಧಮಪಮಾನಂ ಸಮಶ್ನುತೇ ।**
**ನ ಚೈಷಾಮಾನತಿಂ ಗಚ್ಛೇತ್ ನೈವ ನೀಚೈಃ ಸಹೇಷ್ಯತೇ ॥ ೩೪ ॥**

---

೩೧. ಪತ್ನೀ ಸ್ವೀಕಾರಮಾಡೋಣದರಿಂದ ಧರ್ಮವೂ, ಬಹು ಲಾಭವಾಗೋಣದರಿಂದ ಅರ್ಥವೂ, ಒಳ್ಳೆಯ ಪ್ರೀತಿಗವಕಾಶವಿರುವುದರಿಂದ ಕಾಮವೂ, ಈ ಮೂರೂ ವಿವಾಹದಿಂದಲೇ ಸಂಭವಿಸುವುದೆಂದು ವಿದ್ವಾಂಸರು ತಿಳಿಯುತ್ತಾರೆ.

೩೨. ತನಗಿಂತ ಹೀನರು, ತನ್ನ ಸಮದವರು, ತನಗಿಂತ ಅಧಿಕರು, ಹೀಗೆ ಮೂರುತರಹದವರೊಡನೆ ವಿವಾಹ ಸಂಬಂಧವು ಆಗಬಹುದು. ಅವುಗಳಲ್ಲಿ ಸಮಾನರೊಡನೆ ಮಾಡುವ ಸಂಬಂಧವು ನಿರಾಕ್ಷೇಪವೆನಿಸುವುದು. ಮಿಕ್ಕ ಎರಡು ಬಗೆಯವರೊಡನೆ ಸಂಬಂಧಮಾಡುವಲ್ಲಿ ಒಂದು ನೀಚ ಮತ್ತೊಂದು ಮಧ್ಯಮ ಎನಿಸುವುದು.

೩೩. ತನಗಿಂತ ಹೀನರೊಡನೆ ಸಂಬಂಧಮಾಡಿದರೆ ಸಜ್ಜನರು ನಿಂದಿಸುತ್ತಾರೆ. ತನಗಿಂತ ಉತ್ತಮರಾದವರ ಸಂಬಂಧಮಾಡಿದರೆ ಆ ಉತ್ತಮರು ಇವನನ್ನೇ ತಿರಸ್ಕಾರವಾಗಿ ಕಾಣುತ್ತಾರೆ. ಆದ್ದರಿಂದ ಸಮಾನರೊಡನೆ ಸಂಬಂಧ ಮಾಡುವುದು ಶ್ಲಾಘ್ಯವಾಗಿರುವುದರಿಂದ ಅದೇ ಬಹಳ ಸಾಧುವಾದ್ದು.

೩೪. ತನಗಿಂತ ಅಧಿಕರೊಡನೆ ಸಂಬಂಧಮಾಡಿದರೆ ಅವರಿಂದ ಅಪಮಾನ ಹೊಂದುತ್ತಾನೆ. ಆ ಸಂದರ್ಭದಲ್ಲಿ ಅವರಿಗೆ ತಗ್ಗಬಾರದು. ನೀಚರೊಡನೆ ಹೇಗೂ ಸಂಬಂಧ ಮಾಡಲೇಬಾರದು.

**ಉತ್ತಮೋऽಪಿ ನ ಸಂಬಂಧೋ ನೀಚೈಸ್ತತ್ಸಮತಾಂ ವ್ರಜೇತ್ ।**
**ಅತಸ್ತಂ ವರ್ಜಯೇದ್ಧೀಮಾನ್ ನಿಂದಿತಂ ಸದೃಶೋತ್ತಮೈಃ ॥ ೩೫ ॥**

**ವಿಜಾತೀಯೈಶ್ಚ ಸಂಬಂಧಂ ಸಹೇಚ್ಛಂತಿ ನ ಸೂರಯಃ ।**
**ಉಭಯೋರ್ಭ್ರಶ್ಯತೇ ತೇನ ಯಥಾ ಕೋಕಿಲಯಾ ಶುಕಃ ॥ ೩೬ ॥**

**ತದ್ಭಾತಿ ಕುಲಬಾಹ್ಯತ್ವಾದವಶ್ಯಂ ಚಾವಮಾನತಃ ।**
**ಪ್ರತಿಪತ್ತೇರಶಕ್ಯತ್ವಾಚ್ಛ್ರೋತ್ತಮೋಽಪಿ ನ ಶಸ್ಯತೇ ॥ ೩೭ ॥**

**ಏಕೇऽಪಿ ಪರಿಹರ್ತವ್ಯಾ ಅನ್ಯೇ ಪರಿಹರಂತ್ಯುತ ।**
**ತಸ್ಮಾದ್ದ್ವಾವಪಿ ನೈವೇಷ್ಟೌ ಸಂಬಂಧಾವಧಮೋತ್ತಮೌ ॥ ೩೮ ॥**

---

೩೫. ನೀಚರೊಡನೆ ಮಾಡಿದ ಸಂಬಂಧವು ಈ ಮೇಲೆ ಹೇಳಿದ ದೋಷಗಳಿಲ್ಲದೆ ಉತ್ತಮವಾಗಿದ್ದರೂ ಅವರ ಸ್ಥಿತಿಗೆ ಇವನೂ ಇಳಿಯುತ್ತಾನೆ. ಆದ್ದರಿಂದ ಬುದ್ಧಿವಂತನಾದವನು ನಮ್ಮ ಸಮದವರೂ ನಮಗಿಂತ ಉತ್ತಮರೂ ನೋಡಿ ನಿಂದಿಸುವಂತಹ ಸಂಬಂಧವನ್ನು ಮಾಡಬಾರದು.

೩೬. ವಿರುದ್ಧಜಾತಿಯುವರೊಡನೆ ಸಂಬಂಧಮಾಡುವ ವಿಚಾರದಲ್ಲಿ ವಿದ್ವಾಂಸರು ಸಮ್ಮತಿಪಡುವುದಿಲ್ಲ. ಕೋಗಿಲೆಯ ಜೊತೆಗೆ ಗಿಣಿಯು ಸೇರಿದರೆ ಅದು ಎರಡು ಜಾತಿಗಳಿಂದಲೂ ಹೇಗೆ ಭ್ರಷ್ಟವಾಗುವುದೋ ಹಾಗೆ ವಿರುದ್ಧಜಾತಿಯ ಸಂಬಂಧ ಮಾಡಿದವನು ಉಭಯ ಭ್ರಷ್ಟನೆನಿಸುತ್ತಾನೆ.

೩೭ ಕುಲಭ್ರಷ್ಟನಾಗೋಣದರಿಂದ ಇವನಿಗೆ ಅವಮಾನವಾಗಿ ಇವನನ್ನು ಉತ್ತಮ ಮನುಷ್ಯನೆಂದು ತಿಳಿಯುವುದೇ ಅಶಕ್ಯವಾಗುವುದು. ಅವನು ಉತ್ತಮನಾದರೂ ಕೂಡ ನೀಚಸಂಬಂಧದಿಂದ ಅವನಿಗೆ ನೀಚತ್ವವೂ ಅಧಿಕರ ಸಂಬಂಧದಿಂದ ಆವನಿಗೆ ಶ್ರೇಷ್ಠತೆಯೂ ಬರುವುದಿಲ್ಲ.

೩೮. ಕೆಲವರನ್ನು ನಾವೇ ಬಿಡಬೇಕಾಗುವುದು. ಮತ್ತೆ ಕೆಲವರು ನಮ್ಮನ್ನೇ ಬಿಟ್ಟುಬಿಡುತ್ತಾರೆ. ಆದ್ದರಿಂದ ನಮಗಿಂತಲೂ ಉತ್ತಮ ಸಂಬಂಧ ನಮಗಿಂತ ಅಧಮ ಸಂಬಂಧ ಇವು ಯಾವುದನ್ನೂ ಮಾಡಬಾರದು.

ಏಕಪಾತ್ರಾದಿಭಿರ್ಯೇಷಾಮುಪಚಾರೈಃ ಪರಸ್ಪರಮ್ ।
ಪ್ರತ್ಯಹಂ ವರ್ಧತೇ ಸ್ನೇಹಃ ಸಂಬಂಧಃ ಸೋಭಿಧೀಯತೇ ॥ ೩೯ ॥

ಯತ್ರಾವಾಹವಿವಾಹಾದಾವನ್ಯೋನ್ಯಾಃ ಪ್ರತಿಪತ್ತಯಃ ।
ಸ್ಪರ್ಧಯ್ಯೈವ ಪ್ರವರ್ಧಂತೇ ತಂ ಸಂಬಂಧಂ ವಿದುರ್ಬುಧಾ ॥ ೪೦ ॥

ವ್ಯಸನೇಭ್ಯುದಯೇ ವಾಪಿ ಯೇಷಾಂ ಪ್ರಾಣೈರ್ಧನೈರಪಿ ।
ಸಹೈಕಪ್ರತಿಪತ್ತಿತ್ವಂ ಸಂಬಂಧಾನಾಂ ಸ ಉತ್ತಮಃ ॥ ೪೧ ॥

ಸ್ನೇಹವ್ಯಕ್ತ್ತೌ ಮನುಷ್ಯಾಣಾಂ ದ್ವಾವೇವ ನಿಕಷೋಪಲೌ ।
ತಥಾ ಕೃತಜ್ಞತಾಯಾಂ ಚ ವ್ಯಸನಾಭ್ಯುದಯಾಗಮೌ ॥ ೪೨ ॥

ಸ ಚ ಸ್ನೇಹೋ ನೃಣಾಂ ಪ್ರಾಯಃ ಸಮೇಷ್ವೇವ ಹಿ ದೃಶ್ಯತೇ ।
ಸಾಮ್ಯಂ ಚಾಪ್ಯುಪಗಂತವ್ಯಂ ವಿತ್ತಶೀಲಕುಲಾದಿಭಿಃ ॥ ೪೩ ॥

---

೩೯. ಯಾರು ಒಂದೇ ಪಾತ್ರೆಯನ್ನು ಉಪಯೋಗಿಸಿಕೊಳ್ಳುವುದೇ ಮೊದಲಾದ ಅನ್ಯೋನ್ಯ ಉಪಚಾರಗಳಿಂದ ವರ್ತಿಸುವರೋ ಅವರ ಸ್ನೇಹವು ದಿನದಿನಕ್ಕೆ ಹೆಚ್ಚುವುದು. ಇದೇ ನಿಜವಾದ ಸಂಬಂಧವೆಂದು ಹೇಳಲ್ಪಡುವುದು.

೪೦. ಕರೆಯುವುದು, ಕಳುಹಿಸಿಕೊಡುವುದು, ವಿವಾಹ ಮೊದಲಾದುವುಗಳಲ್ಲಿ ಒಬ್ಬರನ್ನೊಬ್ಬರು ಸ್ಪರ್ಧೆಯಿಂದ ಭಾವಿಸುವ ಸಂಭವಗಳು ಯಾವುವು ದೊರಕುವುವೋ ಅವನ್ನೇ ಸಂಬಂಧವೆಂದು ತಿಳಿಯುತ್ತಾರೆ.

೪೧. ವ್ಯಸನ ಬಂದರೂ, ಸಂತೋಷ ಬಂದರೂ, ಪ್ರಾಣ, ಧನ ಇವುಗಳನ್ನಾದರೂ ವ್ಯಯಮಾಡಿ, ಒಬ್ಬರನ್ನೊಬ್ಬರು ವಿಶ್ವಾಸಮಾಡುವುದು ಉತ್ತಮವಾದ ಸಂಬಂಧ.

೪೨. ಚಿನ್ನದ ಯೋಗ್ಯತೆಯ ಪರೀಕ್ಷೆಗೆ ಹೇಗೆ ಒರೆಗಲ್ಲು ಅವಶ್ಯಕವೋ ಹಾಗೆ ಮನುಷ್ಯನ ಸ್ನೇಹ, ಕೃತಜ್ಞತೆ ಇವು ಪ್ರಕಾಶವಾಗುವುದಕ್ಕೆ ಕಷ್ಟ, ಸುಖ ಎಂಬ ಎರಡು ಸಂದರ್ಭಗಳೇ ಸಾಕಾಗಿವೆ.

೪೩. ಅಂತಹ ಸಹಜಸ್ನೇಹವು ಪ್ರಾಯಕವಾಗಿ ಸಮಾನ ಅಂತಸ್ತಿನವರಲ್ಲೇ ಕಾಣುವುದು. ದ್ರವ್ಯ, ಸ್ವಭಾವ, ಕುಲ ಇವುಗಳೆಲ್ಲದರ ವಿಷಯದಲ್ಲೂ ಸಾಮ್ಯ (ಸಮತ್ವ) ಇರಬೇಕು.

ತಸ್ಮಾದ್ವಿವಾಹಸಂಬಂಧಂ ಸಖ್ಯಮೇಕಾಂತಕಾರಿಣಾಂ ।
ಸದೃಶೈರೇವ ಕುರ್ವೀತ ನೋತ್ತಮೈರ್ನಾಪ್ಯನುತ್ತಮೈಃ　　　　॥ ೪೪ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸ್ತ್ರೀಲಕ್ಷಣ
ಸದ್ವೃತ್ತವರ್ಣನಂ ನಾಮ ಷಷ್ಠೋಽಧ್ಯಾಯಃ



---

೪೪. ಆದ್ದರಿಂದ ವಿವಾಹಸಂಬಂಧವನ್ನೂ, ಸ್ನೇಹವನ್ನೂ ಶಾಸ್ತ್ರನಿಯಮದ ಪ್ರಕಾರ ಮಾಡುವವರು ಸಮಾನರೊಡನೆಯೇ ಮಾಡಬೇಕು. ತನಗಿಂತ ಉತ್ತಮರೊಡನೆಯಾಗಲಿ, ಹೀನರೊಡನೆಯಾಗಲಿ ಮಾಡಬಾರದು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಸ್ತ್ರೀಯರ ಲಕ್ಷಣ ಮತ್ತು ಅವರ ಒಳ್ಳೇ ನಡತೆಯ ವಿಚಾರವೆಂಬ ಆರನೆಯ ಅಧ್ಯಾಯವು ಮುಗಿದಿದೆ.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಸಪ್ತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ಅಸಪಿಂಡಾ ಚ ಯಾ ಮಾತುಃ ಅಸಗೋತ್ರಾ ಚ ಯಾ ಪಿತುಃ ।
ಸಾ ಪ್ರಶಸ್ತಾ ದ್ವಿಜಾತೀನಾಂ ದಾರಕರ್ಮಣಿ ಮೈಥುನೇ ॥ ೧ ॥

ಸಹಜೋ ನ ಭವೇದ್ಯಸ್ಯಾ ನ ಚ ವಿಜ್ಞಾಯತೇಪಿತಾ ।
ನೋಪಯಚ್ಛೇತ ತಾಂ ಪ್ರಾಜ್ಞಃ ಪುತ್ರಿಕಾಧರ್ಮಶಂಕಯಾ ॥ ೨ ॥

ಬ್ರಾಹ್ಮಣಾನಾಂ ಪ್ರಶಸ್ತಾ ಸ್ಯಾತ್ ಸವರ್ಣಾ ದಾರಕರ್ಮಣಿ ।
ಕಾಮತಸ್ತು ಪ್ರವೃತ್ತಾನಾಮಿಮಾಃ ಸ್ಯುಃ ಕ್ರಮಶೋಽವರಾಃ ॥ ೩ ॥

---

## ಏಳನೆಯ ಅಧ್ಯಾಯವು

೧. ಬ್ರಹ್ಮನು ಹೇಳುತ್ತಾನೆ—ಯಾವಳು ತಾಯಿಗೆ ಸಪಿಂಡಳಾದ ಬಂಧು ವಲ್ಲವೋ ಅಥವಾ ತಂದೆಗೂ ಅಂಥಾ ಬಂಧುವಲ್ಲವೋ ಅಂಥವಳೇ ಬ್ರಾಹ್ಮಣರಿಗೆ ವಿವಾಹಕ್ಕೂ, ಸಂಭೋಗಕ್ಕೂ ಯೋಗ್ಯಳು.

೨. ಯಾವಳಿಗೆ ಸಹೋದರನಿರುವುದಿಲ್ಲವೋ, ತಂದೆಯಿದ್ದರೂ ಇಲ್ಲದಿದ್ದರೂ, ಅವನ ನಡತೆ ಮೊದಲಾದುವುಗಳು ಗೊತ್ತಿರುವುದಿಲ್ಲವೋ ಅಂಥವಳನ್ನು ಪ್ರಾಜ್ಞನಾದ ವನು ಮದುವೆಯಾಗಬಾರದು. ಒಂದುವೇಳೆ ಮದುವೆಯಾದರೆ ಧರ್ಮಕ್ಕೆ ಎಲ್ಲಿ ಲೋಪಬರುವುದೋ ಎಂಬ ಸಂದೇಹ ಮನಸ್ಸಿನಲ್ಲಿ ಬಾಧಿಸಬಹುದು.

೩. ಬ್ರಾಹ್ಮಣರಿಗೆ ತಮ್ಮ ಜಾತಿಗೆ ಸೇರಿದ ಕನ್ಯೆಯೇ ಹೆಂಡತಿಯಾಗಲು ಅರ್ಹಳು. ಸ್ವೇಚ್ಛಾಪ್ರವರ್ತಕರಿಗೆ ಇಂಥ ಲಕ್ಷಣವುಳ್ಳ ಕನ್ಯೆಯು ಸಿಕ್ಕದಿದ್ದರೆ

**ಕ್ಷತ್ರಸ್ಯಾಪಿ ಸವರ್ಣಾ ಸ್ಯಾತ್ ಪ್ರಥಮಾ ದ್ವಿಜಸತ್ತಮಾಃ ।**
**ದ್ವೇಚಾವರೇ ತಥಾ ಪ್ರೋಕ್ತೇ ಕಾಮತಸ್ತು ನ ಧರ್ಮತಃ ॥ ೪ ॥**

**ವೈಶ್ಯಸ್ಯೈಕಾ ವರಾ ಪ್ರೋಕ್ತಾ ಸವರ್ಣಾ ಚೈವ ಧರ್ಮತಃ ।**
**ತಥಾವರಾ ಕಾಮತಸ್ತು ದ್ವಿತೀಯಾ ನ ತು ಧರ್ಮತಃ ॥ ೫ ॥**

**ಶೂದ್ರೈವ ಭಾರ್ಯಾ ಶೂದ್ರಸ್ಯ ಧರ್ಮತೋ ಮನುರಬ್ರವೀತ್ ।**
**ಚತುರ್ಣಾಮಪಿ ವರ್ಣಾನಾಂ ಪರಿಣೇತಾ ದ್ವಿಜೋತ್ತಮಃ ॥ ೬ ॥**

**ನ ಬ್ರಾಹ್ಮಣೀ ಕ್ಷತ್ರಿಯಯೋರಾಪದ್ಯಪಿ ಹಿ ತಿಷ್ಠತೋಃ ।**
**ಕಸ್ಮಿಂಶ್ಚಿದಪಿ ವೃತ್ತಾಂತೇ ಶೂದ್ರಾ ಭಾರ್ಯೋಪದಿಶ್ಯತೇ ॥ ೭ ॥**

---

ಕ್ರಮತಃ ಎರಡನೆಯ ದರ್ಜೆಯವಳು, ಅಂಥವಳೂ ಸಿಕ್ಕದಿದ್ದರೆ ಮೂರನೆಯ ದರ್ಜೆಯವಳು, ಹೀಗೆ ನೋಡಿ ಮಾಡಿಕೊಳ್ಳಬೇಕು.

೪. ಕ್ಷತ್ರಿಯ ಜಾತಿಯವನಿಗೂ ಕೂಡ, ತನ್ನ ಜಾತಿಯವಳು ಸಿಕ್ಕುವುದು ಮುಖ್ಯ. ತನ್ನ ಜಾತಿಯವರಲ್ಲದ, ಮಿಕ್ಕ ಎರಡು ಜಾತಿಗಳವರೂ, ಧರ್ಮಶಾಸ್ತ್ರ ದೃಷ್ಟಿಯಿಂದ ಉತ್ತಮರಲ್ಲ.

೫. ವೈಶ್ಯನಿಗೆ, ತನ್ನ ಜಾತಿಯವಳೊಬ್ಬಳು ಧರ್ಮಶಾಸ್ತ್ರಾನುಸಾರವಾಗಿ ಉತ್ತಮಳು. ಇತರಳು ಕಾಮಾನುಸಾರವಾಗಿ ಶ್ರೇಷ್ಠಳೇ ಹೊರತು, ಧರ್ಮಶಾಸ್ತ್ರದಂತಲ್ಲ.

೬. ಶೂದ್ರನಿಗೆ ತನ್ನ ಜಾತಿಯವಳಾದ ಶೂದ್ರಸ್ತ್ರೀ ಒಬ್ಬಳೇ ತಕ್ಕವಳು ಎಂದು ಧರ್ಮಶಾಸ್ತ್ರವು ತಿಳಿಸುತ್ತದೆ. ಬ್ರಾಹ್ಮಣಶ್ರೇಷ್ಠನು ಸ್ವಜಾತಿ ಮೊದಲುಗೊಂಡು ನಾಲ್ಕು ಜಾತಿಯವರನ್ನೂ ಬೇಕಾದರೆ ಮದುವೆಯಾಗಬಹುದು.

೭. ಆಪದ್ಧರ್ಮವೆಂಬ ಕಾರಣಕ್ಕಾಗಿಯಾದರೂ ಬ್ರಾಹ್ಮಣಸ್ತ್ರೀಗೂ, ಕ್ಷತ್ರಿಯ ಪುರುಷನಿಗೂ ಸಂಬಂಧವಾಗಬಾರದು. ಶೂದ್ರಸ್ತ್ರೀಯು ಹೇಗೂ ತನಗಿಂತ ಉತ್ತಮ ಜಾತಿಯ ಪುರುಷನನ್ನು ಮದುವೆಯಾಗಲು ಅವಕಾಶವಿದ್ದೇ ಇದೆ.

ಹೀನಜಾತಿಸ್ತ್ರಿಯಂ ಮೋಹಾತ್ ಉದ್ವಹಂತೋ ದ್ವಿಜಾತಯಃ।
ಕುಲಾನ್ಯೇವ ನಯಂತ್ಯಾಶು ಸ ಸಂತಾನಾನಿ ಶೂದ್ರತಾಮ್ ॥ ೮ ॥

ಶೂದ್ರೀಮಾರೋಪ್ಯ ಶಯ್ಯಾಂ ತು ಪತಿತೋತ್ರಿರ್ಬಭೂವ ಹ ।
ಉತಥ್ಯಃ ಪುತ್ರ ಜನನಾತ್ ಪತಿತತ್ವಮವಾಪ್ತವಾನ್ ॥ ೯ ॥

ಶೂದ್ರ್ಯಾಂ ತು ಪುತ್ರಮಾಸಾದ್ಯ ಶೌನಕಃ ಶೂದ್ರತಾಂ ಗತಃ ।
ಭೃಗ್ವಾದಯೋಪ್ಯೇವಮೇವ ಪತಿತತ್ವಭುಜೋ ಭವನ್ ॥ ೧೦ ॥

ಶೂದ್ರಾಂ ಶಯನಮಾರೋಪ್ಯ ಬ್ರಾಹ್ಮಣೋ ಯಾತ್ಯಧೋಗತಿಂ ।
ಜನಯಿತ್ವಾ ಸುತಂ ತಸ್ಯಾಂ ಬ್ರಾಹ್ಮಣ್ಯಾದೇವ ಹೀಯತೇ ॥ ೧೧ ॥

ದೈವಪಿತ್ರ್ಯಾತಿಥೇಯಾನಿ ತತ್ಪ್ರಧಾನಾನಿ ಯಸ್ಯ ತು ।
ನಾದಂತಿ ಪಿತರೋ ದೇವಾಃ ಸ ಚ ಸ್ವರ್ಗಂ ನ ಗಚ್ಛತಿ ॥ ೧೨ ॥

---

೮. ದ್ವಿಜನ್ಮತ್ವವನ್ನು ಹೊಂದಿರುವರೆಂದು ಪ್ರಸಿದ್ಧರಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಇವರು ತಮಗಿಂತ ಹೀನಜಾತಿಯ ಕನ್ಯೆಯರನ್ನು ವಿವಾಹಮಾಡಿಕೊಂಡು ಅವಳಿಗೆ ಮಕ್ಕಳು ಹುಟ್ಟಿದರೆ ಆ ಕುಲಕ್ಕೇ ಶೂದ್ರತ್ವವುಂಟಾಗುತ್ತದೆ.

೯. ಅತ್ರಿಋಷಿಯು ಶೂದ್ರಸ್ತ್ರೀಯನ್ನು ಭೋಗಿಸಿದುದರಿಂದ ಪತಿತನಾದನು. ಉತಥ್ಯನು ಹೀನಜಾತಿಯವಳಲ್ಲಿ ಪುತ್ರೋತ್ಪಾದನೆ ಮಾಡಿದ್ದರಿಂದ ಪತಿತನಾದನು,

೧೦. ಶೌನಕನು ಶೂದ್ರಸ್ತ್ರೀಯಲ್ಲಿ ಪುತ್ರನನ್ನು ಉತ್ಪಾದನೆಮಾಡಿದ್ದರಿಂದ ಶೂದ್ರತ್ವವನ್ನು ಹೊಂದಿದನು. ಭೃಗು ಮೊದಲಾದ ಋಷಿಗಳು ಕೂಡ ಹೀಗೆಯೇ ಪಾತಿತ್ಯ (ಪತಿತತ್ವ) ವನ್ನು ಹೊಂದಿದರು.

೧೧. ಶೂದ್ರಸ್ತ್ರೀಯೊಡನೆ ಭೋಗಿಸಿದ ಬ್ರಾಹ್ಮಣನು ಅಧೋಗತಿಯನ್ನು ಹೊಂದುತ್ತಾನೆ. ಆ ಶೂದ್ರಸ್ತ್ರೀಯಲ್ಲಿ ಪುತ್ರನು ಉತ್ಪತ್ತಿಯಾದರೆ ಅವನ ಬ್ರಾಹ್ಮಣ್ಯವೇ ಹೋಗುತ್ತದೆ.

೧೨. ಮಾನವನು ತಾನು ಮಾಡಬೇಕಾದ ದೇವ, ಪಿತೃ; ಅತಿಥಿಸತ್ಕಾರಗಳನ್ನು ಹೀನಜಾತಿಯ ಸ್ತ್ರೀಸಂಬಂಧವಾದಮೇಲೆ ನಡೆಸಿದರೂ ಅಂಥವನ ಪಿತೃಗಳಾಗಲಿ, ದೇವತೆಗಳಾಗಲಿ ಇವನು ಕೊಟ್ಟದ್ದನ್ನು ತಿನ್ನುವುದಿಲ್ಲ, ಅವನಿಗೂ ಸ್ವರ್ಗವು ಸಿಕ್ಕುವುದಿಲ್ಲ.

ವೃಷಲೀಫೇನಪಿ ತಸ್ಯ ನಿಃಶ್ವಾಸೋಪಹತಸ್ಯ ಚ ।
ತಸ್ಯಾಂ ಚೈವ ಪ್ರಸೂತಸ್ಯ ನಿಷ್ಕೃತಿರ್ನ ವಿಧೀಯತೇ ॥ ೧೩ ॥

ಚತುರ್ಣಾಮಪಿ ವಿಪ್ರೇಂದ್ರಾಃ ಪ್ರೇತ್ಯೇಹ ಚ ಹಿತಾಹಿತಂ ।
ಸಮಾಸತೋ ಬ್ರವೀಮ್ಯೇಷ ವಿವಾಹಾಷ್ಟಕಮುತ್ತಮಂ ॥ ೧೪ ॥

ಬ್ರಾಹ್ಮೋದೈವಸ್ತಥಾಚಾರ್ಷಃ ಪ್ರಾಜಾಪತ್ಯಸ್ತಥಾಽಸುರಃ ।
ಗಾಂಧರ್ವೋ ರಾಕ್ಷಸಶ್ಚೈವ ಪೈಶಾಚಶ್ಚಾಷ್ಟಮೋಽಧಮಃ ॥ ೧೫ ॥

ಯೋ ಯಸ್ಯ ಧರ್ಮೋ ವರ್ಣಸ್ಯ ಗುಣದೋಷೌ ಚ ಯಸ್ಯ ಯೌ ।
ಶೃಣುಧ್ವಂ ತ ದ್ದ್ವಿಜಶ್ರೇಷ್ಠಾಃ ಪ್ರಸವೇ ಚ ಗುಣಾಗುಣಂ ॥ ೧೬ ॥

ವಿಪ್ರಸ್ಯ ಚತುರಃ ಪೂರ್ವಾನ್ ಕ್ಷತ್ರಸ್ಯ ಚತುರೋಽವರಾನ್ ।
ವಿಟ್ ಶೂದ್ರಯೋಸ್ತು ತ್ರೀನೇವ ವಿದ್ಯಾದ್ಧರ್ಮಾನರಾಕ್ಷಸಾನ್ ॥ ೧೭ ॥

---

೧೩. ಶೂದ್ರಸ್ತ್ರೀಯ ಬಾಯನೊರೆಯನ್ನು ಪಾನಮಾಡಿದವನಿಗೂ ಅವಳಿಂದ ನಿಶ್ವಸಿತವಾದ ವಾಯುವನ್ನು ತಾನು ಉಚ್ಛ್ವಾಸಿಸಿದವನಿಗೂ ಶೂದ್ರಸ್ತ್ರೀಯಲ್ಲೇ ಹುಟ್ಟಿದವನಿಗೂ ಪ್ರಾಯಶ್ಚಿತ್ತ ಮಾಡುವುದಕ್ಕೆ ಸಾಧ್ಯವೇ ಇಲ್ಲ

೧೪. ಅಯ್ಯಾ ಬ್ರಾಹ್ಮಣೋತ್ತಮನೇ ! ನಾಲ್ಕು ವರ್ಣಗಳವರಿಗೂ ಇಹಪರ ಲೋಕಗಳಲ್ಲಿ ಹಿತವನ್ನುಂಟುಮಾಡುವವೋ ಅಥವಾ ಅಹಿತವನ್ನುಂಟುಮಾಡುವವೋ ಆದ ಉತ್ತಮ ವಿವಾಹದ ಎಂಟು ಬಗೆಗಳನ್ನು ಹೇಳುತ್ತೇನೆ.

೧೫. ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ, ಆಸುರ, ಗಾಂಧರ್ವ, ರಾಕ್ಷಸ, ಪೈಶಾಚ ಎಂಬುದಾಗಿ ವಿವಾಹಗಳಲ್ಲಿ ಎಂಟುವಿಧ. ಎಂಟನೇದಾದ ಪೈಶಾಚ ವಿವಾಹವೇ ಅತಿ ನಿಕೃಷ್ಟವಾದುದು.

೧೬ ಯಾವ ವರ್ಣದವರಿಗೆ ಯಾವ ಧರ್ಮಗಳು ಅನುಸರಣೀಯ ಯಾವ ಯಾವ ಜಾತಿಯವರಿಗೆ ಗುಣದೋಷಗಳು ಯಾವುವು ? ಯಾವ ಜಾತಿಯಲ್ಲಿ ಪುತ್ರೋತ್ಪಾದನ ಮಾಡುವುದರ ಗುಣಾವಗುಣಗಳು ಯಾವುವು ? ಎಂಬುದನ್ನು ಹೇಳುವೆನು ಕೇಳಿ-

೧೭. ಯಾವ ಜಾತಿಯವನೇ ಆಗಲಿ, ತನ್ನ ಜಾತಿಯಲ್ಲೂ, ತನಗಿಂತ ಕೀಳಾದ ಜಾತಿಯಲ್ಲೂ, ಕನ್ಯೆಯನ್ನು ತರಬಹುದು. ತನಗಿಂತ ಉತ್ತಮ ಜಾತಿಯವರಲ್ಲಿ ಕನ್ಯೆಯನ್ನು ತರಬಾರದು.

ಚತುರೋ ಬ್ರಾಹ್ಮಣಸ್ಯಾದ್ಯಾನ್ ಪ್ರಶಸ್ತಾನ್ ಕವಯೋ ವಿದುಃ
ರಾಕ್ಷಸಂ ಕ್ಷತ್ರಿಯಸ್ಯೈಕಂ ಆಸುರಂ ವೈಶ್ಯಶೂದ್ರಯೋಃ ॥ ೧೮ ॥

ಕ್ಷತ್ರಿಯಾಣಾಂ ತ್ರಯೋ ಧರ್ಮ್ಯಾ ದ್ವಾವಧರ್ಮ್ಯೌ ಸ್ಮೃತಾವಿಹ ।
ಪೈಶಾಚಶ್ಚಾಸುರಶ್ಚೈವ ನ ಕರ್ತವ್ಯೌ ಕಥಂಚನ ॥ ೧೯ ॥

ಪೃಥಕ್‌ಪೃಥಗ್ವಾ ಮಿಶ್ರೌ ವಾ ವಿವಾಹೌ ಪೂರ್ವಚೋದಿತೌ ।
ಗಾಂಧರ್ವೋ ರಾಕ್ಷಸಶ್ಚೈವ ಧರ್ಮ್ಯೌ ಕ್ಷತ್ರಸ್ಯ ತೌ ಸ್ಮೃತೌ ॥ ೨೦ ॥

ಆಚ್ಛಾದ್ಯ ಚಾರ್ಚಯಿತ್ವಾ ತು ಶ್ರುತ ಶೀಲವತೇ ಸ್ವಯಂ ।
ಆಹೂಯ ದಾನಂ ಕನ್ಯಾಯಾ ಬ್ರಾಹ್ಮೋಧರ್ಮಃಪ್ರಕೀರ್ತಿತಃ ॥ ೨೧ ॥

ವಿತತೇ ಚಾಪಿ ಯಜ್ಞೇ ತು ಕರ್ಮ ಕುರ್ವತಿ ಚರ್ತ್ವಿಜಿ ।
ಅಲಂಕೃತ್ಯ ಸುತಾದಾನಂ ದೈವೋಧರ್ಮ ಉದಾಹೃತಃ ॥ ೨೨ ॥

---

೧೮. ಬ್ರಾಹ್ಮ, ದೈವ, ಆರ್ಷ, ಪ್ರಜಾಪತ್ಯವೆಂಬ ನಾಲ್ಕುಬಗೆಯ ವಿವಾಹವು ಬ್ರಾಹ್ಮಣನಿಗೆ ಉತ್ತಮವೆಂದೂ, ಕ್ಷತ್ರಿಯರಿಗೆ ರಾಕ್ಷಸವೆಂಬ ವಿವಾಹವೂ, ವೈಶ್ಯ ಶೂದ್ರರಿಗೆ ಆಸುರವೆಂಬ ವಿವಾಹವೂ ಆಗಬಹುದೆಂದು ತಿಳಿದವರು ಅಭಿಪ್ರಾಯಪಡುತ್ತಾರೆ.

೧೯. ಕ್ಷತ್ರಿಯರಿಗೆ ಮೂರುಬಗೆಯ ವಿವಾಹಗಳು ಧರ್ಮಕ್ಕೆ ಅವಿರುದ್ಧವಾದುವು, ಇನ್ನೆರಡು ಬಗೆಯವು ಎಂದರೆ ಪೈಶಾಚ, ಆಸುರ ಎಂಬಿವು ಅಧರ್ಮ್ಯಗಳು. ಆದ್ದರಿಂದ ಅವನ್ನು ಹೇಗೂ ಮಾಡಕೂಡದು.

೨೦. ಹಿಂದೆ ಹೇಳಿದ ಗಾಂಧರ್ವ ಮತ್ತು ರಾಕ್ಷಸ ಎಂಬ ಎರಡು ವಿವಾಹಗಳು ಬೇರೆ ಬೇರೆಯಾಗಲಿ ಅಥವಾ ಕೂಡಿಯಾಗಲಿ ನಡೆಯುವುದು, ಕ್ಷತ್ರಿಯರಿಗೆ ಯೋಗ್ಯಗಳೆಂದು ತಿಳಿಯಬೇಕು.

೨೧. ಶಾಸ್ತ್ರಜ್ಞನೂ, ಶೀಲವನ್ನು ತಿಳಿದವನೂ ಆದ ಯೋಗ್ಯನಾದ ವರನನ್ನು ತಾನಾಗಿ ಕರೆದು, ವಸ್ತ್ರಗಳನ್ನು ಅವನಿಗೆ ಹೊದ್ದಿಸಿ ಪೂಜಿಸಿ ಕನ್ಯೆಯನ್ನು ವಿವಾಹ ಮಾಡುವುದು ಬ್ರಾಹ್ಮವಿವಾಹವೆನಿಸುವುದು.

೨೨. ಯಜಮಾನನು ಯಜ್ಞಕರ್ಮವನ್ನು ವಿಸ್ತಾರವಾಗಿ ಮಾಡಿಸಿರುವಾಗ, ಆ ಋತ್ವಿಕ್ಕಿಗೆ ಕನ್ಯಾಪಿತೃವು ಅಲಂಕಾರಮಾಡಿದ ಕನ್ಯೆಯನ್ನು ದಾನಮಾಡುವುದು ದೈವ ವಿವಾಹವೆನಿಸುವುದು.

ಏಕಂ ಗೋಮಿಥುನಂ ದ್ವೇ ವಾ ವರಾದಾದಾಯ ಧರ್ಮತಃ ।
ಕನ್ಯಾಪ್ರದಾನಂ ವಿಧಿವದಾರ್ಷೀಯೋ ಧರ್ಮ ಉಚ್ಯತೇ ॥ ೨೩ ॥

ಸಹೋಭೌ ಚರತಂ ಧರ್ಮಂ ಇತಿವಾಚಾನುಭಾಷ್ಯ ತು ।
ಕನ್ಯಾಪ್ರದಾನಮಭ್ಯರ್ಚ್ಯ ಪ್ರಾಜಾಪತ್ಯವಿಧಿಃ ಸ್ಮೃತಃ ॥ ೨೪ ॥

ಜ್ಞಾತಿಭ್ಯೋ ದ್ರವಿಣಂ ದತ್ವಾ ಕನ್ಯಾಯಾಶ್ಚೈವ ಶಕ್ತಿತಃ ।
ಕನ್ಯಾಪ್ರದಾನಂ ಸ್ವಚ್ಛಂದಾತ್ ಆಸುರೋ ಧರ್ಮ ಉಚ್ಯತೇ ॥ ೨೫ ॥

ಇಚ್ಛಯಾನ್ಯೋನ್ಯಸಂಯೋಗಃ ಕನ್ಯಾಯಾಶ್ಚ ವರಸ್ಯ ಚ ।
ಗಾಂಧರ್ವಃ ಸ ವಿಧಿರ್ಜ್ಞೇಯೋ ಮೈಥುನ್ಯಃ ಕಾಮಸಂಭವಃ ॥ ೨೬ ॥

ಹತ್ವಾ ಛಿತ್ವಾ ಚ ಭಿತ್ವಾ ಚ ಕ್ರೋಶಂತೀಂ ರುದತೀಂ ಗೃಹಾತ್ ।
ಪ್ರಸಹ್ಯ ಕನ್ಯಾಹರಣಂ ರಾಕ್ಷಸೋ ವಿಧಿರುಚ್ಯತೇ ॥ ೨೭ ॥

---

೨೩. ಹೋರಿ ಮತ್ತು ಹಸು ಈ ಎರಡರ ಒಂದು ಜತೆಯನ್ನೋ ಅಥವಾ ಎರಡು ಜತೆಯನ್ನೋ ವರನಿಂದ ತೆಗೆದುಕೊಂಡು ಶಾಸ್ತ್ರೋಕ್ತ ಧರ್ಮಕ್ಕನುಸಾರವಾದ ವಿಧಿಯಂತೆ ಕನ್ಯಾದಾನಮಾಡುವುದು ಆರ್ಷವಿವಾಹವೆನಿಸುವುದು.

೨೪. ಕನ್ಯಾಪಿತೃವು ವಧೂವರರನ್ನು ಕುರಿತು "ನೀವಿಬ್ಬರೂ ಗೃಹಧರ್ಮವನ್ನು ಆಚರಿಸಿ" ಎಂದು ಹೇಳಿ, ವರನನ್ನು ಪೂಜಿಸಿ ಕನ್ಯಾದಾನಮಾಡುವುದು ಪ್ರಾಜಾಪತ್ಯ ವಿವಾಹವೆನಿಸುವುದು.

೨೫. ಕನ್ಯೆಗೂ ಕನ್ಯೆಯ ಜ್ಞಾತಿಗಳಿಗೂ ಕೈಲಾದಷ್ಟು ದ್ರವ್ಯವನ್ನು ಕೊಟ್ಟವನಿಗೆ ಸ್ವಚ್ಛಂದವಾಗಿ ಕನ್ಯಾದಾನ ಮಾಡುವುದು 'ಆಸುರ' ವಿವಾಹವೆನಿಸುವುದು.

೨೬. ವಧೂವರರಲ್ಲಿ ಒಬ್ಬರನ್ನೊಬ್ಬರು ತಾವಾಗಿ ಮೆಚ್ಚಿ ಮಾಡಿಕೊಳ್ಳುವ ವಿವಾಹವು ಗಾಂಧರ್ವ ವಿವಾಹವೆನಿಸುವುದು. ಅವರು ತಮ್ಮ ಕಾಮಾತುರತೆಯಿಂದ ಪರಸ್ಪರ ಸಂಗಮಮಾಡುವುದೇ ಇದರಫಲ.

೨೭. ಹೊಡೆದೋ, ಗಾಯಪಡಿಸಿಯೋ, ಭೇದವನ್ನುಂಟುಮಾಡಿ (ಜತೆಯನ್ನು ಒಡೆಯಿಸಿ) ಯೋ, ಹಿಂಸಿಸಲಾಗಿ ಕೂಗಿ ರೋದಿಸುತ್ತಿರುವ ಕನ್ಯೆಯನ್ನು ಮನೆಯಿಂದ ಬಲಾತ್ಕಾರವಾಗಿ ಅಪಹರಿಸುವುದು ರಾಕ್ಷಸ ವಿವಾಹವೆನಿಸಿಕೊಳ್ಳುತ್ತದೆ.

ಸುಪ್ತಾಂ ಮತ್ತಾಂ ಪ್ರಮತ್ತಾಂ ಚ ರಹೋಯತ್ರೋಪಗಚ್ಛತಿ ।
ಸ ಪಾಪಿಷ್ಠೋ ವಿವಾಹಾನಾಂ ಪೈಶಾಚಃ ಕಥಿತೋಽಷ್ಟಮಃ ॥ ೨೮ ॥

ಜಲಪೂರ್ವಂ ದ್ವಿಜಾಗ್ರ್ಯಾಣಾಂ ಕನ್ಯಾದಾನಂ ಪ್ರಶಸ್ಯತೇ ।
ಇತರೇಷಾಂ ತು ವರ್ಣಾನಾಂ ಇತರೇತರ ಕಾಮ್ಯಯಾ ॥ ೨೯ ॥

ಯೋ ಯಸ್ಯೈಷಾಂ ವಿವಾಹಾನಾಂ ವಿಭೂನಾಂ ಕೀರ್ತಿತೋ ಗುಣಃ ।
ತಂ ನಿಬೋಧತ ವೈ ವಿಪ್ರಾಃ ಸಮ್ಯಕ್ಕೀರ್ತಯತೋ ಮಮ ॥ ೩೦ ॥

ಕುಲಾನಿ ದಶಪೂರ್ವಾಣಿ ತಥಾನ್ಯಾನಿ ದಶೈವ ತು ।
ಸಹಿತಾನ್ಯಾತ್ಮನಾ ಚೈವ ಮೋಚಯತ್ಯೇನಸೋ ಧ್ರುವಂ ॥ ೩೧ ॥

---

೨೮. ಕನ್ಯೆಯು ನಿದ್ರಿಸುವಾಗಾಗಲಿ, ಮದ್ಯಾದಿ ಮದದಿಂದ ಯುಕ್ತಳಾಗಿರುವಾಗಾಗಲಿ, ಎಚ್ಚರ ತಪ್ಪಿರುವಾಗಾಗಲಿ, ಗುಟ್ಟಾಗಿ ಸಮೀಪಿಸಿ ಹೋಗಿ ಆಕ್ರಮಿಸುವುದು, ಎಂಟನೆಯ ಬಗೆಯ ಪೈಶಾಚ ವಿವಾಹವೆನಿಸುವುದು. ಇದು ವಿವಾಹಗಳಲ್ಲೆಲ್ಲಾ ಅತ್ಯಂತ ನೀಚವಾದುದಾಗಿದೆ.

೨೯. ಜಲಧಾರಾ ಪೂರ್ವಕವಾಗಿ ಕನ್ಯಾದಾನಮಾಡುವ ಕ್ರಮವು ಬ್ರಾಹ್ಮಣ ಶ್ರೇಷ್ಠರಿಗೆ ಪ್ರಶಸ್ತವು. ಮಿಕ್ಕವರ್ಣಗಳವರಿಗೆ ಒಬ್ಬರನ್ನೊಬ್ಬರು ಅಪೇಕ್ಷಿಸಿ ವಿವಾಹ ಮಾಡಿಕೊಳ್ಳುವುದು ಆಚರಣೆಯಲ್ಲಿದೆ.

೩೦. ಓ ಬ್ರಾಹ್ಮಣರೇ! ಈ ಅನೇಕಬಗೆಯ ವಿವಾಹಗಳಲ್ಲಿ ಯಾರ್ಯಾರಿಗೆ ಯಾವ ವಿವಾಹವು ಗುಣವೆಂದು ಉಕ್ತವಾಗಿದೆಯೋ ಅದನ್ನು ನಾನು ಚೆನ್ನಾಗಿ ಹೇಳುತ್ತೇನೆ ಕೇಳಿ.

೩೧. ಪಿತೃಪಿತಾಮಹಾದಿ ತನ್ನ ಹಿಂದಿನ ಹತ್ತುತಲೆಯವರು, ಪುತ್ರಪೌತ್ರಾದಿಯಾದ ಮುಂದಿನ ಹತ್ತುತಲೆಯವರು, ಮತ್ತು ತಾನು, ಹೀಗೆ ಇಪ್ಪತ್ತೊಂದು ತಲೆಯವರಿಗೆ ದುಃಖಕಾರಣವಾಗಿದ್ದ ಬ್ರಾಹ್ಮಣರ ಪಾಪವು ಕನ್ಯಾದಾನದಿಂದ ನಿಶ್ಚಯವಾಗಿ ಬಿಡುಗಡೆಯಾಗುವುದು.

ಬ್ರಾಹ್ಮೀಪುತ್ರಃ ಸುಕೃತಕೃತ್ ದೈವೋಢಾಜಂ ಸುತಂ ಶೃಣು ।
ದೈವೋಢಾಜಃ ಸುತೋವಿಪ್ರಾಃ ಸಪ್ತಸಪ್ತ ಪರಾವರಾನ್ ॥
ಆರ್ಷೋಢಾಜಃ ಸುತಸ್ತ್ರೀನ್ಸ್ತ್ರೀನ್ ಪುರುಷಾಂಸ್ತಾರಯೇ ದ್ವಿಜಾಃ ॥ ೩೨ ॥

ಬ್ರಾಹ್ಮಾದಿಷು ವಿವಾಹೇಷು ಚತುರ್ಷ್ವೇವಾನುಪೂರ್ವಶಃ ।
ಬ್ರಹ್ಮವರ್ಚಸ್ವಿನಃ ಪುತ್ರಾಃ ಜಾಯಂತೇ ಶಿಷ್ಟಸಂಮ್ಮತಾಃ ॥ ೩೩ ॥

ರೂಪಸತ್ವಗುಣೋಪೇತಾ ಧನವಂತೋ ಯಶಸ್ವಿನಃ ।
ಪುತ್ರವಂತೋಽಥ ಧರ್ಮಿಷ್ಠಾ ಜೀವಂತಿ ಚ ಶತಂ ಸಮಾಃ ॥ ೩೪ ॥

ಇತರೇಷು ನಿಬೋಧ ತ್ವಂ ನೃಶಂಸಾನೃತವಾದಿನಃ ।
ಜಾಯಂತೇ ದುರ್ವಿವಾಹೇಷು ಬ್ರಹ್ಮಧರ್ಮದ್ವಿಷಃ ಸುತಾಃ ॥ ೩೫ ॥

---

೩೨. ಓ ವಿಪ್ರರೇ! ಹೀಗೆ ಬ್ರಾಹ್ಮವಿವಾಹದಿಂದ ಹುಟ್ಟಿದ ಮಗನು ಪುಣ್ಯ ಶಾಲಿಯೆನಿಸುವನು. ದೈವವಿವಾಹದಿಂದ ಹುಟ್ಟಿದ ಮಗನು ತನ್ನ ಹಿಂದಿನ ಏಳುತಲೆ, ಮುಂದಿನ ಏಳು ತಲೆಯವರನ್ನು ಉದ್ಧರಿಸುವನು. ಆರ್ಷ ವಿವಾಹದಿಂದ ಹುಟ್ಟಿದ ಮಗನು ಹಿಂದಿನ ಮೂರುತಲೆ, ಮುಂದಿನ ಮೂರುತಲೆಯವರನ್ನು ದಾಟಿಸುವನು.

೩೩. ಬ್ರಾಹ್ಮವೇ ಮೊದಲಾಗಿ ಅನುಕ್ರಮವಾದ ನಾಲ್ಕುಬಗೆಯ ವಿವಾಹಗಳ ಮೂಲಕ ಪರಿಗ್ರಹಿಸಿದ ಪತ್ನಿಯರಲ್ಲಿ ಹುಟ್ಟಿದ ಮಕ್ಕಳು ಬ್ರಹ್ಮತೇಜಸ್ಸುಳ್ಳವರಾಗುವರು ಎಂದು ಶಿಷ್ಟರ ಅಭಿಪ್ರಾಯ.

೩೪. ಇಂಥವರು ಒಳ್ಳೆಯ ರೂಪವಂತರೂ ಸತ್ವಗುಣವುಳ್ಳವರೂ, ಧನವಂತರೂ, ಯಶಸ್ಸುಳ್ಳವರೂ, ಪುತ್ರವಂತರೂ, ಧರ್ಮಿಷ್ಠರೂ ಆಗಿ ನೂರುವರ್ಷಕಾಲ ಬದುಕುತ್ತಾರೆ.

೩೫. ಶಾಸ್ತ್ರಬದ್ಧವಲ್ಲದ ಇತರ ವಿವಾಹಗಳಿಂದ ಸ್ವೀಕರಿಸಿದ ಪತ್ನಿಯರಲ್ಲಿ ಹುಟ್ಟಿದವರು, ಘಾತುಕರೂ, ಸುಳ್ಳುಗಾರರೂ, ಬ್ರಹ್ಮದ್ವೇಷಿಗಳೂ, ಧರ್ಮದ್ವೇಷಿಗಳೂ ಆಗುವರು ಎಂದು ತಿಳಿದುಕೊ.

ಅನಿಂದಿತೈಃ ಸ್ತ್ರೀವಿವಾಹೈರನಿಂದ್ಯಾ ಭವತಿ ಪ್ರಜಾ ।
ನಿದಿಂತೈರ್ನಿಂದಿತಾ ನೃಣಾಂ ತಸ್ಮಾನ್ನಿಂಧ್ಯಾನ್ವಿವರ್ಜಯೇತ್ ॥ ೩೬ ॥

ಕರಗ್ರಹಣ ಸಂಸ್ಕಾರಾಃ ಸವರ್ಣಾಸು ಭವಂತಿ ವೈ ।
ಅಸವರ್ಣಾ ಸ್ವಯಂ ಜ್ಞೇಯೋ ವಿಧಿರುದ್ವಾಹಕರ್ಮಣಿ ॥ ೩೭ ॥

ಬಾಣೋ ಕ್ಷತ್ರಿಯಯಾ ಗ್ರಾಹ್ಯಃ ಪ್ರತೋದೋ ವೈಶ್ಯಕನ್ಯಯಾ ।
ವಸನಸ್ಯ ದಶಾ ಗ್ರಾಹ್ಯಾ ಶೂದ್ರಯೋತ್ಕೃಷ್ಟವೇದನೇ ॥ ೩೮ ॥

ನ ಕನ್ಯಾಯಾಃ ಪಿತಾ ವಿದ್ವಾನ್ ಗೃಹ್ಣೀಯಾಚ್ಛುಲ್ಕಮಣ್ವಪಿ ।
ಗೃಹ್ಣನ್ ಹಿ ಶುಲ್ಕಂ ಲೋಭೇನ ಸ್ಯಾನ್ನರೋಽಪತ್ಯವಿಕ್ರಯೀ ॥ ೩೯ ॥

---

೩೬. ಮಾನವರಿಗೆ ಉಕ್ತವಾದ ಕ್ರಮದಿಂದ ವಿವಾಹವಾದ ಸ್ತ್ರೀಯರಲ್ಲಿ ಅವರಿಗೆ ವಿಹಿತವಾದ ಮಕ್ಕಳೇ ಹುಟ್ಟುತ್ತಾರೆ. ನಿಂದಿತಗಳಾದ ವಿವಾಹಗಳಿಂದ ಪಡೆದ ಸ್ತ್ರೀಯರಲ್ಲಿ ನಿಂದಿತರಾದ ಮಕ್ಕಳೇ ಹುಟ್ಟುತ್ತಾರೆ. ಆದ್ದರಿಂದ ನಿಂದ್ಯಗಳಾದ ವಿವಾಹಗಳನ್ನು ಮಾಡಲೇಬಾರದು.

೩೭. ಸವರ್ಣಸ್ತ್ರೀಯನ್ನು ವಿವಾಹಮಾಡಿಕೊಳ್ಳುವಾಗ ಕನ್ಯೆಯ ಬಲಗೈಯನ್ನು ವರನು ತನ್ನ ಬಲಗೈಯಿಂದ ಹಿಡಿದುಕೊಳ್ಳುವುದು ಶಾಸ್ತ್ರೋಕ್ತವು. ಅಸವರ್ಣ ಸ್ತ್ರೀಯನ್ನು ಮದುವೆಮಾಡಿಕೊಳ್ಳುವಾಗ ಅನುಸರಿಸಬೇಕಾದ ವಿಧಿಯನ್ನು ಮುಂದೆ ಹೇಳಿದೆ.

೩೮. ಬ್ರಾಹ್ಮಣನು ಕ್ಷತ್ರಿಯ ಸ್ತ್ರೀಯನ್ನು ಲಗ್ನವಾಗುವಾಗ ಆಕೆಯ ಕೈಯಲ್ಲಿ ಬಾಣವದ ಒಂದು ತುದಿಯನ್ನು ಹಿಡಿಸಿ ಇನ್ನೊಂದು ತುದಿಯನ್ನು ತಾನೂ ಹಿಡಿದುಕೊಳ್ಳಬೇಕು. ವೈಶ್ಯಕನ್ಯೆಯನ್ನು ಮದುವೆಯಾಗುವುದಾದರೆ ಅವಳ ಕೈಯಲ್ಲಿ ಚಾಟಿಯ ಒಂದು ತುದಿಯನ್ನು ಹಿಡಿಸಿ ಇನ್ನೊಂದು ತುದಿಯನ್ನು ತಾನೂ ಹಿಡಿದಿರಬೇಕು. ಶೂದ್ರಕನ್ಯೆಯನ್ನು ಮದುವೆಯಾಗುವಾಗ ಬಟ್ಟೆಯ ಶೆರಗಿನ ತುದಿಯನ್ನು ಅವಳಿಂದ ಹಿಡಿಸಿ ತಾನೂ ಹಿಡಿದಿರಬೇಕು. ಈ ವಿಧಾನವನ್ನು ಅನುಸರಿಸಿ ಲಗ್ನವಾಗಬಹುದು.

೩೯. ಕನ್ಯೆಯ ತಂದೆಯು ತಿಳಿದವನಾದರೆ ಕನ್ಯಾಶುಲ್ಕವಾಗಿ ಒಂದು ಕಾಸನ್ನೂ ತೆಗೆದುಕೊಳ್ಳಬಾರದು. ಒಂದುವೇಳೆ ಲೋಭದಿಂದ ಹಾಗೆ ತೆಗೆದುಕೊಂಡರೆ ಮಕ್ಕಳನ್ನು ಮಾರಿದ ದೋಷಕ್ಕೆ ಗುರಿಯಾಗುವನು.

ಸ್ತ್ರೀಧನಾನಿ ತು ಯೇ ಮೋಹಾತ್ ಉಪಜೀವಂತಿ ಬಾಂಧವಾಃ ।
ನಾರೀಯಾನಾನಿ ವಸ್ತ್ರಂ ವಾ ತೇ ಪಾಪಾ ಯಾಂತ್ಯಧೋಗತಿಂ ॥ ೪೦ ॥

ಆರ್ಷೇ ಗೋಮಿಥುನಂ ಶುಲ್ಕಂ ಕೇಚಿದಾಹುರ್ಮೃಷೈವ ತತ್ ।
ಅಲ್ಪೋ ವಾಪಿ ಮಹಾನ್ವಾಪಿ ವಿಕ್ರಯಸ್ತಾವದೇವ ಸಃ ॥ ೪೧ ॥

ಯಾಸಾಂ ನಾ ದದತೇ ಶುಲ್ಕಂ ಜ್ಞಾತಯೋ ನ ಸ ವಿಕ್ರಯಃ ।
ಅರ್ಹಣಂ ತತ್ಕುಮಾರೀಣಾಂ ಆನೃಶಂಸ್ಯಂ ಚ ಕೇವಲಂ ॥ ೪೨ ॥

ಇತ್ಥಂ ದಾರಾನ್ ಸಮಾಸಾದ್ಯ ದೇಶಮಗ್ರ್ಯಂ ಸಮಾವಸೇತ್ ।
ಬ್ರಾಹ್ಮಣೋ ದ್ವಿಜಶಾರ್ದೂಲ ಯ ಇಚ್ಛೇದ್ವಿಪುಲಂ ಯಶಃ ॥ ೪೩ ॥

---

೪೦. ಸ್ತ್ರೀಧನವಾಗಿರುವ ವಸ್ತ್ರ, ಆಭರಣ, ವಾಹನಾದಿಗಳನ್ನು ಆಕೆಯ ಬಂಧುಗಳು ಅಜ್ಞಾನದಿಂದ ಉಪಯೋಗಿಸಿಕೊಂಡರೆ ಪಾಪಿಷ್ಠರೆನಿಸಿಕೊಂಡು ಅಧೋಗತಿಗೆ ಹೋಗುತ್ತಾರೆ.

೪೧. ಆರ್ಷ ವಿವಾಹದಲ್ಲಿ ಒಂದುಜತೆ ಗೋವುಗಳನ್ನು ಶುಲ್ಕವಾಗಿ ತೆಗೆದುಕೊಳ್ಳಬಹುದೆಂದು ಕೆಲವರು ಹೇಳುತ್ತಾರೆ. ಅದೂ ವಿಹಿತವಾದ್ದಲ್ಲ, ಬೆಲೆ ಕಮ್ಮಿಯದಾಗಿರಲಿ, ಹೆಚ್ಚು ಬೆಲೆಯದಾಗಿರಲಿ, ಈ ನಡವಳಿಕೆಯೂ ಕನ್ಯಾವಿಕ್ರಯವೇ ಆಗಿದೆ.

೪೨. ಯಾರ ಜ್ಞಾತಿಗಳು ಶುಲ್ಕ ತೆಗೆದುಕೊಳ್ಳುವುದಿಲ್ಲವೋ ಆವಾಗ ಅದು ವಿಕ್ರಯವೇ ಅಲ್ಲ. ಆ ಸಂದರ್ಭದಲ್ಲಿ ಕನ್ಯೆಗೆ ಕೊಟ್ಟ ಹಣವು ಅವಳಿಗೆ ಮಾಡಿದ ಪೂಜಾಸತ್ಕಾರವೆನಿಸುವುದು. ಮತ್ತು ಅದು ಹೆಂಗಸರ ವಿಷಯದಲ್ಲಿ ನಡೆದುಕೊಂಡ ಅಕ್ರೂರವರ್ತನೆ ಅಷ್ಟೆ.

೪೩. ತನಗೆ ಬಹಳ ಯಶಸ್ಸುಬರಬೇಕೆಂಬ ಇಚ್ಛೆಯುಳ್ಳ ಬ್ರಾಹ್ಮಣನು ಹೀಗೆ ಈ ಉತ್ತಮ ಕ್ರಮಗಳಲ್ಲಿ ಹೆಂಗಸರನ್ನು ಮದುವೆಯಾಗಿ ಶ್ರೇಷ್ಠವಾದ ದೇಶದಲ್ಲಿ ವಾಸಿಸಬೇಕು.

॥ ಋಷಯ ಊಚುಃ ॥

ಕೋ ದೇಶಃ ಪರಮೋ ಬ್ರಹ್ಮನ್ ಕಶ್ಚ ಪುಣ್ಯೋ ಮತಸ್ತವ ।
ಪ್ರವಸನ್ ಯತ್ರ ವಿಪ್ರೇಂದ್ರ ಯಶಃ ಪ್ರಾಪ್ನೋತಿ ಕಂಜಜ ॥ ೪೪ ॥

॥ ಬ್ರಹ್ಮೋವಾಚ ॥

ನ ಹೀಯತೇ ಯತ್ರಧರ್ಮಃ ಚತುಷ್ಪಾತ್ಸಕಲೋ ದ್ವಿಜಾಃ ।
ಸ ದೇಶಃ ಪರಮೋ ವಿಪ್ರಾಃ ಸ ಚ ಪುಣ್ಯೋ ಮತೋ ಮಮ ॥ ೪೫ ॥

ವಿದ್ವದ್ಭಿಃ ಸೇವಿತೋ ಧರ್ಮೋ ಯಸ್ಮಿನ್ ದೇಶೇ ಪ್ರವರ್ತತೇ ।
ಶಾಸ್ತ್ರೋಕ್ತಶ್ಚಾಪಿ ವಿಪ್ರೇಂದ್ರಾಃ ಸ ದೇಶಃ ಪರಮೋ ಮತಃ ॥ ೪೬ ॥

॥ ಋಷಯ ಊಚುಃ ॥

ವಿದ್ವದ್ಭಿಃ ಸೇವಿತಂ ಧರ್ಮಂ ಶಾಸ್ತ್ರೋಕ್ತಂ ಚ ಸುರೋತ್ತಮ ।
ವದಾಸ್ಮಾಸು ಸುರಶ್ರೇಷ್ಠ ಕೌತುಕಂ ಪರಮಂ ಹಿ ನಃ ॥ ೪೭ ॥

---

೪೪. ಆಗ ಋಷಿಗಳು ಕೇಳುತ್ತಾರೆ—ಎಲೈ ಕಮಲದಲ್ಲಿ ಹುಟ್ಟಿದ ಬ್ರಹ್ಮನೇ! ತನ್ನ ದೇಶವನ್ನು ಬಿಟ್ಟು ಬೇರೆ ಇನ್ನು ಯಾವ ದೇಶಕ್ಕೆ ಹೋದರೆ ಬ್ರಾಹ್ಮಣನು ಯಶೋವಂತನಾಗುತ್ತಾನೋ ಆದನ್ನು ಹೇಳು ಎಂದು ಕೇಳಿದರು.

೪೫. ಆಗ ಬ್ರಹ್ಮನು ಹೇಳುತ್ತಾನೆ—ಬ್ರಾಹ್ಮಣರೇ! ಕೇಳಿ, ಎಲ್ಲಿ ಧರ್ಮವು ನಾಲ್ಕುಪಾದಗಳುಳ್ಳದ್ದಾಗಿ, ಎಂದರೆ ಪೂರ್ಣವಾಗಿರುವುದೋ ಆ ದೇಶದಲ್ಲಿ ವಾಸಿಸುವುದು ಒಳ್ಳೆಯದೆಂದು ನನ್ನ ಮತ.

೪೬. ಓ ಬ್ರಾಹ್ಮಣೋತ್ತಮರೇ! ತಿಳಿದವರು ಅನುಮತಿಸಿ ಸೇವಿಸುವ ಧರ್ಮವು ಯಾವ ದೇಶದಲ್ಲಿ ಆಚರಣೆಯಲ್ಲಿರುವುದೋ ಮತ್ತು ಆ ಧರ್ಮವು ಶಾಸ್ತ್ರೋಕ್ತವೂ ಆಗಿರುವುದೋ, ಅಂಥ ದೇಶವೇ ಶ್ರೇಷ್ಠವಾದುದು ಎಂದು ಹೇಳಿದನು.

೪೭. ಆಗ ಋಷಿಗಳು ಮತ್ತೆ ಕೇಳುತ್ತಾರೆ—ಅಯ್ಯಾ ದೇವಶ್ರೇಷ್ಠನೇ! ವಿದ್ವಾಂಸರು ಆಚರಿಸಬೇಕೆಂದು ಶಾಸ್ತ್ರದಲ್ಲಿ ಉಕ್ತವಾಗಿರುವ ಧರ್ಮಸ್ವರೂಪವನ್ನೂ ಕೇಳಲು ನಮಗೂ ಬಹಳ ಕುತೂಹಲವಿದೆ. ಆದ್ದರಿಂದ ಕೃಪೆಮಾಡಿ ಹೇಳಬೇಕು ಎಂದರು.

॥ ಬ್ರಹ್ಮೋವಾಚ ॥

ವಿದ್ವದ್ಭಿಃ ಸೇವಿತಃ ಸದ್ಭಿಃ ನಿತ್ಯಮದ್ವೇಷರಾಗಿಭಿಃ ।
ಹೃದಯೇನಾಭ್ಯನುಜ್ಞಾತೋ ಯೋ ಧರ್ಮ ಸ್ತಂ ನಿಬೋಧತ ॥ ೪೮ ॥

ಕಾಮಾತ್ಮತಾ ನ ಪ್ರಶಸ್ತಾ ನ ಚೇಹಾಸ್ತ್ಯಕಾಮತಾ ।
ಕಾಮ್ಯೋಹಿ ವೇದಾಧಿಗಮಃ ಕರ್ಮಯೋಗಶ್ಚ ವೈದಿಕಂ ॥ ೪೯ ॥

ಸಂಕಲ್ಪಾಜ್ಜಾಯತೇ ಕಾಮೋ ಯಜ್ಞಾದ್ಯಾನಿ ಚ ಸರ್ವಶಃ ।
ವ್ರತಾ ನಿಯಮಧರ್ಮಾಶ್ಚ ಸರ್ವೇ ಸಂಕಲ್ಪಜಾಃ ಸ್ಮೃತಾಃ ॥ ೫೦ ॥

ಕಾಮಾದ್ವೃತೇ ಕ್ರಿಯಾಕಾರೀ ದೃಶ್ಯತೇ ನೇಹ ಕರ್ಹಿಚಿತ್ ।
ಯದ್ಯದ್ಧಿ ಕುರುತೇ ಕಶ್ಚಿತ್ ತತ್ತತ್ಕಾಮಸ್ಯ ಚೇಷ್ಟಿತಂ ॥ ೫೧ ॥

ನಿಗಮೋ ಧರ್ಮಮೂಲಂ ಸ್ಯಾತ್ ಸ್ಮೃತಿಶೀಲೇ ತಥೈವ ಚ ।
ತಥಾಚಾರಶ್ಚ ಸಾಧೂನಾಂ ಆತ್ಮನಸ್ತುಷ್ಟಿರೇವ ಚ ॥ ೫೨ ॥

---

೪೮. ಆಗ ಬ್ರಹ್ಮನು ಹೇಳುತ್ತಾನೆ:— ರಾಗದ್ವೇಷಗಳಿಲ್ಲದವರೂ, ವಿದ್ವಾಂಸರೂ ಆದ ಸಜ್ಜನರು ಆಚರಿಸುವ, ಮತ್ತು ಅವರ ಮನಸ್ಸು ಒಪ್ಪುವ, ಧರ್ಮವು ಯಾವದೋ ಅದನ್ನು ತಿಳಿದುಕೊಳ್ಳಿರಿ.

೪೯. ಕಾಮಿಗಳಾಗುವುದು ಅಷ್ಟೇನೂ ಪ್ರಶಸ್ತವಲ್ಲ. ಹೀಗೆಂದು ಸುತರಾಂ ನಿಷ್ಕಾಮದಿಂದ ವರ್ತಿಸುವುದೂ ಒಳ್ಳೆಯದಲ್ಲ, ವೇದಾಧ್ಯಯನವೇ ಒಂದು ಕಾಮ್ಯ ಕರ್ಮವಾಗಿದೆ. ಕರ್ಮಾಚರಣೆಯೂ ವೇದೋಕ್ತವೇ ಆಗಿದೆ.

೫೦. ಸಂಕಲ್ಪದಿಂದಲೇ ಕಾಮವು ಉತ್ಪನ್ನವಾಗುವುದು. ಸಮಸ್ತವಾದ ಯಜ್ಞಾದಿಗಳೂ, ವ್ರತಗಳೂ ಆಯಾ ಜನಕ್ಕೆ ನಿಯತವಾದ ಧರ್ಮಗಳೂ ಎಲ್ಲವೂ ಸಂಕಲ್ಪದಿಂದಲೇ ಎಂದು ತಿಳಿಯಬೇಕು.

೫೧. ಯಾವ ಒಂದು ಆಶೆಯೂ ಇಲ್ಲದೆ ಕೆಲಸಮಾಡುವರನ್ನು ಯಾರನ್ನೂ ಕಂಡಿಲ್ಲ. ಎಲ್ಲರೂ ಮಾಡುವ ಕೆಲಸವೂ ಆಶೆಯ (ಕಾಮದ) ವ್ಯಾಪಾರವೇ ಸರಿ.

೫೨. ವೇದಗಳು ಮತ್ತು ಸ್ಮೃತಿಗಳು ಸಜ್ಜನರ ಆಚಾರ, ನಮ್ಮ ಮನಸ್ತೃಪ್ತಿ ಇವು ಧರ್ಮಕ್ಕೆ ಮೂಲ. ಎಂದರೆ ನಮ್ಮ ಮನಸ್ಸಿಗೂ ಒಪ್ಪಿ ಶಾಸ್ತ್ರಜ್ಞರೂ ಸಮ್ಮತಿಸುವ ಪ್ರಕಾರದ ಧರ್ಮವೇ ಉತ್ತಮ.

ಸರ್ವಂ ತು ಸಮವೇಕ್ಷೇತ ನಿಶ್ಚಯಂ ಜ್ಞಾನಚಕ್ಷುಷಾ ।
ಶ್ರುತಿಸ್ಪ್ರಾಮಾಣ್ಯತೋ ವಿದ್ವಾನ್ ಸ್ವಧರ್ಮೇ ನಿವಸೇತ ವೈ ॥ ೫೩ ॥

ಶ್ರುತಿಸ್ಮೃತ್ಯುದಿತಂ ಧರ್ಮಂ ಅನುತಿಷ್ಠನ್ ಸದಾ ನರಃ ।
ಪ್ರಾಪ್ಯ ಚೇಹ ಪರಾಂ ಕೀರ್ತಿಂ ಯಾತಿ ಬ್ರಹ್ಮಸಲೋಕತಾಂ ॥ ೫೪ ॥

ಶ್ರುತಿಸ್ತು ವೇದೋ ವಿಜ್ಞೇಯೋ ಧರ್ಮಶಾಸ್ತ್ರಂ ತು ವೈ ಸ್ಮೃತಿಃ ।
ತೇ ಸರ್ವಾರ್ಥೇಷು ಮೀಮಾಂಸ್ಯೇ ತಾಭ್ಯಾಂ ಧರ್ಮೋ ಹಿ ನಿರ್ಬಭೌ
॥ ೫೫ ॥

ಯೋऽವಮನ್ಯೇತ ತೇ ಚೋಭೇ ಹೇತುಶಾಸ್ತ್ರಾಶ್ರಯಾದ್ದ್ವಿಜಃ ।
ಸ ಸಾಧುಭಿರ್ಬಹಿಷ್ಕಾರ್ಯೋ ನಾಸ್ತಿಕೋ ವೇದನಿಂದಕಃ ॥ ೫೬ ॥

---

೫೩. ತಿಳಿದವನು ವೇದವನ್ನು ಪ್ರಮಾಣವಾಗಿಟ್ಟುಕೊಂಡು ಅದರಂತೆ ತನ್ನ ಜ್ಞಾನದೃಷ್ಟಿಯಿಂದ ನೋಡಿ ನಿಜವನ್ನು ತಿಳಿದು ಸ್ವಧರ್ಮದಲ್ಲೇ ವರ್ತಿಸಬೇಕು.

೫೪. ವೇದಗಳು, ಮನ್ವಾದಿಸ್ಮೃತಿಗಳು ಇವುಗಳಲ್ಲಿ ಹೇಳಿರುವ ಧರ್ಮವನ್ನು ಮಾನವನು ಅನುಸರಿಸಿ ನಡೆಯುತ್ತಾ ಬಂದರೆ ಇಹಲೋಕದಲ್ಲಿ ಉತ್ತಮಕೀರ್ತಿಯನ್ನು ಪಡೆಯುವನಲ್ಲದೆ ದೇಹಾವಸಾನದಲ್ಲಿ ಇಂದ್ರಸಾಲೋಕ್ಯವೆಂಬ ಪದವಿಯನ್ನು ಪಡೆಯುತ್ತಾನೆ.

೫೫. ಶ್ರುತಿಯೆಂದರೆ ವೇದ; ಧರ್ಮಶಾಸ್ತ್ರಗಳೇ ಮುಂತಾದುವು ಸ್ಮೃತಿಗಳು; ಸರ್ವಕಾರ್ಯಗಳನ್ನು ಮಾಡಬೇಕಾದಾಗಲೂ, ಅವುಗಳಲ್ಲೇ ವಿಚಾರಮಾಡಬೇಕು. ಈ ಶ್ರುತಿ, ಸ್ಮೃತಿ ಎರಡರಿಂದಲೇ ಧರ್ಮವು ಪ್ರಕಾಶಿತವಾಯ್ತು.

೫೬. ಯಾವುದೋ ಒಂದು ಹೇತುವನ್ನೋ ಶಾಸ್ತ್ರವನ್ನೋ ಆಶ್ರಯಿಸಿಕೊಂಡ ಬ್ರಾಹ್ಮಣನೂ, ಈ ಶ್ರುತಿ ಸ್ಮೃತಿ ಎರಡನ್ನೂ ಗೌರವಿಸದೆ ಇರುವವನೂ, ವೇದವನ್ನು ಹಳಿಯುವ ನಾಸ್ತಿಕನೆನಿಸುವನು. ಅವನನ್ನು ಸಜ್ಜನರೆಲ್ಲರೂ ಬಹಿಷ್ಕರಿಸಬೇಕು.

ವೇದಃ ಸ್ಮೃತಿಃ ಸದಾಚಾರಃ ಸ್ವಸ್ಯ ಚ ಪ್ರಿಯಮಾತ್ಮನಃ ।
ಏತಚ್ಚತುರ್ವಿಧಂ ವಿಪ್ರಾಃ ಸಾಕ್ಷಾದ್ಧರ್ಮಸ್ಯ ಲಕ್ಷಣಂ ॥ ೫೭ ॥

ಧರ್ಮಜ್ಞಾನಂ ಭವೇದ್ವಿಪ್ರಾ ಅರ್ಥಕಾಮೇಷ್ವಸಜ್ಜತಾಂ ।
ಧರ್ಮಂ ಜಿಜ್ಞಾಸಮಾನಾನಾಂ ಪ್ರಮಾಣಾನ್ನೈಗಮಂ ಪರಮ್ ॥ ೫೮ ॥

ನಿಷೇಕಾದಿಶ್ಮಶಾನಾಂತೋ ಮಂತ್ರೈರ್ಯಸ್ಯೋದಿತೋ ವಿಧಿಃ ।
ಅಧಿಕಾರೋಭವೇತ್ತಸ್ಯ ವೇದೇಷು ಚ ಜಪೇಷು ಚ ॥ ೫೯ ॥

ಸರಸ್ವತೀದೃಷದ್ವತ್ಯೋರ್ದೇವನದ್ಯೋರ್ಯದಂತರಂ ।
ತದೇವ ನಿರ್ಮಿತಂ ದೇಶಂ ಬ್ರಹ್ಮಾವರ್ತಂ ಪ್ರಚಕ್ಷತೇ ॥ ೬೦ ॥

ಯಸ್ಮಿನ್ ದೇಶೇ ಯ ಆಚಾರಃ ಪಾರಂಪರ್ಯಕ್ರಮಾಗತಃ ।
ವರ್ಣಾನಾಂ ಸಾಂತರಾಲಾನಾಂ ಸ ಸದಾಚಾರ ಉಚ್ಯತೇ ॥ ೬೧ ॥

---

೫೭. ಓ ಬ್ರಾಹ್ಮಣೋತ್ತಮರೇ ! ಕೇಳಿ ವೇದಾಧ್ಯಯನ, ಸ್ಮೃತಿಪರಿಚಯ, ತನ್ನ ಒಳ್ಳೆಯ ನಡವಳಿಕೆ, ತನಗೆ ಇಷ್ಟವಾದ ವಿಷಯ, ಈ ನಾಲ್ಕೂ ನಮಗೆ ಕಾಣಿಸುವ ಧರ್ಮದ ಲಕ್ಷಣಗಳು.

೫೮. ಓ ವಿಪ್ರರೇ ! ಕೇಳಿ ಧರ್ಮಜ್ಞಾನವು ಇದ್ದೀತು. ಆದರೆ ಅರ್ಥ, ಕಾಮ ಇವುಗಳ ಸಂಪಾದನೆಯಲ್ಲೇ ತಗಲಿಕೊಂಡು ಧರ್ಮವನ್ನು ತಿಳಿಯಬೇಕೆಂಬ ಇಚ್ಛೆಯುಳ್ಳವನಿಗೆ ವೇದವೇ ಶ್ರೇಷ್ಠವಾದ ಪ್ರಮಾಣವು.

೫೯. ಗರ್ಭಾದಾನರೂಪವಾದ ನಿಷೇಕ ಮೊದಲುಗೊಂಡು ದೇಹಾವಸಾನದ ಅನಂತರ ನಡೆಯುವ ಪ್ರೇತಕರ್ಮ ಸಮಾಪ್ತಿಪರ್ಯಂತ ಉಳ್ಳ ಶಾಸ್ತ್ರವಿಧಿಗಳು ಯಾವನಿಗಾಗಿ ಉಕ್ತಗಳಾಗಿವೆಯೋ ಅಂಥ ವಿಪ್ರನಿಗೆ ವೇದಗಳಲ್ಲೂ ಜಪಗಳಲ್ಲೂ ಅಧಿಕಾರವುಂಟು.

೬೦. ಸರಸ್ವತೀ ದೃಷದ್ವತೀ ನದಿಗಳಿಗೂ ಗಂಗಾನದಿಗೂ ಮಧ್ಯದಲ್ಲಿರುವ ಪ್ರದೇಶವನ್ನು ಬ್ರಹ್ಮಾವರ್ತವೆಂದು ಹೇಳುತ್ತಾರೆ.

೬೧. ಯಾವ ದೇಶದಲ್ಲಿ ಯಾವ ಆಚಾರಗಳು ವಂಶಪಾರಂಪರ್ಯವಾಗಿ (ತಲೆತಲಾಂತರದಿಂದ) ರೂಢಿಗೆ ಬಂದಿವೆಯೋ ಅವು ಆಯಾ ವರ್ಣಗಳವರಿಗೂ ಅದರ ಒಳಪಂಗಡಗಳವರಿಗೂ ಸದಾಚಾರವೆಂದು ಹೇಳಬಹುದು.

ಕುರುಕ್ಷೇತ್ರಂ ಚ ಮತ್ಸ್ಯಾಶ್ಚ ಪಂಚಾಲಾಃ ಶೂರಸೇನಯಃ ।
ಏಷ ಬ್ರಹ್ಮರ್ಷಿದೇಶೋ ವೈ ಬ್ರಹ್ಮಾವರ್ತಾದನಂತರಂ ॥ ೬೨ ॥

ಏತದ್ದೇಶಪ್ರಸೂತಸ್ಯ ಸಕಾಶಾದಗ್ರಜನ್ಮನಃ ।
ಸ್ವಂಸ್ವಂ ಚರಿತ್ರಂ ಶಿಕ್ಷಂತಿ ಪೃಥಿವ್ಯಾಂ ಸರ್ವಮಾನವಾಃ ॥ ೬೩ ॥

ಹಿಮವದ್ವಿಂಧ್ಯಯೋರ್ಮಧ್ಯೇ ಯತ್ಪ್ರಾಗ್ವಿನಶನಾದಪಿ ।
ಪ್ರತ್ಯಗೇವ ಪ್ರಯಾಗಾಚ್ಚ ಮಧ್ಯದೇಶಃ ಪ್ರಕೀರ್ತಿತಃ ॥ ೬೪ ॥

ಆ ಸಮುದ್ರಾತ್ತು ವೈ ಪೂರ್ವಾದಾಸಮುದ್ರಾತ್ತು ಪಶ್ಚಿಮಾತ್ ।
ತಯೋರೇವಾಂತರಂ ಗಿರ್ಯೋರಾರ್ಯಾವರ್ತಂ ವಿದುರ್ಬುಧಾಃ ॥ ೬೫ ॥

ಅಟತೇ ಯತ್ರ ಕೃಷ್ಣಾಗೌರ್ಮೃಗೋ ನಿತ್ಯಂ ಸ್ವಭಾವತಃ ।
ಸ ಜ್ಞೇಯೋ ಯಾಜ್ಞಿಕೋ ದೇಶೋ ಮ್ಲೇಚ್ಛದೇಶಸ್ತ್ವತಃ ಪರಃ ॥ ೬೬ ॥

---

೬೨. ಬ್ರಹ್ಮಾವರ್ತವಾದಮೇಲೆ ಕುರುಕ್ಷೇತ್ರ, ಮತ್ಸ್ಯ, ಪಂಚಾಲ, ಶೂರಸೇನ ಈ ದೇಶಗಳು ಬ್ರಹ್ಮರ್ಷಿ ದೇಶವೆನಿಸಿಕೊಳ್ಳುವುದು.

೬೩. ಈ ದೇಶಗಳಲ್ಲಿ ಜನ್ಮವೆತ್ತಿದ ವಿಪ್ರನಿಂದ ಪೃಥ್ವಿಯಲ್ಲಿನ ಸಮಸ್ತ ಮಾನವರೂ ತಮ್ಮ ತಮ್ಮ ಆಚಾರ ವ್ಯಹಾರವನ್ನು ಕಲಿತುಕೊಳ್ಳುತ್ತಾರೆ. ಎಂದರೆ ಇವರು ಇತರರೆಲ್ಲರಿಗೂ ಆಚಾರದಲ್ಲಿ ಮೇಲ್ಪಂಕ್ತಿಯಾಗಿರುತ್ತಾರೆ.

೬೪. ಹಿಮವತ್ಪರ್ವತ, ವಿಂಧ್ಯಪರ್ವತಗಳ ಮಧ್ಯೆ, ವಿನಶನಕ್ಕೆ ಪೂರ್ವದಿಕ್ಕಿನಲ್ಲಿ ಪ್ರಯಾಗಕ್ಕೆ ಪಶ್ಚಿಮದಲ್ಲಿ ಇರುವ ದೇಶವು ಮಧ್ಯದೇಶವೆನಿಸಿಕೊಳ್ಳುವುದು.

೬೫. ಪೂರ್ವಸಮುದ್ರದಿಂದ ಪಶ್ಚಿಮಸಮುದ್ರದವರೆಗೂ ಹಿಮವತ್ಪರ್ವತದಿಂದ ವಿಂಧ್ಯಪರ್ವತದವರೆಗೂ ಇರುವ ದೇಶವನ್ನು ಆರ್ಯಾವರ್ತವೆಂದು ತಿಳಿಯಬೇಕು.

೬೬. ಜಿಂಕೆಗಳೂ, ಕರಿಯುಹಸುಗಳೂ, ಸ್ವಭಾವವಾಗಿ ಎಲ್ಲಿ ತಿರುಗುವುವೋ ಅದನ್ನು ಯಜ್ಞಯೋಗ್ಯವಾದ ದೇಶವೆಂದು ಕರೆಯುತ್ತಾರೆ. ಇದನ್ನು ಬಿಟ್ಟು ಬೇರೆಯವು ಮ್ಲೇಂಛ ದೇಶಗಳು ಎಂದು ತಿಳಿಯಬೇಕು.

ಏತಾನ್ನಿತ್ಯಂ ಶುಭಾನ್ ದೇಶಾನ್ ಸಂಶ್ರಯೇತ ದ್ವಿಜೋತ್ತಮಃ ।
ಯಸ್ಮಿನ್ ಕಸ್ಮಿಂಶ್ಚ ನಿವಸೇತ್ ಪಾದಜೋ ವೃತ್ತಿಕರ್ಶಿತಃ ॥ ೬೭ ॥

ಪ್ರಕೀರ್ತಿತೇಯಂ ಧರ್ಮಸ್ಯ ಬುಧ್ಯೈರ್ಯೋನಿರ್ದ್ವಿಜೋತ್ತಮಾಃ ।
ಸಂಭವಶ್ಚಾಸ್ಯ ಸರ್ವಸ್ಯ ಸಮಾಸಾನ್ನತು ವಿಸ್ತರಾತ್. ॥ ೬೮ ॥

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ವಿವಾಹಧರ್ಮ ವರ್ಣನಂ ನಾಮ ಸಪ್ತಮೋಽಧ್ಯಾಯಃ**



---

೬೭. ಜೀವನಕ್ಕೆ ಕಷ್ಟವಾಗಿರುವ ಬ್ರಾಹ್ಮಣನು ಶುಭಕರಗಳಾದ ಈ ದೇಶಗಳಲ್ಲಿ ತನಗೆ ಅನುಕೂಲತೋರುವ ಯಾವ ದೇಶದಲ್ಲಾದರೂ ವಾಸಿಸಬಹುದು.

೬೮. ಓ ಬ್ರಾಹ್ಮಣರೇ ! ಕೇಳಿ. ಧರ್ಮದ ಮೂಲವನ್ನೂ ಅದರಿಂದ ಸರ್ವಕರ್ಮಗಳ ಉತ್ಪತ್ತಿಯನ್ನೂ ವಿಸ್ತಾರವಾಗಿ ತಿಳಿಸಲು ಇಲ್ಲಿ ಅವಕಾಶವಿಲ್ಲ. ಆದ್ದರಿಂದ ಬಹು ಸಂಕ್ಷೇಪವಾಗಿ ತಿಳಿಸಿದೇನೆ ಎಂದು ಹೇಳಿದನು.

ಎಂಬಲ್ಲಿಗೆ ಭವಿಷ್ಯಮಹಾಪುರಾಣದಲ್ಲಿ ಬ್ರಾಹ್ಮಪರ್ವದಲ್ಲಿ ವಿವಾಹಧರ್ಮ ವರ್ಣನ ಎಂಬ ಏಳನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಅಷ್ಟಮೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಕರ್ತವ್ಯಂ ಯದ್ಗೃಹಸ್ಥೇನ ತದಿದಾನೀಂ ನಿಬೋಧತ ।
ಗದತೋ ದ್ವಿಜಶಾರ್ದೂಲ ವಿಸ್ತರಾಚ್ಛಾಸ್ತ್ರತಸ್ತಥಾ ॥ ೧ ॥

ವೈವಾಹಿಕೇಽಗ್ನೌ ಕುರ್ವೀತ ಗೃಹ್ಯಂ ಕರ್ಮ ಯಥಾವಿಧಿ ।
ಶುಭದೇಶಾಶ್ರಯಾಚ್ಚೈವ ಪತ್ನೀ ವೈವಾಹಿಕೀ ಗೃಹೇ ॥ ೨ ॥

ಸ್ವಾಶ್ರಯೇಣ ವಿನಾಶಕ್ಯಂ ನ ಯಸ್ಮಾದ್ರಕ್ಷಣಾದಿಕಂ ।
ವಿತ್ತಾನಾಮಿವ ದಾರಾಣಾಮತಸ್ತದ್ವಿಧಿರುಚ್ಯತೇ ॥ ೩ ॥

---

## ಎಂಟನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಈಗ ಗೃಹಸ್ಥನು ನಡೆಯಿಸಬೇಕಾದುದನ್ನು ತಿಳಿದುಕೊಳ್ಳಿರಿ. ಶಾಸ್ತ್ರದಲ್ಲಿ ಹೇಳಿರುವಂತೆ ನಾನು ವಿಶದವಾಗಿ ಹೇಳುತ್ತೇನೆ.

೨. ಶಾಸ್ತ್ರಾನುಸಾರವಾಗಿ ವಿವಾಹದಲ್ಲಿ ನಾವು ಸ್ಥಾಪನಮಾಡಿಕೊಂಡ ಅಗ್ನಿಯಲ್ಲಿ ಗೃಹ್ಯಕರ್ಮವನ್ನು ಮಾಡಬೇಕು. ವಿವಾಹಮಾಡಿಕೊಂಡ ಹೆಂಡತಿಯನ್ನು ಅನುಕೂಲವಾದ ಒಳ್ಳೆಯ ಸ್ಥಲದಲ್ಲಿ ಇಡಬೇಕು. ಅವಳಿಗೆ ಒಳ್ಳೆಯ ಆಶ್ರಯವಿಲ್ಲದಿದ್ದರೆ ಅವಳನ್ನು ರಕ್ಷಿಸುವುದು ಕಷ್ಟ.

೩. ದ್ರವ್ಯವನ್ನು ಸರಿಯಾದ ಸ್ಥಲದಲ್ಲಿಡದಿದ್ದರೆ ಹೇಗೆ ರಕ್ಷಿಸುವುದು ಅಶಕ್ಯವೋ ಹಾಗೆಯೇ ಹೆಂಡತಿಯನ್ನು ಸರಿಯಾದ ಸ್ಥಲದಲ್ಲಿಡದಿದ್ದರೆ ರಕ್ಷಿಸುವುದು ಕಷ್ಟವು. ಆದುದರಿಂದ ಆಕೆಯ ರಕ್ಷಣ ವಿಧಾನವನ್ನು ಹೇಳುತ್ತೇನೆ.

**ಹೇತವೋ ಹಿ ತ್ರಿವರ್ಗಸ್ಯ ವಿಪರೀತಾಸ್ತು ಮಾನದ ।**
**ಅರಕ್ಷಣಾದ್ಧ್ರುವಂತ್ಯಸ್ಮಾದಮೀಷಾಂ ರಕ್ಷಣಂ ಮತಂ ॥ ೪ ॥**

**ನಿಸರ್ಗಾತ್ ಪುಂಸ್ಯಸಂತೋಷಾತ್ ಗುಣದೋಷವಿಮರ್ಶತಃ ।**
**ದುಷ್ಟಾನಾಂ ಚಾಪಿ ಸಂಸರ್ಗಾದ್ರಕ್ಷ್ಯಾ ಏವ ಚ ಯೋಷಿತಃ ॥ ೫ ॥**

**ಪುರುಷಸ್ಥಾನವೇಶ್ಮಾನಿ ತ್ರಿವಿಧಂ ಪ್ರಾಹುರಾಶ್ರಯಂ ।**
**ವಿತ್ತಾನಾಂ ರಕ್ಷಣಾದ್ಯರ್ಥಮಪೂರ್ವಾರ್ಥಿಗಮಾಯ ಚ ॥ ೬ ॥**

**ಕುಲೀನೋ ನೀತಿಮಾನ್ ಪ್ರಾಜ್ಞಃ ಸತ್ಯಸಂಧೋ ದೃಢವ್ರತಃ ।**
**ವಿನೀತೋ ಧಾರ್ಮಿಕಸ್ತ್ಯಾಗೀ ವಿಜ್ಞೇಯಃ ಪುರುಷಾಶ್ರಯಃ ॥ ೭ ॥**

---

೪. ದ್ರವ್ಯಗಳು ತ್ರಿವರ್ಗಕ್ಕೆ ಕಾರಣಗಳಾದುವು. ಅವನ್ನು ರಕ್ಷಿಸದೆ ಇದ್ದರೆ ತ್ರಿವರ್ಗಪ್ರಾಪ್ತಿಗೆ ವಿರೋಧವಾದ್ದರಿಂದ ಅವುಗಳನ್ನು ರಕ್ಷಿಸಬೇಕೆಂದು ಪ್ರಾಜ್ಞರು ಅಭಿಪ್ರಾಯಪಡುತ್ತಾರೆ.

೫. ಸ್ತ್ರೀಯರಿಗೆ ಸ್ವಭಾವವಾಗಿ ಪುರುಷನಲ್ಲಿ ತೃಪ್ತಿಯಿಲ್ಲದಿರುವುದರಿಂದಲೂ, ಇವರು ಪುರುಷರಲ್ಲಿ ಗುಣದೋಷಗಳನ್ನು ವಿಮರ್ಶೆಮಾಡುವುದರಿಂದಲೂ, ಮತ್ತು ದುಷ್ಟಸ್ತ್ರೀಯರ ಸಹವಾಸದಿಂದಲೂ ಇವರು ಕೆಡುವ ಸಂಭವವಿರುವುದರಿಂದ ಹೀಗಾಗದಂತೆ ಸ್ತ್ರೀಯರನ್ನು ಕಾಪಾಡಿಕೊಳ್ಳಬೇಕು.

೬. ಲಬ್ಧವಾದ ವಿತ್ತವನ್ನು ರಕ್ಷಿಸುವುದಕ್ಕೂ, ಇನ್ನೂ ಲಬ್ಧವಾಗದೆ ಇರುವುದರ ಸಂಪಾದನೆಗಾಗಿಯೂ, ಯೋಗ್ಯನಾದ ಪುರುಷ, ಹೂಳಿಡಲು ತಕ್ಕಸ್ಥಾನ, ಮತ್ತು ಮನೆ, ಎಂಬ ಇವು ಮೂರು ಆಶ್ರಯವೆಂದು ಹೇಳುತ್ತಾರೆ.

೭. ಒಳ್ಳೆಯ ವಂಶದಲ್ಲಿ ಹುಟ್ಟಿದವನು, ನೀತಿವಂತ ವಿಷಯಗಳನ್ನು ಚೆನ್ನಾಗಿ ತಿಳಿದವನು, ಸತ್ಯಪ್ರತಿಜ್ಞೆಯುಳ್ಳವನು. ಸ್ಥಿರವಾದ ನಿಯಮವುಳ್ಳವನು, ವಿನಯಶೀಲನು, ಧರ್ಮಿಷ್ಠನು, ದಾನಶೀಲನು, ಇಂಥವನು ದ್ರವ್ಯವನ್ನು ಇಡುವುದಕ್ಕೆ ಯೋಗ್ಯವಾದ ಪುರುಷರೂಪವಾದ ಆಶ್ರಯವು.

ನಗರೇ ಖರ್ವಟೇ ಖೇಟೇ ಗ್ರಾಮೇಚಾಪಿ ಕ್ರಮಾಗತೇ ।
ಯಾತ್ರಾವಶಾದ್ವಾ ನಿವಸೇತ್ ಧಾರ್ಮಿಕಾಢ್ಯಜನಾನ್ವಿತೇ ॥ ೮ ॥

ಗುರುಣಾನುಮತಸ್ತತ್ರ ಗ್ರಾಮಣ್ಯಾದಿ ಜನೇನ ವಾ ।
ಪ್ರತಿವೇಶ್ಯಾದ್ಯಬಾಧೇನ ಶುದ್ಧಂ ಕುರ್ಯಾನ್ನಿವೇಶನಂ ॥ ೯ ॥

ದ್ವಾರಚತ್ವರಶಾಲಾನಾಂ ಸರ್ವಕಾರುಕವೇಶ್ಮನಾಂ ।
ದ್ಯೂತಸೂನಾಸುರಾವೇಶನಟರಾಜಾನುಜೀವಿನಾಂ ॥ ೧೦ ॥

ಪಾಖಂಡದೇವವೀಥೀನಾಂ ರಾಜಮಾರ್ಗ ಕುಲಸ್ಯ ಚ ।
ದೂರಾತ್ ಸುಗುಪ್ತಂ ಕರ್ತವ್ಯಾ ಜೀವಿಕಾವಿಭವೋಚಿತಾ ॥ ೧೧ ॥

---

೮. ತನ್ನ ತಂದೆ, ತಾತ, ಮೊದಲಾದ ಪೂರ್ವಿಕರು ವಾಸಮಾಡಿದ್ದಾಗಿ, ಯಜ್ಞಯಾಗಾದಿ ಧರ್ಮಕಾರ್ಯಗಳು ನಡೆಯುವಂಥ ನಗರ, ಗ್ರಾಮ ಇತ್ಯಾದಿಗಳಲ್ಲಿ ವಾಸಿಸಬೇಕು. ಇಲ್ಲದಿದ್ದರೆ ತೀರ್ಥಯಾತ್ರಾ ನಿಮಿತ್ತದಿಂದಾದರೂ ಹೋಗಿ ಅಲ್ಲಿ ವಾಸಿಸಬೇಕು

೯. ಮೇಲೆ ಹೇಳಿದ ಗ್ರಾಮಾದಿಗಳಲ್ಲಿ ಶುದ್ಧವಾದ ನಿವೇಶನವನ್ನು ಆರಿಸಬೇಕು. ಶುದ್ಧವಾದುದು ಎಂದರೆ ಗುರುವಿನಿಂದಲೋ ಗ್ರಾಮದ ಮುಖಂಡರಿಂದಲೋ ಅನುಮತಿ ಕೇಳಿ ಪಡೆದುದಾಗಿ ನೆರೆಮನೆಗೆ ಬಾಧೆಯಿಲ್ಲದಂತೆ ಇರುವುದು ಎಂದು ಭಾವಿಸಬೇಕು.

೧೦. ಈ ನಿವೇಶನವು ಊರುಬಾಗಿಲು, ನಾಲ್ಕುಬೀದಿಗಳು ಸೇರುವ ಚೌಕ, ನಾನಾ ಶಿಲ್ಪವನ್ನು ಮಾಡುವವರ ಕೇರಿ, ಜೂಜಿನಕಟ್ಟೆ, ಕಟುಕರ ಅಂಗಡಿ, ಹೆಂಡದ ಅಂಗಡಿ, ವೇಷಧಾರಿಗಳ ನಿವಾಸ, ರಾಜಾಶ್ರಯದವರ ನಿವಾಸ, ನಾಸ್ತಿಕರ ವಾಸಸ್ಥಳ, ದೇವಾಲಯದ ಬೀದಿ, ರಾಜಬೀದಿ.

೧೧. ಇವುಗಳಿಗೆ ದೂರವಾಗಿಯೂ, ಗೋಪ್ಯವಾಗಿರಬಹುದಾಗಿಯೂ, ಇದ್ದು ತನ್ನ ಸ್ಥಿತಿಗೆ ಅನುಸಾರವಾಗಿ ಜೀವನೋಪಾಯವನ್ನು ಏರ್ಪಡಿಸಿಕೊಳ್ಳಲು ಸಹಾಯಕವಾಗಿಯೂ ಇರಬೇಕು.

**ಸಾಪಿಧಾನೈಕನಿಷ್ಕಾಶಂ ಶುದ್ಧಪೃಷ್ಠಂ ಸಮಂತತಃ ।**
**ಸದ್ವೃತ್ತಾಪ್ತಜನಾಕೀರ್ಣಮದುಷ್ಟಪ್ರಾತಿದೇಶಿಕಂ ॥ ೧೨ ॥**

**ಪ್ರಾಗುದಕ್ಪ್ರವಣೇ ದೇಶೇ ವಾಸ್ತುವಿದ್ಯಾವಿಧಾನತಃ ।**
**ಪ್ರವಿಭಕ್ತಕ್ರಿಯಾಕಾಂಕ್ಷಂ ಸರ್ವರ್ತುಕಮನೋಹರಂ ॥ ೧೩ ॥**

**ಅರ್ಚಾಸ್ನಾನೋದಕಾಗಾರಗೋಷ್ಠಾಗಾರಮಹಾನಸೈಃ ।**
**ಯುಕ್ತಂ ಗೋವಾಜಿಶಾಲಾಭಿಃ ಸದಾಸೀಭೃತ್ಯಕಾಶ್ರಯೈಃ ॥ ೧೪ ॥**

**ಬಹಿರಂತಃಪುರಸ್ತ್ರೀಕಂ ಸರ್ವೋಪಕರಣೈರ್ಯುತಂ ।**
**ವಿಭಕ್ತಶಯನೋದ್ದೇಶಮಾಪ್ತವೃದ್ಧೈರಧಿಷ್ಠಿತಂ ॥ ೧೫ ॥**

---

೧೨. ಮನೆಯು ಬಿಗಿಯಾದ ಚಾವಣಿಯೂ, ಹಿತ್ತಲೂ ಉಳ್ಳದ್ದಾಗಿಯೂ, ಸುತ್ತಮುತ್ತಲೂ ಹಿಂದುಗಡೆ ಬೀದಿಯಲ್ಲಿಯೂ, (ದುರಾಹಾರಿಗಳಲ್ಲದ) ಶುದ್ಧರಾದ ಜನರ ವಾಸವುಳ್ಳದ್ದಾಗಿಯೂ, ಒಳ್ಳೆಯ ನಡವಳಿಕೆಯುಳ್ಳ ಆಪ್ತರಾದ ಸಾಧುಜನರ ನೆರೆಹೊರೆಯುಳ್ಳದ್ದಾಗಿಯೂ ಇರಬೇಕು.

೧೩. ಮನೆಯ ನಿವೇಶನವು ಪೂರ್ವದಿಕ್ಕಿಗೂ, ಉತ್ತರದಿಕ್ಕಿಗೂ ಸ್ವಲ್ಪ ಇಳಿಜಾರಾಗಿರಬೇಕು. ಇಂಥ ಸ್ಥಳದಲ್ಲಿ ವಾಸ್ತುಶಾಸ್ತ್ರದಲ್ಲಿ ಹೇಳಿರುವಂತೆ ಗೃಹನಿರ್ಮಾಣವಾಗಬೇಕು. ಮನೆಯಲ್ಲಿ ನಡೆಯಬೇಕಾಗುವ ಕಾರ್ಯಗಳಿಗನುಸಾರವಾಗಿ ಆಯಾ ಕೆಲಸಗಳಿಗೆ ಅನುಕೂಲಿಸುವಂತೆ ಸ್ಥಳಗಳನ್ನು ವಿಭಾಗಿಸಿಕೊಂಡು ಎಲ್ಲಾ ಋತುಗಳಿಗೂ ಹೊಂದಿಕೊಳ್ಳುವಂತೆಯೂ, ಮನೋಹರವಾಗಿರುವಂತೆಯೂ ಇರಬೇಕು.

೧೪. ಮನೆಯ ಒಳಗಡೆ ದೇವರ ಪೂಜೆಯಮನೆ, ಸ್ನಾನದ (ನೀರಿನ) ಮನೆ ದನದಕೊಟ್ಟಿಗೆ, ಅಡಿಗೆಯಮನೆ, ಕುದುರೆಯಲಾಯ, ದಾಸಿಯ ವಿಶ್ರಾಂತಿ ಸ್ಥಳ, ಭೃತ್ಯರು ಇರುವುದಕ್ಕೆ ಜಾಗ, ಇವುಗಳಿಂದ ಕೂಡಿದ್ದಾಗಿ ಇರಬೇಕು.

೧೫. ಹೊರಗಡೆ ಹೆಂಗಸರು ಬಂದು ನಿಲ್ಲುವುದಕ್ಕೆ ಅನುಕೂಲವಾದ ಸ್ಥಳವುಳ್ಳದ್ದಾಗಿಯೂ ಮನೆಗೆ ಬೇಕಾದ ಎಲ್ಲ ಉಪಕರಣಗಳಿಂದ ಕೂಡಿಯೂ ಇರಬೇಕು. ಮಲಗುವುದಕ್ಕೆ ಪ್ರತ್ಯೇಕ ಸ್ಥಾನವನ್ನು ವಿಂಗಡಿಸಿರಬೇಕು. ಮಿತ್ರರು, ವಯೋವೃದ್ಧರು, ಇವರಿಗೂ ಅವಕಾಶಮಾಡಿರಬೇಕು.

ಅರಕ್ಷಣಾದ್ಧಿ ದಾರಾಣಾಂ ವರ್ಣಸಂಕರಜಾದಯಃ ।
ದೃಷ್ಟ್ವಾ ಹಿ ಬಹವೋ ದೋಷಾಃ ತಸ್ಮಾದ್ರಕ್ಷ್ಯಾಃ ಸದಾ ಸ್ತ್ರಿಯಃ ॥ ೧೬ ॥

ನ ಹ್ಯಾಸಾಂ ಪ್ರಮುದಂ ದದ್ಯಾನ್ನ ಸ್ವಾತಂತ್ರ್ಯಂ ನ ವಿಶ್ವಸೇತ್ ।
ವಿಶ್ವಸ್ತವಚ್ಚ ಚೇಷ್ಟೇತ ನ್ಯಾಯ್ಯಂ ಭರ್ತ್ಸನಮಾಚರೇತ್ ॥ ೧೭ ॥

ನಾಧಿಕಾರಂ ಕ್ವಚಿದದ್ಯಾತ್ ಋತೇ ಪಾಕಾದಿ ಕರ್ಮಣಃ ।
ಸ್ತ್ರೀಣಾಂ ಗ್ರಾಮೀಣವತ್ತಾ ಹಿ ಭೋಗಾಯಾಲಂ ಸುಶಾಸಿತಾ ॥ ೧೮ ॥

ನಿತ್ಯಂ ತತ್ಕರ್ಮಯೋಗೇನ ತಾಃ ಕರ್ತವ್ಯಾ ನಿರಂತರಾಃ ।
ಇತ್ಯೇವಂ ಸರ್ವದಾ ವ್ಯಾಪ್ತೇಃ ಸ್ಯಾದವಿದ್ಯಾ ನಿರಾಶ್ರಯಾ ॥ ೧೯ ॥

---

೧೬. ಹೆಂಗಸರನ್ನು ವಿಪತ್ತುಗಳಿಗೆ ಯಾವದಕ್ಕೂ ಸಿಕ್ಕದಂತೆ ರಕ್ಷಣೆಮಾಡದೆ ಹೋದರೆ ವರ್ಣಸಂಕರ ಮೊದಲಾದ ಅನೇಕ ದೋಷಗಳನ್ನು ಕಾಣಬೇಕಾಗುವುದು. ಆದ್ದರಿಂದ ಸ್ತ್ರೀಯರಿಗೆ ಸರಿಯಾದ ಸ್ಥಾನವನ್ನು ಕಲ್ಪಿಸಿ ದುಸ್ಸಹವಾಸವಿಲ್ಲದಂತೆ ಎಚ್ಚರಿಕೆಯಿಂದ ರಕ್ಷಿಸಬೇಕು.

೧೭. ಮಿತಿಮೀರಿ ಸಂತೋಷಪಡುವಂತೆ ಅವರನ್ನು ಉಬ್ಬಿಸಬಾರದು. ಅವರಿಗೆ ಪೂರ್ಣ ಸ್ವಾತಂತ್ರ್ಯವನ್ನು ಕೊಡಬಾರದು. ಮತ್ತು ಅವರನ್ನು ಸಂಪೂರ್ಣವಾಗಿ ನಂಬಲೂಬಾರದು. ವಿಶ್ವಾಸವಿಟ್ಟಂತೆ ನಟಿಸಬೇಕು. ಅವರ ನಡತೆಯನ್ನು ತಿದ್ದಬೇಕೆಂದು ಕಂಡಾಗ ಎಷ್ಟುಬೇಕೋ ಅಷ್ಟುಮಾತ್ರ ಗದರಿಸಬೇಕು.

೧೮. ಅವರಿಗೆ ಅಡಿಗೆಯ ಕೆಲಸದಲ್ಲಿ ಹೊರತು ಮತ್ಯಾವ ವಿಧವಾದ ಗ್ರಾಮಾಧಿಕಾರ ಮೊದಲಾದ ಸ್ವಾತಂತ್ರ್ಯ ಕೆಲಸಗಳನ್ನು ಕೊಡಬಾರದು. ಹಾಗಿದ್ದರೆ ಅವರು ಚೆನ್ನಾಗಿ ಶಿಕ್ಷಿತರಾಗಿ ಭೋಗಕ್ಕೆ ಅರ್ಹರಾಗುತ್ತಾರೆ.

೧೯. ಆದ್ದರಿಂದ ಅವರಿಗೆ ವಿಶೇಷ ವಿರಾಮ (ಅವಕಾಶ) ವಿಲ್ಲದಂತೆ ಯಾವಾಗಲೂ ಒಂದು ಕೆಲಸವನ್ನು ಹೊಂದಿಸಿ ಇಟ್ಟಿರಬೇಕು. ಈರೀತಿ ಸದಾ ಕಾರ್ಯವ್ಯಾಪ್ತಿ ಇರೋಣದರಿಂದ ಅವರಲ್ಲಿ ಅಜ್ಞಾನ (ಮೋಸ) ವೆಂಬುದಕ್ಕೆ ಅವಕಾಶವೇ ಇಲ್ಲ.

ದೌರ್ಗತ್ಯಮತಿರೂಪಂ ಚಾಪ್ಯಸತ್ಸಂಗಃ ಸ್ವತಂತ್ರತಾ ।
ಪಾನಾಶನಕಥಾಗೋಷ್ಠೀಪ್ರಿಯತ್ವಾ ಕರ್ಮಶೀಲತಾ　　　　॥ ೨೦ ॥

ಕುಹಕೇಕ್ಷಣಿಕಾಮುಂಡಾಭಿಕ್ಷುಕೀಸೂತಿಕಾದಿಭಿಃ ।
ಗೋಪ್ರಸಂಗೈಸ್ತಥಾಸದ್ಭಿರ್ಲಿಂಗಿಯಾಚಕ ಶಿಲ್ಪಿಭಿಃ　　　　॥ ೨೧ ॥

[ಪ್ರಸಂಗಾದ್ಯೈಃ ತಥಾಸತ್‌ಸ್ತ್ರೀ ಲಿಂಗಧಾರಕ ಶಿಲ್ಪಿಭಿಃ .]
ಸಂವಾಹೋದ್ಯಾನಯಾತ್ರಾಸೂದ್ಯಾನೇಷ್ವಾಮಂತ್ರಣಾದಿಷು ॥
ಪ್ರಸಂಗಸ್ತೀರ್ಥಯಾತ್ರಾರ್ಥಂ ಧರ್ಮೇಷು ಪ್ರಕಟೇಷು ಚ　　　　॥ ೨೨ ॥

ವಿಪ್ರಯೋಗಃ ಸದಾ ಭರ್ತ್ರಾ ತಜ್ಜ್ಞಾತಿಕುಲನಿಃಸ್ವತಾ ।
ಅನೂಧುರ್ಯಕದರ್ಯತ್ವೇ ಭೃಶಂ ಪುಂಸಾಂ ಚ ವಾಚ್ಯತಾ　　　　॥ ೨೩ ॥

ಅತಿಕ್ರೌರ್ಯಮತಿಕ್ಷಾಂತಿರತ್ಯಂತಾಭೀತಿಪಾತನಂ ।
ಸ್ತ್ರೀಭಿರ್ಜಿತತ್ವಮತ್ಯರ್ಥಂ ಸತ್ಯಂ ತಾಸ್ತಾಃ ಸ ದೋಷತಾಃ　　　　॥ ೨೪ ॥

---

೨೦. ದುರ್ಗತಿಪ್ರದರ್ಶನ, ದಾರಿದ್ರ್ಯ, ಅತಿಸೌಂದರ್ಯಾಸಕ್ತಿ, ದುಸ್ಸಹವಾಸ, ಸ್ವಾತಂತ್ರ್ಯ, ಪಾನಗೋಷ್ಠಿ ಭೋಜನಗೋಷ್ಠಿ ಕಥಾಗೋಷ್ಠಿ ಇವನ್ನು ಹೆಚ್ಚಾಗಿ ಪ್ರೀತಿಸುವಿಕೆ, ಮನೆಗೆಲಸಕ್ಕೆ ಬೇಜಾರುಪಡುವಿಕೆ, ಈ ಗುಣಗಳು ಸ್ತ್ರೀಗೆ ಯುಕ್ತವಲ್ಲ.

೨೧-೨೪.. ಕಪಟದೃಷ್ಟಿಯುಳ್ಳವಳು (ವಕ್ರದೃಷ್ಟಿಯವರು), ಕೂದಲು ಕತ್ತರಿಸಿಕೊಂಡವಳು, ಭಿಕ್ಷುಕಿಯರು, ಸೂಲಗಿತ್ತಿಯರು, ಗೋವುಗಳನ್ನು ದೂಷಿಸುವರು, ದುಷ್ಟೆಯರು, ವೇಷಧಾರಿಗಳು, ತಿರಿಕೆಯವರು, ಶಿಲ್ಪಕೆಲಸದವರು, ಇವರುಗಳೊಡನೆ ವ್ಯವಹರಿಸುವುದು; ಲಿಂಗಮರ್ದನದಲ್ಲಿ ಪ್ರವೃತ್ತಿ; ಸ್ವತಂತ್ರವಾಗಿ ವನವಿಹಾರಕ್ಕೆ ಹೋಗುವುದು, ಸ್ನೇಹಿತೆಯರೊಡನೆ ಭೋಜನಕೂಟಗಳಿಗೆ ಹೋಗುವುದು, ತೀರ್ಥಯಾತ್ರೆಗೆ ತಾನೇ ಸ್ವತಂತ್ರವಾಗಿ ಹೋಗುವುದು, ಪ್ರಕಟವಾಗಿ ಧರ್ಮದಲ್ಲಿ ಮುಂದಾಳಾಗುವುದು, ಯಾವಾಗಲೂ ಗಂಡನನ್ನು ಅಗಲಿ ಇರುವುದು. ನಿರ್ಗತಿಕರಾದ ಜ್ಞಾತಿಗಳನ್ನು ಆಡಿಕೊಳ್ಳುವುದು. ಸವಿಮಾತಾಡಲು ಬಾರದೇ ಇರುವುದು, ದೇವರು ಕೊಟ್ಟದ್ದನ್ನು ತಾನೂ ತಿನ್ನದೆ ಇತರರಿಗೂ ಕೊಡದೆ ಇರುವುದು. ಗಂಡಸರನ್ನು ವಿಶೇಷವಾಗಿ ನಿಂದಿಸುವುದು, ಬಹುಕಠಿಣತೆ, ಮಿತಿಮೀರಿದ ಸಹನೆ, ನಿರ್ಭೀತಿಯಿಂದ ನುಗ್ಗುವುದು. ಸಾಮಾನ್ಯಸ್ತ್ರೀಜನಗಳಿಗೂ ಸೋತುಕೊಳ್ಳುವ ಅಸಮರ್ಥತೆ ಇವುಗಳೆಲ್ಲಾ ಸ್ತ್ರೀಯಲ್ಲಿದ್ದರೆ ನಿಜವಾಗಿ ದೋಷಗಳೆನಿಸುವುವು.

ಸ್ತ್ರೀಣಾಂ ಪತ್ಯುರಧೀನತ್ವಾತ್ ಪುಮಾನೇವ ಹಿ ನಿಂದ್ಯತೇ ।
ಭರ್ತುರೇವ ಹಿ ತಜ್ಜಾಡ್ಯಂ ಯದ್ಭೃತ್ಯಾನಾಮಯೋಗ್ಯತಾ ॥ ೨೫ ॥

ತಸ್ಮಾದ್ಯಥೋದಿತಾಸ್ತ್ವೇತಾ ರಕ್ಷ್ಯಾಃ ಶಾಸನತಾಡನೈಃ ।
ತಾಡನೈಶ್ಚ ಯಥಾಕಾಲಂ ಯಥಾವತ್ಸಮುಪಾಚರೇತ್ ॥ ೨೬ ॥

ಪರಿಗೃಹ್ಯ ಬಹೂನ್ ದಾರಾನುಪಚಾರೈಃ ಸಮೋ ಭವೇತ್ ।
ಯಥಾಕ್ರಮೋಚಿತೈಃ ಕರ್ಮ ದಾನಸತ್ಕಾರವಾಸನೈಃ ॥ ೨೭ ॥

ಪ್ರಥಮೋಭಿಜನೋ ಧರ್ಮೋ ಯೋಗ್ಯತ್ವಂ ಚ ಸುಪುತ್ರತಾ ।
ಪಕ್ಷೇ ವಿತ್ತಂ ವಿಶೇತ್ ಸ್ತ್ರೀಣಾಂ ಮಾನಸ್ತತ್ಕಾರಣಂ ತಥಾ ॥ ೨೮ ॥

---

೨೫. ಈ ದೋಷಗಳು ಸ್ತ್ರೀಯರಲ್ಲಿ ಕಂಡಾಗ ಅವರಿಗೆ ಶಿಕ್ಷೆವಿಧಿಸತಕ್ಕ ಅಧಿಕಾರವುಳ್ಳ ಅವರ ಪತಿಗಳಿಗೇ ಈ ತಪ್ಪು ಹೊರುವುದು; ಎಂದರೆ ಆಗ ಶಿಕ್ಷಿಸದೆ ಬಿಟ್ಟದ್ದು ಅವರ ತಪ್ಪು. ಲೋಕದಲ್ಲಿ ಸೇವಕರು ಯೋಗ್ಯರಾಗದೇ ಇರುವುದಕ್ಕೆ ಯಜಮಾನನ ಆಲಸ್ಯ, ಅವಿವೇಕಗಳೇ ಕಾರಣವಲ್ಲವೆ ?

೨೬. ಆದ್ದರಿಂದ ಹಿಂದೆ ಹೇಳಿದ ದೋಷಗಳನ್ನು ಅವರಲ್ಲಿ ಕಂಡಾಗ ಅವರನ್ನು ಶಿಕ್ಷೆವಿಧಿಸುವುದು, ಹೊಡೆಯುವುದು ಮುಂತಾದ ವಿಧಾನಗಳಿಂದ ತಿದ್ದಬೇಕು. ತಾಡನಮಾಡುವವರು ಆಯಾ ಸನ್ನಿವೇಶಕ್ಕೆ ತಕ್ಕಂತೆ ಉಚಿತವಾದ ರೀತಿಯಲ್ಲಿ ಮಾಡಬೇಕು.

೨೭. ಬಹುಪತ್ನಿಯರನ್ನು ಮದುವೆಯಾದವನು ಕ್ರಮವನ್ನು ಅತಿಕ್ರಮಿಸದೆ ಇರಬೇಕು; ಅವರಿಗೆ ಅರ್ಹವಾಗಿರುವ ವಸ್ತ್ರಾದಿ ವಿಚಾರಗಳಿಂದ ಉಪಚರಿಸುವುದರಲ್ಲಿ ಹೆಚ್ಚು ಕಡಮೆ ಮಾಡಬಾರದು.

೨೮. ಸತ್ಕುಲಸಂಪತ್ತಿ ಒಳ್ಳೆಯ ಆಚಾರ, ಪೂಜೆಗೆ ಅರ್ಹತೆ, ಒಳ್ಳೆಯ ಮಕ್ಕಳು, ಇವು ಸ್ತ್ರೀಯರಿಗೆ ಗೌರವತರುವ ಸಂದರ್ಭಗಳಾಗಿವೆ ಒಂದೊಂದುವೇಳೆ ದ್ರವ್ಯಸಂಪತ್ತೂ ಗೌರಕ್ಕೆ ಕಾರಣವಾಗಬಹುದು.

**ತಸ್ಮಾನ್ನಾನೋ ನ ಕರ್ತವ್ಯೋ ಹೇಯಶ್ಚಾಪಿ ನ ತತ್ಕೃತಃ ।**
**ಗುರುತ್ವೇ ಲಾಘವೇ ವಾಪಿ ಸತಾಂ ಕಾರ್ಯಂ ನಿಬಂಧನಂ ॥ ೨೯ ॥**

**ಅಕಸ್ಮಿಕೇ ಪ್ರಯುಂಜಾನಃ ಪ್ರೇಕ್ಷಾವಾನ್ ಮಾನಲಾಘವೇ ।**
**ಸ ಯತ್ಕಂಚನಕಾರಿತ್ವಾಚ್ಚಾಯಮೇವೈತಿ ಲಾಘವಂ ॥ ೩೦ ॥**

**ಯಥಾವಮಾನಾಪಮಾನೌ ಹಿ ಪ್ರಯುಜ್ಯೇತಾನಿಮಿತ್ತತಃ ।**
**ತನ್ನಿಮಿತ್ತಾ ಜನತ್ಯಾಗೇ ಪ್ರಯತಂತೇ ತದಾಶ್ರಿತಾಃ ॥ ೩೧ ॥**

**ಏತದೇವ ಹಿ ಪತ್ನೀನಾಂ ಜ್ಞೇಯಂ ಮಾನನಕಾರಣಂ ।**
**ಯತ್ನಾಪತ್ಯ ನಿಮಿತ್ತೇಷು ಪ್ರಧಾನೇ ಕುಲಯೋಗ್ಯತೇ ॥ ೩೨ ॥**

**ತತ್ಸಂಯೋಗಾತ್ಸುಖಂ ಪುಂಸಾಂ ಮಹದ್ದುಃಖಂ ವಿಯೋಗತಃ ।**
**ತತ್ಪ್ರಾಪ್ತಿಃ ಪ್ರತಿಹಾತವ್ಯಾ ಸ್ವಾರ್ಥಾಯೈವ ಪ್ರಿಯಾಣ್ಯಪಿ ॥ ೩೩ ॥**

---

೨೯. ಆದ್ದರಿಂದ ಅತಿಗರ್ವ ಪಡಬಾರದು. ದ್ರವ್ಯಾದಿಗಳು ಸಮೃದ್ಧಿಯಿದ್ದಾಗ ಗರ್ವವನ್ನು ನಿಶ್ಶೇಷವಾಗಿ ಬಿಡಲೂ ಬಾರದು. ಸಜ್ಜನರು ಅವರಲ್ಲಿ ತೋರಿಸುವ ನಡೆವಳಿಕೆಗನುಸಾರವಾಗಿ ಅವನಿಗೆ ಗೌರವ ಲಾಘವಗಳುಂಟಾಗುತ್ತವೆ.

೩೦. ಆಲೋಚನಾಪರನಾದವನು ಅಕಸ್ಮಾತ್ತಾಗಿ ಯಾರಿಗಾದರೂ ಮಾನ ಅಥವಾ ಲಾಘವಗಳನ್ನು ತೋರಿಸಬೇಕಾದಾಗ ಮನಸ್ವಿಯಾಗಿ ಏನೋ ಒಂದನ್ನು ಮಾಡಿದರೆ ಹಾಗೆ ಮಾಡಿದವನಿಗೇ ಲಾಘವ ಬರುವುದು.

೩೧. ನಿಷ್ಕಾರಣವಾಗಿ ಯಾವ ಆಶ್ರಿತರಿಗಾದರೂ ಅವಮಾನ ಮಾಡಿದರೆ ಅವನ ಈ ಕೃತ್ಯವನ್ನೇ ಕಾರಣಮಾಡಿಕೊಂಡು ಅವನ ಆಶ್ರಿತರು ಅವನನ್ನು ಬಿಟ್ಟು ಹೋಗಲು ಯತ್ನಿಸುತ್ತಾರೆ.

೩೧. ಇದೇ ಎಂದರೆ ಪುರುಷನ ಗೌರವವೇ ಅವನ ಪತ್ನಿಯ ಗೌರವಕ್ಕೂ ಕಾರಣವೆಂದು ತಿಳಿಯಬೇಕು. ತಮಗೆ ಗೌರವ ಬರುವುದಕ್ಕೆ ತಮ್ಮ ಮಕ್ಕಳೂ, ವಂಶವೂ ಸಹ ಮುಖ್ಯಕಾರಣಗಳು.

೩೩. ಮಕ್ಕಳೊಡಗೂಡಿರುವುದು ಪುರುಷರಿಗೆ ಸುಖವಾಗಿಯೂ ಅವರನ್ನು ಬಿಟ್ಟಿರುವುದು ಹೆಚ್ಚು ಕಷ್ಟವಾಗಿಯೂ ತೋರುತ್ತದೆ. ಅವುಗಳನ್ನು ಪಡೆಯುವುದು

ಅತಃ ಸ್ವಾರ್ಥೈಕನಿಷ್ಠೋऽಯಂ ಲೋಕಃ ಸರ್ವೋऽವಸೀದತಿ ।
ತತ್ಪ್ರಸಿದ್ಧಿರ್ಭವೇದಸ್ತಮಾನಾದ್ಭ್ರಾಂತಿವಿಧಾಯಕಃ ॥ ೩೪ ॥

ತತೋ ದಾರಾದಿಕಾ ಭೃತ್ಯಾ ನಿಯಂತವ್ಯಾಸ್ತಥಾ ದ್ವಿಜಾಃ ।
ಯಥೇಹಾಮುತ್ರ ವಾ ಶ್ರೇಯಃ ಪ್ರಾಪ್ನುಯಾದುತ್ತರೋತ್ತರಮ್ ॥ ೩೫ ॥

ಸ್ತ್ರೀಣಾಂ ಧರ್ಮಾರ್ಥಕಾಮೇಷು ನಾತಿಸಂಧಾನಮಾಚರೇತ್ ।
ತಾಸಾಂ ತೇಷ್ವಭಿಸಂಧಾನಾತ್ ಭವೇದಾತ್ಮಾಭಿಸಂಹಿತಃ ॥ ೩೬ ॥

ಜಾಯಾ ತ್ವರ್ಧಂ ಶರೀರಸ್ಯ ನೃಣಾಂ ಧರ್ಮಾದಿಸಾಧನೇ ।
ನಾತಸ್ತಾಸು ವ್ಯಥಾಂ ಕಾಂಚಿತ್ ಪ್ರತಿಕೂಲಂ ಸಮಾಚರೇತ್ ॥ ೩೭ ॥

---

ತಮಗೆ ಇಷ್ಟವಾದಾಗ್ಯೂ ಪರಿಣಾಮದಲ್ಲಿ ಕ್ಷೇಮವುಂಟಾಗಬೇಕೆಂಬ ದೃಷ್ಟಿಯಿಂದ ಆ ಚಪಲವನ್ನು ಬಿಡಬೇಕು.

೩೪. ಹಾಗೆ ಬಿಡದೇ ಸ್ವಪ್ರಯೋಜನಾಸಕ್ತವಾಗಿ ಇದ್ದರೆ ಈ ಲೋಕವೆಲ್ಲವೂ ಕೆಡುತ್ತದೆ. ಅದರ ಪ್ರಸಿದ್ಧಿಯೂ ಕಣ್ಮರೆಯಾಗುವುದರಿಂದ ಕೇವಲ ಭ್ರಾಂತಿ ಹುಟ್ಟಿಸುವುದು ಮಾತ್ರ ಆದೀತು.

೩೫. ಓ ಬ್ರಾಹ್ಮಣರೇ! ಆದ್ದರಿಂದ ಇಹದಲ್ಲೂ ಪರದಲ್ಲೂ ಮುಂದುಮುಂದಕ್ಕೆ ಶ್ರೇಯಸ್ಸುಂಟಾಗುವುದಕ್ಕಾಗಿ ಹೆಂಡಿರು, ದಾಸಿಯರು, ಭೃತ್ಯರು ಇವರನ್ನು ಹದ್ದಿನಲ್ಲಿಟ್ಟಿರಬೇಕು.

೩೬. ಧರ್ಮ, ಅರ್ಥ, ಕಾಮ ಇವುಗಳ ವಿಷಯದಲ್ಲಿ ತಮ್ಮ ಸ್ತ್ರೀಯರಿಗೆ ಮೋಸಮಾಡಬಾರದು. ಹಾಗೆ ಅವರಿಗೆ ಮೋಸಮಾಡೋಣದರಿಂದ ತಾನೇ ಮೋಸಹೋಗುತ್ತಾನೆ. ಎಂದರೆ ಆ ಮೋಸದ ದೋಷವು ತನಗೇ ಅನ್ವಯಿಸುವುದು.

೩೭. ಧರ್ಮ, ಅರ್ಥ ಇವುಗಳನ್ನು ಆರ್ಜಿಸುವುದರಲ್ಲಿ ಸ್ತ್ರೀಯು ಪುರುಷನ ಅರ್ಧಾಂಗಿ, ಆದ್ದರಿಂದ ಆ ಸ್ತ್ರೀಯರ ಮನಸ್ಸಿಗೆ ಯಾವ ವ್ಯಥೆಯನ್ನಾಗಲಿ, ವಿರುದ್ಧಾಚರಣೆಯನ್ನಾಗಲಿ ಮಾಡಬಾರದು.

ಯಜ್ಞೋತ್ಸವಾದೌ ನಾ ಕಸ್ಮಾತ್ಕಿಂಚಿದಾಸಾಂ ವಿಶೇಷಯೇತ್ ।
ವಸ್ತ್ರತಾಂಬೂಲದಾನಾದೌ ಪ್ರತಿಪತ್ತೌ ಸಮೋ ಭವೇತ್ ॥ ೩೮ ॥

ಪ್ರಿಯಾಪ್ರಿಯತ್ವಂ ಭೇದೋ ಹಿ ಕಾಮತಸ್ತು ರಹೋಗತಃ ।
ಉಪಚಾರೈಃ ಪುನರ್ವಾಕ್ಯೈಸ್ತುಲ್ಯವೃತ್ತಿಃ ಪ್ರಶಸ್ಯತೇ ॥ ೩೯ ॥

ಆರ್ತವೇ ತು ಪುನಃಸ್ಸರ್ವಾ ಉಪಗಮ್ಯಾಃ ಪ್ರಿಯಾ ಇವ ।
ಪೂರ್ವಾಭಿಜಾತಧರ್ಮಾರ್ಥಾಪುತ್ರಿಣೀಚೋತ್ತರೋತ್ತರಮ್ ॥ ೪೦ ॥

ಉದಗ್ರಚ್ಛೇದನೇನೈವ ವಿಧಿನಾ ನಿತ್ಯಮಾರ್ತವೇ ।
ತುಲ್ಯ ವೃತ್ತಿರ್ಯಥಾ ಕಾಲಂ ಸ್ವಂ ಸ್ವಂ ನಾಸಮುಖಂಡಯನ್ ॥ ೪೧ ॥

---

೩೮. ಯಜ್ಞ, ಮಕ್ಕಳ ವಿವಾಹಾದಿ ಉತ್ಸವಗಳು, ಇವುಗಳಲ್ಲಿ ಹಠಾತ್ತಾಗಿ ಅವರಿಗೆ ಪ್ರತಿಕೂಲ ಯಾವುದನ್ನೂ ಮಾಡಬಾರದು. ವಸ್ತ್ರ, ತಾಂಬೂಲ, ಇವನ್ನು ಕೊಡುವುದೇ ಮುಂತಾದ ಉಪಚಾರದಲ್ಲಿಯೂ, ಗೌರವದಲ್ಲಿಯೂ, ಗಂಡಸರಿಗೂ, ಹೆಂಗಸರಿಗೂ ವ್ಯತ್ಯಾಸವಿಡದೆ ಸಮವಾಗಿ ಕಾಣಬೇಕು.

೩೯. ಏಕಾಂತದಲ್ಲಿ ಆಚರಿಸುವ ಕಾಮಕೇಳೀ ವ್ಯಾಪಾರದಲ್ಲಿ ಒಬ್ಬಳನ್ನು ಸಂಪೂರ್ಣ ಪ್ರೀತಿಸುವುದು, ಇನ್ನೊಬ್ಬಳನ್ನು ಅಷ್ಟು ಪ್ರೀತಿಸದೆ ಇರುವುದು, ಮುಂತಾದ ವ್ಯತ್ಯಾಸಗಳನ್ನು ತೋರಬಹುದಾದರೂ ಹೊರಗೆ ಆಡುವ ಮಾತುಗಳಲ್ಲಿಯೂ ಮಾಡುವ ಉಪಚಾರಗಳಲ್ಲಿಯೂ, ಎಲ್ಲ ಹೆಂಡಿರಲ್ಲೂ ಸಮವಾಗಿ ನಡೆದುಕೊಳ್ಳುವುದು ಉತ್ತಮ.

೪೦. ಸ್ತ್ರೀಯರು ಹೊರಗಾದಾಗ ಎಲ್ಲ ಹೇಂಡಿರನ್ನೂ ಸಮಪ್ರೀತಿಯಿಂದ ಕಾಣಬೇಕು. ಪೂರ್ವೋಕ್ತರೀತಿಯಲ್ಲಿ ಹೆಂಡಿರೆಲ್ಲರಿಗೂ ಸಮಾನೋಪಚಾರ ಮಾಡಬೇಕಾಗಿದ್ದಾಗ್ಯೂ ಪುತ್ರವತಿಯರಿಗೆ ಹೆಚ್ಚು ಉಪಚಾರ ನಡೆಯಿಸಬಹುದು.

೪೧. ಋತುಸ್ನಾನಾನಂತರ ಆ ಕಾರಣದಿಂದ ಶಯನಸ್ಥಾನವನ್ನು ಬದಲಾಯಿಸದೆ ಕಾಲಾನುಸಾರ ಅವಿರುದ್ಧವಾದ ನಡತೆಯುಳ್ಳವಳಾಗಿ ಈ ವಿಧಾನದಿಂದಲೇ ಸುಖಪಡಬೇಕು.

ನಿತ್ಯಪರ್ಯಾಯ ವಾಸಾನಾಂ ಅಪಾದಾನಮುಪೊಸ್ಥಿದುಃ ।
ಋತುದುಃಖಂ ಪ್ರಮೋದಶ್ಚ ತಥಾಪೂರ್ವಂ ಸಮಾಗತಃ ॥ ೪೨ ॥

ಅನ್ಯಯಾ ಸಹ ಯದ್ದುಃಖಂ ಸದಸದ್ವಾ ರಹೋಗತಂ ।
ಉತ್ಕಂಠಿತಂ ವಾ ಯತ್ಕಿಂಚಿತ್ ಸಪತ್ನೀಷು ನ ತದ್ವಸೇತ್ ॥ ೪೩ ॥

ಯತ್ಕಿಂಚಿದನ್ಯಸಂಬದ್ಧಮನ್ಯಥಾ ಕಥಿತಂ ಮಿಥಃ ।
ತಸ್ಯ ಕುರ್ಯಾದನಿರ್ವೇದಮಾತ್ಮನ್ಯೈವ ವಿಚಿಂತಯೇತ್ ॥ ೪೪ ॥

ಅನ್ಯೋನ್ಯಮತ್ಸರಾಖ್ಯಾನೈಃ ನ ತಾ ವಾಚಾಪಿ ಭರ್ತ್ಸಯೇತ್ ।
ಗುಣದೋಷೌ ಚ ವಿಜ್ಞಾಯ ಸ್ವಯಂ ಕುರ್ಯಾನ್ನನಿಷ್ಫಲೌ ॥ ೪೫ ॥

---

೪೨. ಇಬ್ಬರು ಪತ್ನಿಯರಿರುವಲ್ಲಿ ಒಬ್ಬಳಿಗೆ ಮೊದಲು ಋತು ದುಃಖಪ್ರಾಪ್ತಿಯು ಸಂಭವಿಸುತ್ತದೆ. ಆಗ ಮತ್ತೊಬ್ಬಳಿಗೆ ಪ್ರಮೋದಪ್ರಾಪ್ತಿಯೂ ಮೊದಲು ಸಂಭವಿಸುತ್ತದೆ. ಇಂತಹ ಸಂದರ್ಭದಲ್ಲಿ ನಿತ್ಯವಾಸ, ಪರ್ಯಾಯವಾಸಗಳ ಒದಗುವಿಕೆಯು ಅವರಿಗೆ ಪ್ರಾಣಗಳನ್ನು ಕಳೆದುಕೊಂಡಂತೆ ಆಗುವುದು.

೪೩. ಒಬ್ಬ ಹೆಂಡತಿಗೆ ಋತುಕಾಲದಲ್ಲಿ ಏನು ಉಪಚಾರಮಾಡಿದನೋ, ಅದೇರೀತಿ ಎಲ್ಲರಿಗೂ ಮಾಡದೆ, ಉಪಚಾರದಲ್ಲಿ ವ್ಯತ್ಯಾಸ ಕಂಡರೆ, ಅವರಿಗೆ ಪ್ರಾಣ ಹೋಗುವಷ್ಟು ಸಂಕಟವಾಗುತ್ತದೆ.

೪೪. ಇನ್ನೊಬ್ಬಳೊಡನೆ ಏಕಾಂತದಲ್ಲಿ ಅನುಭವಿಸುವ ದುಃಖವನ್ನೋ, ಸುಖವನ್ನೋ, ಇವಳೊಡನೆಯೂ ಅನುಭವಿಸಬೇಕು. ಅದರ ವ್ಯತ್ಯಾಸದ ಉತ್ಕಂಠೆಯನ್ನು ಸ್ವಲ್ಪವೂ ತೋರ್ಪಡಿಸಬಾರದು. ಅನೇಕ ಪತ್ನಿಯರಿದ್ದರೆ ಒಬ್ಬಳ ವಿಚಾರವನ್ನು ಮತ್ತೊಬ್ಬಳೊಡನೆ ಪ್ರಸ್ತಾಪಿಸುವಾಗ ಉದ್ವೇಗವಾಗದರೀತಿ ಯುಕ್ತಿಯಾಗಿ ಮಾತಾಡುವ ಕ್ರಮವನ್ನು ತಾನೇ ಆಲೋಚಿಸಬೇಕು.

೪೫. ಆ ಸವತಿಯರು ಒಬ್ಬರ ಮೇಲೊಬ್ಬರು ಮಾತ್ಸರ್ಯ ತೋರಿಸಿ ಕ್ಷುದ್ರ ಹೇಳಿದರೂ ಆ ಮಾತನ್ನು ಕೇಳಿಕೊಂಡು ಅವರನ್ನು ಬಾಯಿಮಾತಿನಲ್ಲೂ ಗದರಿಸಬಾರದು. ಅವರ ಗುಣದೋಷಗಳನ್ನು ತಾನೇ ಪರಿಶೀಲಿಸಿ ತಿಳಿದುಕೊಂಡು, ಔಚಿತ್ಯಾನುಸಾರ ಎಂದರೆ ಶಿಕ್ಷಾರ್ಹವಾಗಿದ್ದರೆ ಶಿಕ್ಷಿಸಿ ಪ್ರತಿಕ್ರಿಯೆಮಾಡಬೇಕು

ವಸ್ತ್ರಾಲಂಕಾರ ಭೋಜ್ಯಾದೌ ತದಪತ್ಯೇಷ್ವನುಕ್ರಮಾತ್ ।
ಮಾತೃದೋಷಾನನಾದೃತ್ಯ ತುಲ್ಯದೃಷ್ಟಿಃ ಪಿತಾ ಭವೇತ್ ॥ ೪೬ ॥

ಅನ್ಯಸ್ಯಾನ್ಯಗತೈರ್ದೋಷೈರ್ದೂಷಣಂ ನ ಹಿ ನೀತಿಮತ್ ।
ಯತ್ತು ತೇಷಾಮಪತ್ಯಂ ತು ತತ್ತುಲ್ಯಮುಭಯೋರಪಿ ॥ ೪೭ ॥

ಪ್ರೀತಿಂ ದ್ವೇಷಮಭಿಪ್ರಾಯಂ ಶೌಚಾಶೌಚಗತಾಗತಾನ್ ।
ಬಹಿರಂತಶ್ಚ ಜಾನೀಯಾತ್ ದಾಸ ಗೂಢಚರೈಃ ಸದಾ ॥ ೪೮ ॥

ಆತ್ಮಾನಮಪಿ ವಿಜ್ಞಾಯ ಚಿತ್ತವೃತ್ತೇರನೀಶ್ವರಮ್ ।
ವಿಶ್ವಸೇತ ಕಥಂ ಸ್ತ್ರೀಷು ಸರ್ವಾವಿನಯಧಾಮಸು ॥ ೪೯ ॥

ವೃದ್ಧದಾಸ್ಯಃ ಕ್ರಮಾಯಾತಾ ಧಾತ್ರ್ಯಶ್ಚ ಪರಿಚಾರಿಕಾಃ ।
ತನ್ಮಾತೃಪಿತೃಕಾದ್ಯಾಶ್ಚ ಷಂಡವೃದ್ಧಾಶ್ಚರಾ ಮತಾಃ ॥ ೫೦ ॥

---

೪೬. ಸಪತ್ನಿಯರಲ್ಲಿರುವ ದೋಷದ ತಾರತಮ್ಯಕ್ಕೋಸ್ಕರ ಅವರ ಮಕ್ಕಳ ಉಪಚಾರದಲ್ಲಿ ವ್ಯತ್ಯಾಸಮಾಡಬಾರದು. ತಂದೆಗೆ ಎಲ್ಲ ಮಕ್ಕಳೂ ಒಂದೇ ಸಮ.

೪೭. ಒಬ್ಬರಲ್ಲಿ (ಎಂದರೆ ತಾಯಿಯಲ್ಲಿ) ಕಂಡುಬಂದ ತಪ್ಪಿಗಾಗಿ ಮತ್ತೊಬ್ಬರನ್ನು (ಎಂದರೆ ಮಕ್ಕಳನ್ನು) ಶಿಕ್ಷಿಸುವುದು ತರವಲ್ಲ. ಆ ಮಕ್ಕಳು ಗಂಡಹೆಂಡತಿ ಇಬ್ಬರಿಗೂ ಸಮಾನ ಪ್ರೀತಿಪಾತ್ರರಲ್ಲವೇ?

೪೮. ಸ್ತ್ರೀಯರ ನಡತೆಯ ಪರಿಶುದ್ದಿ, ಅಪರಿಶುದ್ಧಿ ಇವುಗಳನ್ನು ಸೇವಕರಿಂದಲೂ, ಗೂಢಚಾರರಿಂದಲೂ, ಅಂತರಂಗ, ಬಹಿರಂಗವಾಗಿ ತಿಳಿದು ಅದಕ್ಕನುಸಾರವಾಗಿ ಯಾವಾಗಲೂ ಅವಳಲ್ಲಿ ಪ್ರೀತಿಯನ್ನೋ ದ್ವೇಷವನ್ನೋ ತೋರಿಸಬೇಕು,

೪೯. ತನ್ನ ಮನವನ್ನೇ ತಾನು ಅಧೀನದಲ್ಲಿಡಲಾರದವನು ಸಮಸ್ತ ಅವಿಧೇಯತೆಗಳಿಗೆ ಆಶ್ರಯರಾದ ಸ್ತ್ರೀಯರನ್ನು ನಂಬುವುದು ಹೇಗೆ?

೫೦. ಈ ವಿಚಾರ ತಿಳಿಯಲು ವಂಶಕ್ರಮವಾಗಿ ಬಂದ ಮುದಿದಾಸಿಯರು, ಪರಿಚಾರಿಕೆಯರಾದ ಇತರ ದಾಸಿಯರು, ಅವರ ತಂದೆ ತಾಯಿಗಳು ಅಂತಃಪುರದಲ್ಲಿರುವ ಷಂಡರು ಮುಂತಾದವರನ್ನು ಗೂಢಚಾರರನ್ನಾಗಿ ಇಟ್ಟುಕೊಂಡು ತಿಳಿಯಬೇಕು.

**ವಿವಿಧೈಸ್ತತ್ಕಥಾಖ್ಯಾನೈಸ್ತುಲ್ಯಶೀಲದಯಾನ್ವಿತೈಃ ।**
**ಪ್ರವಿಶ್ಯಾಂತರಭಿಪ್ರಾಯಂ ವಿದ್ಯಾತ್ಕಾಲೇ ಪ್ರಯೋಜಿತೈಃ ॥ ೫೧ ॥**

**ತೇಷು ತೇಷು ಕಥಾರ್ಥೇಷು ಕಥ್ಯಮಾನೇಷು ಲಕ್ಷಯೇತ್ ।**
**ಮುಖಾಕಾರಾದಿಭಿರ್ಲಿಂಗೈರಭಿಪ್ರಾಯಂ ಮನೋಗತಂ ॥ ೫೨ ॥**

**ಸೀತಾರುಂಧತಿಸಂಬಂಧೈಸ್ತಥಾ ಶಾಕುಂತಲಾದಿಭಿಃ ।**
**ಸದಸಚ್ಚರಿತಾಖ್ಯಾನೈರ್ಭಾವಂ ವಿದ್ಯಾತ್ ಪ್ರವೃತ್ತಿತಃ ॥ ೫೩ ॥**

**ತದ್ದುಷ್ಟಾನಾಮದುಷ್ಟೇಷು ಸಾಧೂನಾಮಿತರೇಷು ಚ ।**
**ಪ್ರೀತಿಃ ಕಥಾಪ್ರಬಂಧೇಷು ಸ್ಯಾತ್ಸಖ್ಯಂ ಪುರುಷೇಕ್ಷಿತಃ ॥ ೫೪ ॥**

---

೫೧. ಬೇರೊಬ್ಬರ ವಿಚಾರದಲ್ಲಿ ಇವರ ಅಭಿಪ್ರಾಯ ಹೇಗಿದೆ ಎಂದು ತಿಳಿಯ ಬೇಕಾದರೆ ಗೂಢಚಾರರು ಅವರ ಜಯಾಪಜಯ ವಿಚಾರವನ್ನು ಪ್ರಸ್ತಾಪಿಸುವಾಗ ಅವರ ಮನಸ್ಸಿನ ಸ್ಥಿತಿ ಹೇಗಾಗುವುದೆಂಬುದನ್ನು ಗಮನವಿಟ್ಟು ನೋಡುವುದರಿಂದ ಅವರ ಅಂತರ್ಯವನ್ನು ತಿಳಿಯಬಹುದು.

೫೨. ಆರೀತಿ ಸಮಯೋಚಿತವಾಗಿ ಮಾತಾಡುತ್ತಿರುವುದನ್ನು ಕೇಳುತ್ತಿರುವವರ ಮುಖದ ಆಕಾರ ಮುಂತಾದ ಚಿಹ್ನೆಗಳಿಂದಲೂ ಅವರ ಮನಸ್ಸಿನ ಅಭಿಪ್ರಾಯವನ್ನು ಕಾಣಬಹುದು.

೫೩. ಸೀತೆ, ಅರುಂಧತಿ ಮುಂತಾದವರ ಕಥೆ, ಶಕುಂತಲೆ ಮುಂತಾದವರ ಕಥೆ, ಇವುಗಳ ನಿರೂಪಣದಲ್ಲಿ ಅವರ ಸಚ್ಚರಿತ್ರ, ದುಶ್ಚರಿತ್ರಗಳನ್ನು ಹೇಳಿದಾಗ ಕೇಳುತ್ತಿರುವವರಲ್ಲಿ ಕಾಣಬರುವ ಪ್ರವೃತ್ತಿಗಳಿಂದ ಅವರ ಮನೋಭಾವವನ್ನು ತಿಳಿಯಬಹುದು.

೫೪. ಇಲ್ಲಿಂದ ಮುಂದೆ ಪುರುಷರ ವಿಚಾರವನ್ನು ಹೇಳುತ್ತೇನೆ. ದುಷ್ಟರಿಗೆ ದುಷ್ಟರಲ್ಲದವರ ಸಂಗಡಲೂ ಸಜ್ಜನರಿಗೆ ಇತರರ ಸಂಗಡಲೂ ಹೇಗೋ ಸ್ನೇಹ ಮಾಡಬೇಕಾದ ಸಂಭವವು ಬರುವುದು.

ಏವಮಾಗಮದೃಷ್ಟಾಭ್ಯಾಂ ಅನುಮಿತ್ಯಾ ಚ ತತ್ವತಃ ।
ಸ್ತ್ರೀಣಾಂ ವಿದಿತ್ವಾಭಿಪ್ರಾಯಂ ವರ್ತೇತಾಶು ಯಥೋಚಿತಂ ॥ ೫೫ ॥

ಸ್ತ್ರೀಭ್ಯೋ ವಿಪ್ರತಿಪನ್ನಾಭ್ಯಃ ಪ್ರಾಣೈರಪಿ ವಿಯೋಜನಂ ।
ದೃಷ್ಟಂ ಹಿ ಚ ಯಥಾರಾಜ್ಞಾಮತೋ ರಕ್ಷೇತ್ಪ್ರಯತ್ನತಃ ॥ ೫೬ ॥

ವೇಣ್ಯಾಂ ಗೂಢೇನ ಶಸ್ತ್ರೇಣ ಹತೋ ರಾಜಾ ಶುಭಧ್ವಜಃ ।
ಮೇಖಲಾಮಣಿನಾ ದೇವ್ಯಾ ಸೌವೀರಶ್ಚ ನರಾಧಿಪಃ ॥ ೫೭ ॥

ಭ್ರಾತ್ರಾ ದೇವೀಪ್ರಯುಕ್ತೇನ ಭದ್ರಸೇನೋ ನಿಪಾತಿತಃ ।
ತಥಾ ಪುತ್ರೇಣ ಕಾರೂಷೋ ಘಾತಿತೋ ದರ್ಪಣಾಸಿನಾ ॥ ೫೮ ॥

ದ್ವೌ ಕಾಶಿರಾಜೌ ನೃವಂದ್ಯೌ ಚಾನಂದಾಪುರಯೋಷಿತಾ ।
ವಿಷಂ ಪ್ರಯುಜ್ಯ ಪಂಚತ್ವಮಾನೀತೌ ಪೂಜಿತಾತ್ಮಕೌ ॥ ೫೯ ॥

---

೫೫. ಶಾಸ್ತ್ರಗಳಲ್ಲಿ ಉಕ್ತವಾದ ಪ್ರಕಾರದಿಂದಲೂ, ಸ್ವಂತವಾಗಿ ಊಹಿಸುವಿಕೆಯಿಂದಲೂ ಸ್ತ್ರೀಯ ಮನೋಗತಾಭಿಪ್ರಾಯವನ್ನು ತಿಳಿದು ಜಾಗ್ರತೆ ಅದಕ್ಕೆ ತಕ್ಕ ರೀತಿಯಲ್ಲಿ ನಡೆದುಕೊಳ್ಳಬೇಕು.

೫೬. ವಿರುದ್ಧ ಆಚರಣೆಯುಳ್ಳ ಸ್ತ್ರೀಯರ ಈ ತಪ್ಪುನಡವಳಿಕೆಯಿಂದ ಸಾಮಾನ್ಯಪುರುಷರು ರಾಜರೂ ಪ್ರಾಣಬಿಟ್ಟ ಪ್ರಸಂಗವು ಎಷ್ಟೋ ಕಂಡು ಬಂದಿದೆ. ಆದ್ದರಿಂದ ಪ್ರಯತ್ನ ಪೂರ್ವಕವಾಗಿ ಅವರನ್ನು ತಿದ್ದಿ ರಕ್ಷಿಸಿಕೊಳ್ಳಬೇಕು.

೫೭. ಶುಭಧ್ವಜನೆಂಬ ರಾಜನನ್ನು ಅವನ ಹೆಂಡತಿಯು ಜಡೆಯೊಳಗೆ ಬಚ್ಚಿಟ್ಟುಕೊಂಡಿದ್ದ ಆಯುಧದಿಂದ ಹೊಡೆದು ಕೊಂದಳು. ಸೌವೀರನೆಂಬ ರಾಜನ ಪತ್ನಿಯು ತನ್ನ ಡಾಬಿನಲ್ಲಿದ್ದ ವಜ್ರವನ್ನುಪಯೋಗಿಸಿ ಅವನನ್ನು ಸಂಹರಿಸಿದಳು

೫೮. ಭದ್ರಸೇನನೆಂಬ ರಾಜನನ್ನು ಅವನ ಹೆಂಡತಿಯ ಪ್ರೇರಣೆಯಿಂದ ಆಕೆಯ ತಮ್ಮನೇ ಕೊಂದನು. ಇದೇ ರೀತಿ ಕಾರೂಷನೆಂಬ ರಾಜನನ್ನು ಅವನ ಮಗನು ಕನ್ನಡಿಯ (ಹಿಂದೆ ಇಟ್ಟಿದ್ದ) ಆಯುಧದಿಂದ ಕೊಂದನು.

೫೯. ಸ್ತೋತ್ರಾರ್ಹರೂ, ಪೂಜ್ಯರೂ ಆದ ಕಾಶೀರಾಜರಿಬ್ಬರು ಆನಂದಾಪುರದ ಸ್ತ್ರೀಯೊಬ್ಬಳಿಂದ ವಿಷಪ್ರಯೋಗ ಮಾಡಲ್ಪಟವರಾಗಿ ಮೃತಿಹೊಂದಿದರು.

ಏವಮಾದಿ ಮಹಾಭಾಗಾ ರಾಜಾನೋ ಬ್ರಾಹ್ಮಣಾಶ್ಚ ಹ ।
ಸ್ತ್ರೀಭಿರ್ಯತ್ರ ನಿಪಾತ್ಯಂತೇ ತತ್ರಾನ್ಯೇಷ್ವಿಹ ಕಾ ಕಥಾ ॥ ೬೦ ॥

ತಸ್ಮಾನ್ನಿತ್ಯಾಪ್ರಮತ್ತೇನ ಜಾಯಾ ರಕ್ಷ್ಯಾಶ್ಚ ನಿತ್ಯಶಃ ।
ಯಥಾವದುಪಚರ್ಯಾಶ್ಚ ಗುಣದೋಷಾನುರೂಪತಃ ॥ ೬೧ ॥

ವೈಷಮ್ಯಾದುಪಚಾರಾಣಾಂ ವಿಕಾರೈಶ್ಚಾನಿಮಿತ್ತಜೈಃ ।
ವಿಶೇಷೇಣ ಸಪತ್ನೀಕೈರಕಸ್ಮಾಚ್ಚಾಪಿ ವೇದನೈಃ ॥ ೬೨ ॥

ಅಸಂಭೋಗೇ ಚ ವಾಗ್ದಂಡಪಾರುಷ್ಯಾದಪ್ರಸಂತಃ ।
ಪ್ರದ್ವೇಷೋ ಭರ್ತರಿ ಸ್ತ್ರೀಣಾಂ ಪ್ರಕೋಪಶ್ಚಾಪಿ ಜಾಯತೇ ॥ ೬೩ ॥

---

೬೦. ಇದೇ ರೀತಿ ಪೂಜ್ಯರಾದ ರಾಜರುಗಳೂ, ಹಲವರು ಬ್ರಾಹ್ಮಣರೂ, ಸ್ತ್ರೀಯರಿಂದಲೇ ಹತರಾದರು ಎಂದಮೇಲೆ ಮಿಕ್ಕವರ ವಿಚಾರವನ್ನು ಹೇಳುವುದೇನು.

೬೧. ಆದಕಾರಣ ಪ್ರತಿದಿನವೂ ಜಾಗರೂಕತೆಯಿಂದ ಇರುತ್ತಾ ಹೆಂಡಿರನ್ನು ಸರ್ವದಾ ರಕ್ಷಿಸಬೇಕು. ಅವರಲ್ಲಿ ಕಂಡುಬರುವ ಗುಣಾವಗುಣಗಳಿಗನುಸಾರವಾಗಿ ಯೋಗ್ಯವಾದ ಶಿಕ್ಷೆ ರಕ್ಷೆಗಳನ್ನು ಮಾಡಬೇಕು.

೬೨. ಬಹುಜನ ಪತ್ನಿಯರನ್ನುಳ್ಳ ಪುರುಷನು ಪತ್ನಿಯರಲ್ಲಿ ಒಬ್ಬರಿಗೊಂದು ಬಗೆ, ಮತ್ತೊಬ್ಬರಿಗೊಂದು ಬಗೆ, ಈರೀತಿ ಉಪಚಾರದಲ್ಲಿ ವ್ಯತ್ಯಾಸ ಮಾಡೋಣದರಿಂದಲೂ, ಕಾರಣವಿಲ್ಲದೆ ಮನೋವಿಕಾರಗೊಳ್ಳುವುದರಿಂದಲೂ ನಿರ್ನಿಮಿತ್ತವಾಗಿ ಸಂಕಟಪಡಿಸುವುದರಿಂದಲೂ,

೬೩. ಅವರೊಡನೆ ಸಂಗಮಾಡದೇ ಬಿಡೋಣದರಿಂದಲೂ, ಕ್ರೂರವಾದ ವಾಕ್ಯಗಳನ್ನು ಆಡಿ ಶಿಡುಗುಟ್ಟುವುದರಿಂದಲೂ, ಅಂಥ ಕಠಿಣನಾಗಬೇಕಾದ ಸಂದರ್ಭವಿಲ್ಲದಿದ್ದರೂ ಅತಿ ಕಾಠಿಣ್ಯ ವಹಿಸುವುದರಿಂದಲೂ, ಹೆಂಡತಿಯರಿಗೆ ಗಂಡನಮೇಲೆ ಕೋಪವೂ, ದ್ವೇಷವೂ ಉಂಟಾಗುತ್ತದೆ.

ತತಶ್ಚಾಯಾತಿ ವಾರ್ಧಕ್ಯಮುದ್ವೋಢುಶ್ಚಾಪಿ ಶತ್ರುತಾಂ ।
ತಸ್ಮಾನ್ನತಾನ್ಪ್ರಯುಂಜೀತ ದೋಷಾನ್ ದಾರವಿನಾಶಕಾನ್ ॥ ೬೪ ॥

ನಚೈತಾಃ ಸ್ವಕುಲಾಚಾರಮಧರ್ಮಂ ವಾಪಿ ಚಾಂಜಸಾ ।
ನ ಗುಣಾಂಶ್ಚಾಪ್ಯುಪೇಕ್ಷಂತೇ ಪ್ರಕೃತ್ಯಾ ಕಿಮು ಪೀಡಿತಾಃ ॥ ೬೫ ॥

ಸತೀತ್ವೇ ಪ್ರಾಯಶಃ ಸ್ತ್ರೀಣಾಂ ಪ್ರದೃಷ್ಟಂ ಕಾರಣತ್ರಯಂ ।
ಪರಪುಂಸಾಮಸಂಪ್ರೀತಿಃ ಪ್ರಿಯೇ ಪ್ರೀತಿಃ ಸ್ವರಕ್ಷಣೇ ॥ ೬೬ ॥

ತಸ್ಮಾತ್ಸುರಕ್ಷಿತಾ ನಿತ್ಯಮುಪಚಾರೈರ್ಯಥೋಚಿತೈಃ ।
ಸುಭೃತಾ ನಿತ್ಯಕರ್ಮಾಣಃ ಕರ್ತವ್ಯಾ ಯೋಷಿತಃ ಸದಾ ॥ ೬೭ ॥

---

೬೪. ಕಾಲಕ್ರಮದಲ್ಲಿ ಮುಪ್ಪು ಪ್ರಾಪ್ತವಾಗುತ್ತದೆ. ಆ ಸಂದರ್ಭದಲ್ಲಿ ಮದುವೆಯಾದ ಗಂಡನೇ ಶತ್ರುವಾಗುತ್ತಾನೆ. (ವೃದ್ಧಸ್ಯ ತರುಣೀ ವಿಷಂ ಎಂಬ ಉಕ್ತಿ ಇದೆ). ಆದಕಾರಣ ಹೆಂಡಿರ ನಾಶಕ್ಕೆ ಕಾರಣಗಳಾದ ಈ ದೋಷಗಳನ್ನು ಆಚರಿಸಬಾರದು.

೬೫. ಈ ಸ್ತ್ರೀಯರು ತಮ್ಮ ಕುಲಾಚಾರ, ಅಧರ್ಮವೆಂದು ಸ್ಪಷ್ಟವಾಗಿ ತೋರುತ್ತಿರುವ ಕಾರ್ಯಕ್ಕೆ ಹೇಸುವುದು, ಇಂಥ ಸುಗುಣಗಳನ್ನು ಸ್ವಾಭಾವಿಕವಾಗಿಯೇ ಉದಾಸೀನ ಮಾಡುತ್ತಾರೆ. ಇನ್ನು ಅವರ ಮನಸ್ಸು ಬಾಧೆಗೊಳಗಾದಾಗ ಅನಾದರ ಮಾಡುವರೆಂದು ಹೇಳಬೇಕೆ?

೬೬. ಸ್ತ್ರೀಯರು ಪತಿವ್ರತೆಯರಾಗಿರುವುದಕ್ಕೆ ಪ್ರಾಯಿಕವಾಗಿ ಪರಪುರುಷರಲ್ಲಿ ಪ್ರೀತಿಹುಟ್ಟದೆ ಇರುವುದು, ತನ್ನ ಪ್ರಿಯನಲ್ಲಿ ಪ್ರೀತಿ ನೆಲಸಿರುವುದು, ಮತ್ತು ತನ್ನ ಯೋಗ್ಯತೆ ಕೆಡದಂತೆ ನೋಡಿಕೊಳ್ಳುವುದು, ಈ ಮೂರು ಕಾರಣಗಳಿರಬೇಕು.

೬೭. ಆದಕಾರಣ ನಿತ್ಯವೂ ಆಯಾ ಕಾಲಕ್ಕೆ ತಕ್ಕಹಾಗೆ ಶಿಕ್ಷೆ ಉಪಚಾರಗಳನ್ನು ಮಾಡುತ್ತಲೂ, ಅಪಾಯಗಳಿಂದ ರಕ್ಷಿಸುತ್ತಲೂ, ಚನ್ನಾಗಿ ದೇಹಪೋಷಣೆ ಮಾಡುತ್ತಲೂ, ಅವರ ದಿನಚರಿಯ ಕೆಲಸಗಳನ್ನು ತಪ್ಪದೆ ಮಾಡುವಂತೆ ನಿಯಮಿಸುತ್ತಲೂ ಇರುವುದು ಪುರುಷರ ಕರ್ತವ್ಯ.

ಉತ್ತಮಾಂ ಸಾಮ ದಾನಾಭ್ಯಾಂ ಮಧ್ಯಮಾಭ್ಯಾಂ ತು ಮಧ್ಯಮಾಂ ।
ಪಶ್ಚಿಮಾಭ್ಯಾಮುಭಾಭ್ಯಾಂ ಚ ಅಧಮಾಂ ಸಂಪ್ರಸಾಧಯೇತ್ ॥ ೬೮ ॥

ಭೇದದಂಡೌ ಪ್ರಯುಜ್ಯಾಪಿ ಪ್ರಾಗಪತ್ಯಾದ್ಯಪೇಕ್ಷಯಾ ।
ಕಚ್ಛಿಷ್ಟಾನಾಂ ತದಾ ಪಶ್ಚಾತ್ ಸಾಮದಾನಪ್ರಸಾಧನೇ ॥ ೬೯ ॥

ಯಾಸ್ತು ವಿಧ್ವಸ್ತಚಾರಿತ್ರಾ ಭರ್ತುರ್ಶ್ಚಾಹಿತಕಾರಿಕಾಃ ।
ತ್ಯಾಜ್ಯಾ ಏವ ಸ್ತ್ರಿಯಸ್ಸದ್ಭಿಃ ಕಾಲಕೂಟವಿಷೋಪಮಾಃ ॥ ೭೦ ॥

ಇಷ್ಟಾಃ ಕುಲೋದ್ಗತಾಃ ಸಾಧ್ವ್ಯೋ ವಿನೀತಾ ಭರ್ತೃವತ್ಸಲಾಃ ।
ಸರ್ವದಾ ಸಾಧನೀಯಾಸ್ತಾಃ ಸಂಪ್ರದಾಯೋತ್ತರೋತ್ತರೈಃ ॥ ೭೧ ॥

---

೬೮. ಉತ್ತಮಳಾದ ಸ್ತ್ರೀಯನ್ನು ಸಾಮ, ದಾನ ಈ ಎರಡು ಉಪಾಯಗಳಿಂದಲೂ, ಮಧ್ಯಮವರ್ಗದ ಸ್ತ್ರೀಯರನ್ನು ದಾನ ಭೇದಗಳೆಂಬೆರಡು ಉಪಾಯಗಳಿಂದಲೂ, ಅಧಮಸ್ತ್ರೀಯನ್ನು ಕೊನೆಯದಾದ ಭೇದ, ದಂಡಗಳೆಂಬ ಉಪಾಯಗಳಿಂದಲೂ ವಶಮಾಡಿಕೊಳ್ಳಬೇಕು.

೬೯. ಉಳಿದವರಿಗೆ ಸಾಮಾನ್ಯವಾಗಿ ಮಕ್ಕಳಾಗುವುದಕ್ಕೆ ಮುಂಚೆ ಭೇದೋಪಾಯ ದಂಡೋಪಾಯಗಳನ್ನು ಉಪಯೋಗಿಸಿದರೂ ಮಕ್ಕಳಾದ ಮೇಲೆ ಸಾಮ, ದಾನ ಇವೇ ಅವರನ್ನು ವಶಪಡಿಸಿಕೊಳ್ಳಲು ಅನುಕೂಲ ಸಾಧನಗಳು.

೭೦. ಯಾವ ಸ್ತ್ರೀಯರು ತಮ್ಮ ನಡತೆಯನ್ನು ಕೆಡಿಸಿಕೊಂಡು ಗಂಡನಿಗೂ ಕೇಡುಮಾಡುತ್ತಾರೆಯೋ ಅಂಥ ಸ್ತ್ರೀಯರನ್ನು ಕಾಲಕೂಟವಿಷವನ್ನು ಕಂಡಂತೆ ಸಜ್ಜನರು ವರ್ಜ್ಯಮಾಡಿಬಿಡಬೇಕು.

೭೧. ಪೂರ್ವಾಚಾರವನ್ನು ಬಿಡದವರು, ಸತ್ಕುಲದಲ್ಲಿ ಹುಟ್ಟಿದವರು, ಪತಿವ್ರತೆಯರು, ಹಿರಿಯರಿಗೆ ವಿಧೇಯರು, ಗಂಡನಲ್ಲಿ ವಾತ್ಸಲ್ಯವುಳ್ಳವರು, ಪ್ರಿಯರು ಈರೀತಿ ಇರುವಂಥವರನ್ನೇ ಸಂಪ್ರದಾಯಸ್ಥರಾದ ಮಾನವರು ಪಡೆಯಬೇಕು.

ಏವಮೇವ ಯಥೋದ್ದಿಷ್ಟಂ ಸ್ತ್ರೀವೃತ್ತಂ ಯೋನುತಿಷ್ಠತಿ ।
ಪ್ರಾಪ್ನೋತ್ಯೇವ ಸ ಸಂಪೂರ್ಣಂ ತ್ರಿವರ್ಗಂ ಲೋಕಸಂಭವಂ ॥ ೭೨ ॥

ಇತಿ ಶ್ರೀಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ವಿವಾಹಧರ್ಮೇಷು
ಸ್ತ್ರೀವಿಷಯೇ ನರವೃತ್ತವರ್ಣನಂ ನಾಮ ಅಷ್ಟಮೋಽಧ್ಯಾಯಃ



---

೭೨. ಈರೀತಿಯಾಗಿ ತಮ್ಮ ಇಷ್ಟಸಾಧನೆಗೆ ಬೇಕಾಗುವ ಹೆಂಗಸರ ವಿಷಯದಲ್ಲಿ ಯಾವ ಯಾವ ನಡೆವಳಿಕೆಗಳನ್ನು ನಡಸಬೇಕೋ ಅವುಗಳನ್ನು ತಪ್ಪದೆ ನಡೆಸುವವನು ಗುಣಪೂರ್ಣಳಾದ ಪತ್ನಿಯನ್ನು ಪಡೆಯುವುದರಲ್ಲಿ ಸಂಶಯವಿಲ್ಲ. ಅಂಥ ಪತಿಯ ವಿಷಯದಲ್ಲಿ ಸ್ತ್ರೀಯರೂ ವಿನೀತೆಯರೂ ವಾತ್ಸಲ್ಯಶಾಲಿನಿಯರೂ ಆಗಿರುತ್ತಾರೆ,

ಎಂಬಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಸ್ತ್ರೀಯರಲ್ಲಿ ಪುರುಷನ ನಡೆವಳಿಕೆಯ ವರ್ಣನೆ ಎಂಬ ಎಂಟನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ನವಮೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಏವಂ ಸ್ತ್ರೀಷು ಮನುಷ್ಯಾಣಾಂ ವೃತ್ತಿರುಕ್ತಾ ಸಮಾಸತಃ ।
ಸಂಪ್ರಾಪ್ತಂ ಚ ಮನುಷ್ಯೇಷು ಸ್ತ್ರೀಣಾಂ ಸಮುಪದಿಶ್ಯತೆ ॥ ೧ ॥

ಸಮ್ಯಗಾರಾಧನಾತ್ಪುಂಸಾಂ ರತಿರ್ಭವತಿ ಯೋಷಿತಾಂ ।
ಪುತ್ರಾಃ ಸ್ವರ್ಗಾದ್ಯದೃಷ್ಟಂ ಚ ತಸ್ಮಾದಿಷ್ಟೋ ಹಿ ತದ್ವಿಧಿಃ ॥ ೨ ॥

ಕರ್ತವ್ಯಂ ನಾಮ ಯತ್ಕಿಂಚಿತ್ ಸರ್ವಂ ವಿಧಿಮಪೇಕ್ಷತೇ ।
ವ್ಯಕ್ತಿಮಾಯಾತಿ ವೈಕಲ್ಯಂ ತದೇವಾರಬ್ಧಮನ್ಯಥಾ ॥ ೩ ॥

---

### ಒಂಭತ್ತನೆಯ ಅಧ್ಯಾಯ

೧. ಬ್ರಹ್ಮನು ತನ್ನ ಮಾತನ್ನು ಮುಂದುವರಿಸಿ ಹೇಳುತ್ತಾನೆ—ಹೀಗೆ ಪುರುಷರು ತಮ್ಮ ಸ್ತ್ರೀಯರ ವಿಷಯದಲ್ಲಿ ನಡೆಸಬೇಕಾದ ನಡೆವಳಿಕೆಯನ್ನು ಸಂಕ್ಷೇಪವಾಗಿ ಹೇಳಿದ್ದಾಯಿತು. ಇನ್ನು ಸ್ತ್ರೀಯರು ಸ್ವಪುರುಷರ ವಿಷಯದಲ್ಲಿ ನಡೆಸಬೇಕಾದ ನಡೆವಳಿಕೆಯನ್ನು ಹೇಳುತ್ತೇನೆ ಕೇಳಿ.

೨. ಸ್ತ್ರೀಯರು ಪುರುಷರನ್ನು ಚೆನ್ನಾಗಿ ಸೇವಿಸುವುದರಿಂದ ಅವರಿಗೆ ಪುರುಷರು ತಮ್ಮನ್ನು ಪ್ರೀತಿಸಲು ಅವಕಾಶವಾಗುತ್ತದೆ. ಇದಲ್ಲದೆ ಪುರುಷಸೇವೆಯಿಂದ ಅವರಿಗೆ ಮಕ್ಕಳೂ, ಸ್ವರ್ಗಾದ್ಯುತ್ತಮಗತಿಯನ್ನು ಪಡೆಯುವ ಅದೃಷ್ಟವೂ, ಉಂಟಾಗುವುದು. ಆದುದರಿಂದ ಇದು ಎಲ್ಲರ ಮತದಲ್ಲೂ ಇಷ್ಟವಾದ ವಿಧಿ.

೩. ಮಾಡಬೇಕಾಗಿರುವ ಪ್ರತಿಯೊಂದು ಕೆಲಸವೂ ಶಾಸ್ತ್ರಸಿಯಮವನ್ನನುಸರಿಸಬೇಕು. ಅದೇ ಕೆಲಸವನ್ನು ಪ್ರಕಾರಾಂತರದಿಂದ ಪ್ರಾರಂಭಿಸಿ ಮಾಡಲಾಗಿ

ವಿಧ್ಯಪೇಕ್ಷೀಣಿ ಸರ್ವಾಣಿ ಕಾರ್ಯಾಣ್ಯಲ್ಪಫಲಾನ್ಯಪಿ ।
ಹೇತುಭೂತಾಸ್ತ್ರಿವರ್ಗಸ್ಯ ಮಹಾರಂಭಾ ವಿಶೇಷತಃ ॥ ೪ ॥

ಸಾಧ್ವಸಾಧ್ವಾದಿ ವಿಜ್ಞಾನಮಾಗಮ್ಯೈಕನಿಬಂಧನಂ ।
ಸಾಧ್ಯಂ ದೃಷ್ಟಮದೃಷ್ಟಂ ಚ ದ್ವಯಂ ವಿಧಿನಿಷೇಧಯೋಃ ॥ ೫ ॥

ಶಾಸ್ತ್ರಾಧಿಕಾರೋ ನ ಸ್ತ್ರೀಣಾಂ ನ ಗ್ರಂಥಾನಾಂ ಚ ಧಾರಣೇ ।
ತಸ್ಮಾದಿಹ್ಯಾನೇ ಮನ್ಯಂತೇ ತಚ್ಛಾಸನಮನರ್ಥಕಂ ॥ ೬ ॥

ಆಗಮೈಕಕ್ರಿಯಾಯೋಗೇ ಸ್ತ್ರೀಣಾಮಪ್ಯಧಿಕಾರಿತಾ ।
ಮೃತೇ ಭರ್ತರಿ ಸಾಧ್ವೀ ಸ್ಯಾದಿತ್ಯಾದೌ ಸ್ಮೃತಿಭಾಷಿತಂ ॥ ೭ ॥

---

ವಿಕಲ್ಪವನ್ನು ಹೊಂದುವುದು. (ಎಂದರೆ ಮೊದಲುಮಾಡಿದ ಪ್ರಕಾರವಲ್ಲದೆ ಈ ಪ್ರಕಾರದಿಂದ ಮಾಡಿದರೂ ಮಾಡಬಹುದೆಂಬುದು ವಿಕಲ್ಪ ವಿಧಿಯಾಗುವುದು).

೪. ವಿಧಿಪ್ರಕಾರವಾಗಿ ಮಾಡಬೇಕಾಗಿರುವ ಎಲ್ಲಾ ಕಾರ್ಯಗಳೂ ಸ್ವಲ್ಪವಾಗಿದ್ದರೂ ತ್ರಿವರ್ಗಕ್ಕೆ (ಧರ್ಮಾರ್ಥ ಕಾಮಗಳಿಗೆ) ಸಾಧನಗಳು. ಈ ಕಾರ್ಯಗಳನ್ನೇ ವಿಸ್ತಾರವಾಗಿ ಮಾಡಿದರೆ ಅವು ತ್ರಿವರ್ಗಕ್ಕೆ ವಿಶೇಷಸಾಧಕಗಳಾಗುವುವು.

೫. ಯಾವ ಕೆಲಸವನ್ನು ಮಾಡಬೇಕಾದರೂ ಅದು ಸಾಧುವೋ ಅಸಾಧುವೋ ಎಂಬುದನ್ನು ಶಾಸ್ತ್ರದಿಂದಲೇ ನಿರ್ಣಯಿಸಬೇಕು. ಸಾಧುವೆಂದಾಗಲಿ ಅಸಾಧುವೆಂದಾಗಲಿ ನಿಶ್ಚಯವಾದ ಮೇಲೆ, ಆಕಾರ್ಯಕ್ಕೆ ದೃಷ್ಟಫಲವಿರುವುದೋ ಅದೃಷ್ಟಫಲವಿರುವುದೋ ಎಂಬ ಈ ಎರಡು ಅಂಶಗಳೂ ನಿಶ್ಚಯವಾಗಬೇಕು.

೬. ಹೆಂಗಸರಿಗೆ ಶಾಸ್ತ್ರಾಭ್ಯಾಸಮಾಡುವ ಅಧಿಕಾರವಾಗಲಿ ಗ್ರಂಥಗಳನ್ನು ಜ್ಞಾಪಕದಲ್ಲಿಟ್ಟುಕೊಳ್ಳುವ ಶಕ್ತಿಯಾಗಲಿ ಇಲ್ಲದುದರಿಂದ ಬೇರೆ ಪಂಡಿತರು ಹೇಳುವ ಹಾಗೆ ಸ್ತ್ರೀಯರನ್ನು ಶಾಸನಮಾಡುವುದು ವ್ಯರ್ಥವೆಂಬುದು ಒಂದು ಪಕ್ಷದವರಮತ.

೭. ಶಾಸ್ತ್ರವೊಂದನ್ನೇ ಪ್ರಮಾಣವಾಗಿಟ್ಟುಕೊಂಡು ಕಾರ್ಯಮಾಡಬೇಕಾದ ಸಂದರ್ಭವಲ್ಲಿ ಸ್ತ್ರೀಯರಿಗೂ ಶಾಸ್ತ್ರಾಧಿಕಾರವುಂಟೆಂದು ಹೇಳಬೇಕು. ಪತಿವ್ರತಾ ಸ್ತ್ರೀಗೆ ಗಂಡನು ಮೃತನಾದಮೇಲೆ ಏನು ಮಾಡತಕ್ಕದು ಇತ್ಯಾದಿ ವಿಷಯಗಳನ್ನು ಸ್ಮೃತಿಗಳು ತಿಳಿಸುವುವು.

ತಸ್ಮಾತ್ಕಾರ್ಯಮಕಾರ್ಯಂ ವಾ ವಿಜ್ಞಾಯ ಪ್ರಭುರಾಗಮಾತ್ ।
ಗುಣ ದೋಷೇಷು ತಾಃ ಸಮ್ಯಕ್ ಶಾಸ್ತಿ ರಾಜಾ ಪ್ರಜಾ ಇವ ॥ ೮ ॥

ಸಂತ್ಯೇವ ಪ್ರಮದಾಃ ಕಾಶ್ಚಿತ್ ವಿಶೇಷಾಧಿಗತಾಗಮಾಃ ।
ಯತ್ತು ಶಾಸ್ತ್ರಾಧಿಕಾರಿತ್ವಂ ವಚನಂ ಸ್ಯಾನ್ನಿರರ್ಥಕಂ ॥ ೯ ॥

ಕೇಚಿದ್ವೇದವಿದೋವಿಪ್ರಾಃ ಕೃತ್ಯೈರ್ವೇಷಕ್ರಿಯಾಪರಾಃ ।
ತಥಾಪಿ ಜಾತಿಮಾತ್ರೇಣ ತ ಏವಾತ್ರಾಧಿಕಾರಿಣಃ ॥ ೧೦ ॥

ಕ್ರಿಯಂತೇ ವೇದಶಾಸ್ತ್ರಜ್ಞೈಃ ಪ್ರಯೋಗಾಃ ಶಾಸ್ತ್ರಲೌಕಿಕಾಃ ।
ಸ್ಥಿತ ಮೇಷಾಮದೂರೇಪಿ ಶಾಸ್ತ್ರಮೇವ ನಿಬಂಧನಂ ॥ ೧೧ ॥

ವ್ಯಾಧಧೀವರಗೋಪಾಲಪ್ರಭೃತೀನಾಂ ಚ ದೃಶ್ಯತೇ ।
ವಿಷ್ಟ್ಯಂಗಾರಕಸೌರ್ಯಾದಿ ದಿನಾನಾಂ ಪರಿವರ್ಜನಂ ॥ ೧೨ ॥

---

೮. ಆದುದರಿಂದ ರಾಜನು ಶಾಸ್ತ್ರವಿಮರ್ಶೆಯಿಂದ ಕಾರ್ಯಾಕಾರ್ಯಗಳನ್ನು ತಿಳಿದು ಗುಣದೋಷಗಳ ವಿಷಯದಲ್ಲಿ ಆ ಹೆಂಗಸರಿಗೆ ತಿಳಿವಳಿಕೆಯನ್ನು ಕೊಡಬೇಕು.

೯. ವಿಶೇಷತಃ ಬಹು ಚೆನ್ನಾಗಿ ಶಾಸ್ತ್ರಾಭ್ಯಾಸಮಾಡಿದ ಕೆಲವರು ಹೆಂಗಸರು ಇದ್ದೇ ಇರುವರು. ಆದುದರಿಂದ ಸ್ತ್ರೀಯರಿಗೆ ಶಾಸ್ತ್ರಾಧಿಕಾರವಿದೆಯೋ ಇಲ್ಲವೋ ಎಂಬುದನ್ನು ಕುರಿತು ಮಾತನಾಡುವುದು ವ್ಯರ್ಥವು.

೧೦. ವೇದಜ್ಞರಾದ ಕೆಲವರು ಬ್ರಾಹ್ಮಣರು ಬೇರೆ ಕೃತ್ಯನಿಮಿತ್ತವಾಗಿ ತಮ್ಮ ವೇಷಾದಿಗಳನ್ನು ಬದಲಾಯಿಸಿಕೊಂಡಿದಾರೆ. ಆದಾಗ್ಗೂ ಆ ವರ್ಣದಲ್ಲಿ ಅವರು ಜನ್ಮವೆತ್ತಿರುವುದರಿಂದ ಅವರೇ ಅದಕ್ಕೆ ಅಧಿಕಾರಿಗಳಾಗುವರು.

೧೧. ವೇದ ಶಾಸ್ತ್ರಜ್ಞರು ಶಾಸ್ತ್ರಾನುಸಾರವಾದ ಕೆಲಸವನ್ನೂ ಲೋಕಾನುಸಾರವಾದ ಕೆಲಸವನ್ನೂ ಎರಡನ್ನೂ ಮಾಡುತ್ತಾರೆ. ಶಾಸ್ತ್ರ, ಆಚಾರ ಎರಡೂ ಇವರಿಗೆ ಸಮೀಪವೇ ಆದಾಗ್ಯೂ ಶಾಸ್ತ್ರವಿಚಾರವೇ ಪ್ರಮಾಣವಾಗಿದೆ.

೧೨. ಬೇಡರು; ಬೆಸ್ತರು, ದನಕಾಯುವವರು, ಮುಂತಾದವರಿಗೆ ವೇದಾಧಿಕಾರವಿಲ್ಲದಿದ್ದರೂ ಷಷ್ಠಿ, ಮಂಗಳವಾರ, ಶನಿವಾರ ಮುಂತಾದ್ದರಲ್ಲಿ ಅವರೂ ಗಮನಾಗಮನಾದಿ ಕಾರ್ಯಗಳನ್ನು ಮಾಡದೆ ಇರುವುದನ್ನು ನಾವು ಕಂಡಿದೇವೆ.

**ಗಮ್ಯಾಗಮ್ಯಾದಿ ಕಾರ್ಯೇಯಂ ನಿಯತಾಚಾರಸಂಸ್ಥಿತಿಃ ।**
**ಲೋಕಾನಾಂ ಶಾಸ್ತ್ರವಾಕ್ಯಾನಾಂ ಪ್ರಾಣಾಃ ಸ್ವೇಷ್ಟನಿಬಂಧನಾಃ ॥ ೧೩ ॥**

**ತಸ್ಮಾಚ್ಚತುರ್ಣಾಂ ವರ್ಣಾನಾಂ ಆಶ್ರಮಾಣಾಂ ಚ ಸರ್ವಶಃ ।**
**ಮುಖ್ಯಗೌಣಾದಿ ಭೇದಾನಾಂ ಜ್ಞೇಯಾ ಶಾಸ್ತ್ರಾಧಿಕಾರಿತಾ ॥ ೧೪ ॥**

**ಪೌರ್ವಾಪರ್ಯಂ ತು ವಿಜ್ಞಾತುಮಶಕ್ಯಂ ಲೋಕಶಾಸ್ತ್ರಯೋಃ ।**
**ತಚ್ಛಾಸ್ತ್ರಮೇವ ಮಂತವ್ಯಂ ಯಥಾ ಕರ್ಮಶರೀರವತ್ ॥ ೧೫ ॥**

**ಆಗಮೇ ಚ ಪುರಾಣೇ ಚ ದ್ವಿಧೈವನಾಸ್ತಿಕಗ್ರಹಂ ।**
**ಮಾರ್ಗಂ ಮಹದ್ಭಿರಾಚೀರ್ಣಂ ಪ್ರಪದ್ಯೇತಾವಿಕಲ್ಪಧೀಃ ॥ ೧೬ ॥**

---

೧೩. ಲೋಕಾಚಾರದಂತೆ ನಡೆಯುವುದಕ್ಕೂ. ಶಾಸ್ತ್ರಾಚಾರದಂತೆ ನಡೆಯುವುದಕ್ಕೂ ಆಧಾರ ಯಾವುದೆಂದರೆ ತಮ್ಮ ಇಷ್ಟದಂತೆ ನಡೆಯುವುದನ್ನೇ ಮುಖ್ಯವಾಗಿ ಮಾಡಿಕೊಂಡಿದಾರೆ.

೧೪. ಆದ್ದರಿಂದ ನಾಲ್ಕು ವರ್ಣಗಳವರಿಗೂ ಎಲ್ಲ ಆಶ್ರಮಗಳವರಿಗೂ ಇದು ಮುಖ್ಯ; ಇದು ಗೌಣ (ಅಷ್ಟು ಮುಖ್ಯವಲ್ಲ) ಎಂಬ ಭೇದಗಳ ವಿಷಯದಲ್ಲಿ ಎಲ್ಲ ವರ್ಣದವರೂ ಶಾಸ್ತ್ರದ ಆಧಾರವನ್ನು ಅನುಸರಿಸಿಯೇ ನಿರ್ಣಯಮಾಡಬೇಕು.

೧೫. ಲೋಕಾಚಾರ, ಶಾಸ್ತ್ರಾಚಾರ ಇವುಗಳಲ್ಲಿ ಯಾವುದು ಮೊದಲು, ಯಾವುದು ಆಮೇಲೆ ಎಂಬುದನ್ನು ನಿಷ್ಕರ್ಷಿಸುವ ವಿಚಾರವು; ಶರೀರ ಮೊದಲೇ ? ಕರ್ಮ ಮೊದಲೇ ? ಎಂಬುದನ್ನು ನಿಶ್ಚಯಿಸುವ ಹಾಗೆಯೇ ಕಷ್ಟ. ಆದ್ದರಿಂದ ನಾವು ಶಾಸ್ತ್ರವನ್ನೇ ಮುಖ್ಯವೆಂದು ತಿಳಿಯಬೇಕು.

೧೬. ಶಾಸ್ತ್ರಗಳಲ್ಲಿಯೂ; ಪುರಾಣಗಳಲ್ಲಿಯೂ ಬೇರೆ ಬೇರೆ ಪ್ರಕಾರವಾಗಿ ಹೇಳಲ್ಪಟ್ಟಿರುವ ಸಂದರ್ಭದಲ್ಲಿ ಆಸ್ತಿಕರಾದವರು ಹೀಗೆ ಮಾಡಬೇಕೋ? ಹಾಗೆ ಮಾಡಬೇಕೋ ? ಎಂಬ ವಿಕಲ್ಪಮಾಡದೆ ಮಹಾತ್ಮರು ಆಚರಿಸುವ ಮಾರ್ಗವನ್ನು ಅನುಸರಿಸಬೇಕು.

**ಮೂಲಂ ಗೃಹಸ್ಥಧರ್ಮಾಣಾಂ ಯಸ್ಮಾನ್ನಾರ್ಯಃ ಪತಿವ್ರತಾಃ ।**
**ತಸ್ಮಾದಾಸಾಂ ಪ್ರವಕ್ಷ್ಯಾಮಿ ಭರ್ತುರಾರಾಧನೇ ವಿಧಿಂ ॥ ೧೭ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಆಗಮನ ಪ್ರಶಂಸಾ ನಾಮ ನವಮೋಽಧ್ಯಾಯಃ**



---

೧೭. ಪತಿವ್ರತೆಯರಾದ ಹೆಂಗಸರೇ ಗೃಹಸ್ಥಧರ್ಮಕ್ಕೆ ಮೂಲಾಧಾರ. ಆದ್ದರಿಂದ ತಮ್ಮ ಪತಿಯನ್ನು ಆರಾಧಿಸಬೇಕಾದ ವಿಧಾನವನ್ನು ಇನ್ನುಮುಂದೆ ಅವರಿಗಾಗಿ ಹೇಳುತ್ತೇನೆ ಎಂದನು.

ಎಂಬಲ್ಲಿಗೆ ಭವಿಷ್ಯಪುರಾಣದಲ್ಲಿ ಬ್ರಾಹ್ಮಪರ್ವದಲ್ಲಿ ಆಗಮನ ಪ್ರಶಂಸೆ ಎಂಬ ಒಂಭತ್ತನೆಯ ಅಧ್ಯಾಯ ಮುಗಿದುದು.





॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ದಶಮೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಆರಾಧ್ಯಾನಾಂ ಹಿ ಸರ್ವೇಷಾಮಯಮಾರಾಧನೇ ವಿಧಿಃ ।
ಚಿತ್ತಜ್ಞಾನಾನುವೃತ್ತಿಶ್ಚ ಹಿತೈಷಿತ್ವಂ ಚ ಸರ್ವದಾ ॥ ೧ ॥

ಕನ್ಯಾ ಪುನರ್ಭೂರ್ವೇಶ್ಯಾ ಚ ತ್ರಿವಿಧಾ ಏವ ಯೋಷಿತಃ ।
ಪ್ರಿಯಾ ಮಧ್ಯಾ ಪ್ರಿಯಾಚೈವ ಯೋಗ್ಯಾ ಮಧ್ಯೇತರಾ ತಥಾ ॥ ೨ ॥

ಸಮಾ ಶ್ರೇಷ್ಠಾ ಚ ನೀಚಾ ಚ ಭೂಯೋಽಪಿ ತ್ರಿವಿಧಾಃ ಪುನಃ ।
ಪೂರ್ವವತ್ಪರಯೋರ್ವೃತ್ತಿರಿಷ್ಟಾನುಕ್ತ್ಯಾ ಪ್ರಿಯಾ ಪ್ರಿಯೇ ॥ ೩ ॥

---

### ಹತ್ತನೆಯ ಅಧ್ಯಾಯ

೧. ಬ್ರಹ್ಮನು ತನ್ನ ಮಾತನ್ನು ಮುಂದುವರಿಸಿ ಹೇಳುತ್ತಾನೆ—ನಾವು ಸೇವಿಸಬೇಕಾದವರ ಮನೋವೃತ್ತಿಯನ್ನು ಅರಿತು ಅದಕ್ಕನುಸಾರವಾಗಿ ನಡೆಯುವುದು, ಯಾವಾಗಲೂ ಅವರಿಗೆ ಹಿತವನ್ನೇ ಕೋರುವುದು, ಇವು ಯಾರನ್ನು ಸೇವಿಸಬೇಕಾದಾಗಲೂ ಅನುಸರಿಸಬೇಕಾದ ಕ್ರಮ.

೨-೩. ಸ್ತ್ರೀಯರಲ್ಲಿ ಕನ್ಯೆ, ಪುನರ್ವಿವಾಹಿತೆ, ವೇಶ್ಯೆ ಎಂದೂ; ಪ್ರಿಯಳು, ಸಾಮಾನ್ಯಳು, ಅಪ್ರಿಯಳು ಎಂದೂ; ಯೋಗ್ಯಳು, ಮಧ್ಯಮಳು, ಇತರಳು ಎಂದೂ; ಸಮಾನಳು, ಶ್ರೇಷ್ಠಳು, ಹೀನಳು ಎಂದೂ; ಬೇರೆ ಬೇರೆ ತರಹದ ಮೂರು ಮೂರು ಬಗೆಗಳು ಉಂಟು. ಪ್ರತಿ ಗುಂಪಿನಲ್ಲೂ ಕಡೆಯವರಿಬ್ಬರ ವಿಷಯದಲ್ಲಿ ಮೊದಲನೆಯವಳನ್ನು ಕಂಡ ಹಾಗೆಯೇ ಪ್ರಿಯವಿಷಯ, ಅಪ್ರಿಯವಿಷಯವ್ಯಾವುದನ್ನೂ ಹೇಳದೆ ನಡೆದುಕೊಳ್ಳಬೇಕು.

ಅಧಮಾಪ್ರಿಯಯೋರತ್ರ ಪತಿಪತ್ನ್ಯಾದಿಕಾ ಮತಾ ।
ನಿಷಿದ್ಧಾನಾಂ ತು ಭಕ್ಷ್ಯಾದಿ ತದ್ಧಿ ಯತ್ನಾದ್ವಿಧೀಯತೇ ॥ ೪ ॥

ಏಕದ್ವಿತ್ವಬಹುತ್ವಾದ್ಯಾ ಯೇ ಭೇದಾಃ ಸಮುದಾಹೃತಾಃ ।
ಜ್ಯೇಷ್ಠಾದಿವೃತ್ತೇ ವಕ್ಷ್ಯಾಮಃ ತಾನಶೇಷಾನ್ ದ್ವಿಜೋತ್ತಮಾಃ ॥ ೫ ॥

ವೃತ್ತಂ ಚ ದ್ವಿವಿಧಂ ಸ್ತ್ರೀಣಾಂ ಬಾಹ್ಯಮಾಭ್ಯಂತರಂ ತಥಾ ।
ಭರ್ತ್ರಾರ್ಯದ್ಯನ್ಯಜನೇ ಬಾಹ್ಯಂ ತಸ್ಯಾಃ ಶಾರೀರಮಾಂತರಂ ॥ ೬ ॥

ಜ್ಞಾತೀತರವಿಭಾಗೇನ ತದ್ಬಾಹ್ಯಂ ದ್ವಿವಿಧಂ ಪುನಃ ।
ಪೂಜ್ಯಂ ತುಲ್ಯಂ ಕನಿಷ್ಠಂ ಚ ತತ್ಪ್ರತ್ಯೇಕಂ ಪುನಸ್ತ್ರಿಧಾ ॥ ೭ ॥

---

೪. ಅಧಮರು, ಅಪ್ರಿಯರು ಈ ಎರಡು ಬಗೆಯವರಲ್ಲಿ ಪತಿ, ಪತ್ನಿ ಮೊದಲಾದ ಭೇದಗಳಿವೆ. ಒಂದುವೇಳೆ ನಿಷಿದ್ಧವಸ್ತುಭಕ್ಷಣದ ಆವಶ್ಯಕತೆ ಕಂಡುಬಂದಾಗ ಬಲಾತ್ಕಾರದಿಂದ ಆದಕ್ಕೆ ಅವಕಾಶವುಂಟುಮಾಡಿ ಕೊಡಬೇಕು.

೫. ಎಲೈ ಬ್ರಾಹ್ಮಣೋತ್ತಮರೇ ! ಪುರುಷನು ಒಬ್ಬಳನ್ನೋ ಇಬ್ಬರನ್ನೋ ಮೂವರನ್ನೋ ಅಥವಾ ಹಲವರನ್ನೋ ಹೆಂಡತಿಯರನ್ನಾಗಿ ಸ್ವೀಕರಿಸುವನೆಂದು ಹೇಳಿತ್ತಷ್ಟೆ. ದ್ವಿಪತ್ನಿಯರು, ಬಹು ಪತ್ನಿಯರು ಇರುವಾಗ ಜ್ಯೇಷ್ಠ ಪತ್ನಿಯೇ ಮುಂತಾದವರ ತಾರತಮ್ಯವನ್ನು ಸಮಗ್ರವಾಗಿ ಹೇಳುತ್ತೇನೆ.

೬. ಇತರರು ಎಂದರೆ ಗಂಡ ಮತ್ತು ಇತರ ಜನರೊಡನೆ ಮಾಡುವ ನಡೆವಳಿಕೆಯ ಬಾಹ್ಯವೃತ್ತವೆಂದೂ, ಸ್ವಂತ ಶರೀರವಿಚಾರವಾದ ನಡವಳಿಕೆಯು ಅಭ್ಯಂತರ ವೃತ್ತವೆಂದೂ, ಸ್ತ್ರೀಯರ ನಡವಳಿಕೆ ಎರಡು ಬಗೆಯಾಗಿದೆ.

೭. ಜ್ಞಾತಿಗಳಲ್ಲಿ ನಡೆವ ನಡವಳಿಕೆ, ಜ್ಞಾತಿಗಳಲ್ಲದ ಪರಕೀಯರಲ್ಲಿ ನಡೆವ ನಡವಳಿಕೆ, ಎಂಬದಾಗಿ ಹೊರಗಣ ನಡವಳಿಕೆಯೇ ಎರಡು ಬಗೆಯಾಗಿದೆ. ಆದರಲ್ಲಿ ಉತ್ತಮ, ಮಧ್ಯಮ, ಅಧಮ ಎಂದು ಮತ್ತೆ ಬೇರೆ ಮೂರು ಒಳಭೇದಗಳು ಇವೆ.

ರಹೋರತಂ ಪ್ರಕಾಶಂ ಚ ಶರೀರಮಪಿ ತತ್ತ್ರಿಧಾ ।
ಭರ್ತುಶ್ಚಿತ್ತಾನುಕೂಲ್ಯೇನ ಪ್ರಯೋಕ್ತವ್ಯಂ ಯಥೋಚಿತಂ ॥ ೮ ॥

ಮಾತಾ ಪಿತಾ ಸ್ವಸಾ ಭ್ರಾತಾ ಪಿತೃವ್ಯಾಚಾರ್ಯಮಾತುಲಾಃ ।
ಸಭಾರ್ಯಾ ಭಗಿನೀ ಭರ್ತಾ ಭರ್ತೃಮಾತೃಪಿತೃಷ್ವಸಾ ॥ ೯ ॥

ಧಾತ್ರೀ ವೃದ್ಧಾಂಗನಾದಿಶ್ಚ ಯಸ್ತತ್ರಾಪ್ತಸಮೋ ಜನಃ ।
ಪ್ರಥಮೋಢಾ ಸಪತ್ನೀ ಚ ಸ್ತ್ರೀಣಾಂ ಮಾನ್ಯತಮೋ ಗಣಃ ॥ ೧೦ ॥

ಏಷಾಮೇವ ತ್ವಪತ್ಯಾದಿಭಗಿನೀಭ್ರಾತರಸ್ತಥಾ ।
ಕನಿಷ್ಠಾ ಭರ್ತುರಿತ್ಯಾದಿಭಾರ್ಯಾಶ್ಚಾಪ್ತಸಮೋ ಮತಃ ॥ ೧೧ ॥

ಹೀನೋಽನ್ಯಃ ಶಾಸನೀಯಸ್ತು ತತ್ರ ತಾವನ್ನ ವಿದ್ಯತೇ ।
ಯೋಗ್ಯತಾ ಸುತಸೌಭಾಗ್ಯೈಃ ನ ಯಾವತ್ಸ್ಯಾತ್ ಪ್ರತಿಷ್ಠಿತಾ ॥ ೧೨ ॥

---

೮. ಹೊರಗಿನ ನಡವಳಿಕೆಗಳಲ್ಲಿ ಏಕಾಂತದಲ್ಲಿ ನಡೆಯುವ ನಡವಳಿಕೆ, ಪ್ರಕಾಶವಾಗಿ ನಡೆಯುವ ನಡವಳಿಕೆ ಎಂದು ಎರಡು ಬಗೆ; ತಮ್ಮ ಶರೀರಕ್ಕೆ ಸಂಬಂಧಪಟ್ಟ ನಡೆವಳಿಕೆ ಎಂಬುದು ಒಂದು ಸೇರಿದರೆ ಅದು ಮೂರು ವಿಧ. ಗಂಡನ ಮನಸ್ಸಿಗೆ ಒಪ್ಪುವಂತೆಯೂ ಔಚಿತ್ಯ ಮೀರದಂತೆಯೂ ಇವುಗಳನ್ನು ಆಚರಿಸಬೇಕು.

೯-೧೦. ತನ್ನ ತಾಯಿ, ತಂದೆ, ಸಹೋದರ, ಸಹೋದರಿ, ಚಿಕ್ಕಪ್ಪ, ಗುರು, ಸೋದರಮಾವ, ಹೆಂಡತಿಯ ಸಹೋದರಿಯ ಗಂಡ (ಷಡ್ಡಕ), ಗಂಡನ ತಾಯಿ (ಅತ್ತೆ), ಸೋದರತ್ತೆ, ಗಂಡನತಂಗಿ (ನಾದನಿ), ತನ್ನ ತಾಯ ತಂಗಿ (ಚಿಕ್ಕಮ್ಮ), ಸಾಕುತಾಯಿ, ಹಿರಿಹೆಂಡತಿಯಾದ ಸವತಿ, ಇವರೆಲ್ಲಾ ಪೂಜ್ಯರ ಗುಂಪಿಗೆ ಸೇರಿದವರು

೧೧. ಮೇಲೆ ಹೇಳಿದವರ ಮಕ್ಕಳು, ತಂಗಿ, ತಮ್ಮ, ಮೈದುನ ಮುಂತಾದವರು ಹೆಂಡತಿಯ ಕಡೆ ಆಪ್ತಜನರು.

೧೨. ಇದಕ್ಕಿಂತ ಅನ್ಯರಾದವರು ತನಗಿಂತ ಕಮ್ಮಿ ಎನಿಸಿ ಆಜ್ಞಾಧಾರಕರಾಗುವರು. ಮಕ್ಕಳು, ತನ್ನ ದಘೂತಿ ಮತ್ತು ಸೌಭಾಗ್ಯ ಇವು ಯಾವಾಗ ತನಗೆ ಸ್ಥಿರವಾಗಿರುವುದಿಲ್ಲವೋ ಆಗ ಈ ಶಾಸನಾದ್ಯಧಿಕಾರದ ವ್ಯಾಪನೆ ಇರುವುದಿಲ್ಲ.

ಯತ್ರಾಪಿ ಗುರುಭರ್ತ್ರೃಣಾಮಾನುಕೂಲ್ಯೇನ ಸರ್ವದಾ ।
ವೃತ್ತಿಃ ಪ್ರಶಸ್ಯತೇ ಸ್ತ್ರೀಣಾಂ ಪೂಜಾಚಾರವಿರೋಧಿನೀ ॥ ೧೩ ॥

ದೇವರೈಃ ಪತಿಮಿತ್ರೈಶ್ಚ ಪರಿಹಾಸಕ್ರಿಯೋಚಿತೈಃ ।
ವಿವಿಕ್ತದೇಶಾವಸ್ಥಾನಂ ವರ್ಜಯೇದತಿನರ್ಮ ಚ ॥ ೧೪ ॥

ಪ್ರಾಯಶೋ ಹಿ ಕುಲಸ್ತ್ರೀಣಾಂ ಶೀಲವಿಧ್ವಂಸಹೇತವಃ ।
ದುಷ್ಟಯೋಗೋ ರಹೋನಿತ್ಯಂ ಸ್ವಾತಂತ್ರ್ಯಮತಿನರ್ಮತಾ ॥ ೧೫ ॥

ದುಷ್ಟಸಂಗೇ ತ್ವರಾಸ್ತ್ರೀಣಾಂ ಯುವಭಿರ್ನರ್ಮ ನೋಚಿತಂ ।
ನಿರ್ಭೀಷತಾ ಸ್ವತಂತ್ರಾಣಾಂ ಸಾಫಲ್ಯಂ ರಹಸಿ ವ್ರಜೇತ್ ॥ ೧೬ ॥

---

೧೩. ತಮ್ಮ ಕುಲಗುರುಗಳು, ಪತಿ, ಇವರುಗಳಿಗೆ ಯಾವಾಗಲೂ ಅನುಕೂಲೆಯಾಗಿ ನಡೆದುಕೊಳ್ಳುವುದು ಸ್ತ್ರೀಯರಿಗೆ ಪ್ರಶಸ್ತವಾದ ನಡವಳಿಕೆ.

೧೪. ಪೂಜೆ ಮುಂತಾದುವನ್ನು ನಡೆಸುವುದಕ್ಕೂ, ಒಳ್ಳೆಯ ಆಚಾರವನ್ನು ಅನುಸರಿಸುವುದಕ್ಕೂ, ಸಮ್ಮತಿಸದೆ ಇರುವುದು, ಮೈದುನನ ಸಂಗಡಲೂ, ಗಂಡನ ಸ್ನೇಹಿತರ ಸಂಗಡಲೂ ವಿನೋದವಾದ ಮಾತುಗಳಲ್ಲಿ ಬೆರೆಯುವುದು, ಯಾವಾಗಲೂ ಜನರಮಧ್ಯೆ ಸೇರದೆ, ಒಂಟಿಯಾಗಿರುವುದು, ಅತಿಯಾದ ಹುಡುಗಾಟಿಕೆ, ಈ ಗುಣಗಳನ್ನು ಉತ್ತಮಸ್ತ್ರೀಯು ಬಿಟ್ಟುಬಿಡಬೇಕು.

೧೫. ನಿತ್ಯವೂ ರಹಸ್ಯದಲ್ಲಿ ದುಷ್ಟರ ಸಂಗಡ ಮಾತಾಡುವುದು, ಸ್ವತಂತ್ರವಾಗಿ ಕಾರ್ಯಗಳಲ್ಲಿ ವರ್ತಿಸುವುದು, ಅತಿಯಾಗಿ ಹುಡುಗಾಟಿಕೆ ಮಾಡುವುದು, ಇವು ಸತ್ಕುಲ ಪ್ರಸೂತೆಯರ ಶೀಲವನ್ನು ಹಾಳುಮಾಡುತ್ತವೆ.

೧೬. ದುಷ್ಟರ ಸಹವಾಸಕ್ಕೆ ತವಕಿಸುವುದು, ಪ್ರಾಯದ ಗಂಡಸಿನೊಡನೆ ಪರಿಹಾಸ, ಕ್ರೀಡೆ, ಇವು ಸ್ತ್ರೀಗೆ ಯಾವಾಗಲೂ ಯುಕ್ತವಲ್ಲ. ಯಥೋಕ್ತವಾದ ಕರ್ಮವನ್ನು ಮಾಡಲು ಇತರರ ಅನುಜ್ಞೆಯನ್ನು ನಿರೀಕ್ಷಿಸದೆ ಸ್ವತಂತ್ರಿಸಬಹುದು ತಪ್ಪದೆ ಅದನ್ನು ತಪ್ಪಿಸದಂತೆ ಗುಟ್ಟಾಗಿಮಾಡಿ ಸಫಲಮಾಡಿಕೊಳ್ಳುವುದು ಮಾತ್ರ ಯುಕ್ತವಾದುದು.

**ಪುಂಸೋ ದುಷ್ಟೇಂಗಿತಾಕಾರಾನ್ ದುಷ್ಟಭಾವಪ್ರಯೋಜಿತಾನ್ ।**
**ಭ್ರಾತೃವತ್ಪಿತೃವಚ್ಚೈತಾನ್ ಪಶ್ಯತೀ ಪರಿವರ್ಜಯೇತ್ ॥ ೧೭ ॥**

**ಪುಂಸೋಽನ್ಯಾಗ್ರಹಮಾಲಾಪಸ್ಮಿತವಿಪ್ರೇಕ್ಷಿತಾನಿ ಚ ।**
**ಕಾಲಾಂತರೇಣ ದ್ರವ್ಯಾಣಾಂ ವಿರುದ್ಧಂ ಗ್ರಹಣಾರ್ಪಣಂ ॥ ೧೮ ॥**

**ದ್ವಾರಪ್ರದೇಶಾವಸ್ಥಾನಂ ರಾಜಮಾರ್ಗಾವಲೋಕನಂ ।**
**ಪ್ರೇಕ್ಷೋದ್ಯಾನಾದಿಶೀಲತ್ವಂ ನಿರುದ್ಧ್ಯಾದ್ದೇಶಮಾಲಯಂ ॥ ೧೯ ॥**

**ಬಹುನಾಂ ದರ್ಶನೇ ಸ್ಥಾನಂ ದೃಷ್ಟಿವಾಕ್ಕಾಯಚಾಪಲಂ ।**
**ಷ್ಠೀವನತ್ವಂ ಸಸೀತ್ಕಾರಮುಚ್ಚೈರ್ಹಸಿತಜಲ್ಪಿತಮ್ ॥ ೨೦ ॥**

---

೧೭. ಪುರುಷರಲ್ಲಿ ದುಷ್ಟಆಶಯವನ್ನೂ ಮನಸ್ಸಿನ ದುರ್ಭಾವನಾ ರೂಪ ನಿಮಿತ್ತಗಳಿಂದ ತೋರುವ ಮುಖರಾಗಾದಿ ಚೇಷ್ಟೆಗಳನ್ನೂ ಕಂಡಾಗ ಅವರನ್ನು ತಂದೆ ಅಥವಾ ಸಹೋದರರಂತೆ ಭಾವಿಸಿ ಈ ವಿಚಾರವನ್ನು ಮನಸ್ಸಿಗೆ ಹಚ್ಚಿಕೊಳ್ಳದೆ ವರ್ಜಿಸಬೇಕು.

೧೮. ತನ್ನ ಪುರುಷನು ಇತರಳನ್ನು ಸ್ವೀಕರಿಸುವುದು, ಪರಸ್ತ್ರೀಯೊಡನೆ ಸಲ್ಲಾಪಮಾಡುವುದು, ಅವರ ಸೊಬಗನ್ನು ನಗೆಗೂಡಿ ಕಣ್ತುಂಬ ನೋಡುವುದು; ಇವನ್ನು ಕಂಡರೂ ಕಾಣದಂತಿರಬೇಕು. ವಾಯಿದೆ ಗೊತ್ತುಮಾಡಿ ಹಣವನ್ನು ಕೊಡುವುದು, ತೆಗೆದುಕೊಳ್ಳುವುದು, ಮೊದಲಾದ ವ್ಯವಹಾರವು ಸ್ತ್ರೀಯರಿಗೆ ವಿರುದ್ಧವಾದ ನಡವಳಿಕೆಗಳು.

೧೯. ಹಲವರ ದೃಷ್ಟಿಗೆ ಬೀಳುವಂತೆ ಬಾಗಿಲಬಳಿಯೇ ನಿಂತಿರುವುದು, ರಾಜಬೀದಿಯಲ್ಲಿ ಹೋಗುವವರು ಬರುವವರನ್ನೆಲ್ಲಾ ನೋಡುತ್ತಿರುವುದು, ಉದ್ಯಾನದಲ್ಲಿ ವಿಹಾರ ಮಾಡುವುದು, ಈ ಗುಣಗಳು ಸ್ತ್ರೀಯರಲ್ಲಿ ಉಂಟಾಗದಂತೆ ಪುರುಷನು ತಡೆಯಬೇಕು.

೨೦. ಅನೇಕರ ದೃಷ್ಟಿಗೆ ಬೀಳುವ ಸ್ಥಳದಲ್ಲಿ ನಿಂತುಕೊಳ್ಳುವುದು, ಚಾಂಚಲ್ಯದಿಂದ ನೋಡುವುದು, ಚಾಂಚಲ್ಯದಿಂದ ಮಾತನಾಡುವುದು, ಅಂಗಚೇಷ್ಟೆ ಮಾಡುವುದು, ಸುಮ್ಮಸುಮ್ಮನೆ ಕೇಕರಿಸಿ ಉಗುಳುವುದು, ಶಬ್ದಕೇಳುವಂತೆ ಸೀತ್ಕಾರಮಾಡುವುದು, ಗಟ್ಟಿಯಾಗಿ ನಗುವುದು, ಗಟ್ಟಿಗಟ್ಟಿಯಾಗಿ ಮಾತನಾಡುವುದು ಇವೆಲ್ಲಾ ಕೆಟ್ಟಸ್ವಭಾವ.

ಸಾಂಗತ್ಯಂ ಲಿಂಗಿದುಷ್ಟಸ್ತ್ರೀಭಿಕ್ಷುಕೀಕ್ಷಣಿಕಾದಿಭಿಃ ।
ಮಂತ್ರ ಮಂಡಲದೀಕ್ಷಾಯಾಂ ಸಕ್ತಿಃ ಸಂವಸನೇಷು ಚ ॥ ೨೧ ॥

ಇತ್ಯೇವಮಾದಿದುರ್ವೃತ್ತಂ ಪ್ರಾಯೋದುಷ್ಟಜನೋಚಿತಂ ।
ವರ್ಜಯೋತ್ಪರಿರಕ್ಷಂತೀ ಕುಲತ್ರಿತಯವಾಚ್ಯತಾಂ ॥ ೨೨ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸ್ತ್ರೀದುರ್ವೃತ್ತ ವರ್ಣನಂ ನಾಮ ದಶಮೋಽಧ್ಯಾಯಃ



೨೧. ವೇಷಧಾರಿಗಳು, ದುಷ್ಟಹೆಂಗಸು, ಉಪಾದಾನದ ಹೆಂಗಸರು, ಆಟಗಾತಿಯರಾದ ಸ್ತ್ರೀಯರು ಇವರೊಡನೆ ಸೇರುವುದು, ಕೇಡಿನ ಆಲೋಚನೆ ಮಾಡುವುದಕ್ಕಾಗಿ ಕೂಡಿದವರ ಗುಂಪಿಗೆ ಸೇರುವುದು, ಮತ್ತು ವಿವಿಧವಾದ ಉಡಿಗೆಗಳನ್ನು ಉಡುವ ಆಸಕ್ತಿ.

೨೨. ಇವು ಮೊದಲಾದ ದುರ್ನಡತೆಯು ಕೆಟ್ಟವರಿಗೆ ತಕ್ಕದ್ದು. ಆದ್ದರಿಂದ ಇವನ್ನು ಬಿಡಬೇಕು. ಹಾಗೆ ಬಿಡದೆ ಈ ಗುಣಗಳನ್ನೇ ಕಾಪಾಡಿಕೊಂಡಿರತಕ್ಕವಳು, ತನ್ನ ತಾಯಿಯ ವಂಶ, ತಂದೆಯ ವಂಶ, ತನ್ನ ಪತಿಯ ವಂಶ ಇವುಗಳಲ್ಲೆಲ್ಲಾ ನಿಂದೆಗೆ ಗುರಿಯಾಗುತ್ತಾಳೆ.

ಎಂಬಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಸ್ತ್ರೀದುರ್ವೃತ್ತ ವರ್ಣನವೆಂಬ ಹತ್ತನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಏಕಾದಶೋಽಧ್ಯಾಯಃ

॥ ಬ್ರಹ್ಮೋವಾಚ ॥

ಯಾ ಪತಿಂ ದೈವತಂ ಪಶ್ಯೇತ್ ಮನೋವಾಕ್ಕಾಯ ಕರ್ಮಭಿಃ ।
ತಚ್ಛರೀರಾರ್ಧಜಾತೇವ ಸರ್ವದಾ ಹಿತಮಾಚರೇತ್ ॥ ೧ ॥

ತತ್ಪ್ರಿಯಾಂ ಪ್ರಿಯವತ್ಪಶ್ಯೇತ್ ತದ್ದ್ವೇಷ್ಯಾಂ ದ್ವೇಷ್ಯವತ್ಸದಾ ।
ಅಧರ್ಮಾನರ್ಥಯುಕ್ತೇಭ್ಯೋಽಯುಕ್ತಾ ಚಾಸ್ಯನಿವರ್ತತೇ ॥ ೨ ॥

ಪ್ರಿಯಂ ಕಿಮಸ್ಯ ಕಿಂಪಥ್ಯಂ ಸಾಮ್ಯಂಚಾಸ್ಯ ಕಥಂ ಭವೇತ್ ।
ಜ್ಞಾತ್ವೈವಂ ಸರ್ವಭೃತ್ಯೇಷು ನಪ್ರಮಾದ್ಯೇತ ವೈ ದ್ವಿಜಾಃ ॥ ೩ ॥

---

## ಹನ್ನೊಂದನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ--ತನ್ನ ಗಂಡನೇ ದೇವರೆಂದು ತ್ರಿಕರಣಪೂರ್ವಕವಾಗಿ ತಿಳಿಯುತ್ತಾ ಪತಿಯ ಅರ್ಧ ಶರೀರವೆನಿಸಿರುವ ಪತ್ನಿಯು ಯಾವಾಗಲೂ ಪತಿಗೆ ಹಿತವನ್ನೇ ಮಾಡಬೇಕು.

೨. ಆತನಿಗೆ ಪ್ರಿಯಳಾದ ಸ್ತ್ರೀಯನ್ನು ತಾನೂ ವಿಶ್ವಾಸವಾಗಿ ಕಾಣುತ್ತಲೂ ಅವನಿಗೆ ಬೇಡದವಳನ್ನು ತಾನೂ ದ್ವೇಷಿಸಬೇಕು. ಪತಿಗೆ ಅಧರ್ಮಪ್ರಾಪಕಗಳೂ, ಅನರ್ಥ ಪ್ರಾಪಕಗಳೂ, ಆಗಿರುವ ಕೆಲಸಗಳನ್ನು ತಾನೂ ಮಾಡದೆ ತಟಸ್ಥಳಾಗಬೇಕು

ಓ.ಬ್ರಾಹ್ಮಣರೇ! ಕೇಳಿ, ಯಾವುದು ಇವನಿಗೆ ಇಷ್ಟ, ಯಾವುದು ಪತಿ ಶರೀರಕ್ಕೆ ಹಿತ, ಎಂಬುದನ್ನರಿತು, ಯಾವುದು ಪ್ರಿಯವೂ ಮತ್ತು ಪಥ್ಯವೂ ಆಗಿರುತ್ತದೋ, ಅಂಥದ್ದನ್ನೇ ಮಾಡಬೇಕು. ಕೈಕೆಳಗಿನ ಎಲ್ಲ ಆಳುಗಳ ವಿಷಯದಲ್ಲಿಯೂ,

ದೇವತಾ ಪಿತೃಕಾರ್ಯೇಷು ಭರ್ತುಃ ಸ್ನಾನಾಶನಾದಿಷು ।
ಸತ್ಕಾರೇಽಭ್ಯಾಗತಾನಾಂ ಚ ಯಥೌಚಿತ್ಯಂ ನ ಹಾಪಯೇತ್ ॥ ೪ ॥

ವೇಶ್ಮಾತ್ಮಾ ಚ ಶರೀರಂ ಹಿ ಗೃಹಿಣೀನಾಂ ದ್ವಿಧಾ ಕೃತಂ ।
ಸಂಸ್ಕರ್ತವ್ಯಂ ಪ್ರಯತ್ನೇನ ಪ್ರಥಮಂ ಪಶ್ಚಿಮಾದಪಿ ॥ ೫ ॥

ಕೃತ್ವಾ ವೇಶ್ಮಸುಸಂಮೃಷ್ಟಂ ತ್ರಿಕಾಲವಿಹಿತಾರ್ಚನಂ ।
ವೃತ್ತಕರ್ಮೋಪಭೋಗಾನಾಂ ಸಂಸ್ಕರ್ತವ್ಯಂ ಯಥೋಚಿತಂ ॥ ೬ ॥

ಪ್ರಾತರ್ಮಧ್ಯಾಪರಾಹ್ಣೇತು ಬಹಿರ್ಮಧ್ಯಾಂತರೇಷು ಚ ।
ಗೃಹಸಂಮಾರ್ಜನಂ ಕೃತ್ವಾ ನಿಷ್ಕಾರಾನ್ನನಿಶಿ ಕ್ಷಿಪೇತ್ ॥ ೭ ॥

---

ಯಜಮಾನನ, ಪ್ರಿಯ ಹಿತಗಳನ್ನು ಅನುಸರಿಸಿ ಎಚ್ಚರ ತಪ್ಪದೆ (ಮೋಸ ಹೋಗದೆ) ಇರಬೇಕು.

೪. ದೇವಕಾರ್ಯ, ಪಿತೃಕಾರ್ಯಗಳಲ್ಲಿಯೂ, ಪತಿಯ ಸ್ನಾನ ಭೋಜನ ಮೊದಲಾದುವುಗಳಲ್ಲಿಯೂ, ಅಭ್ಯಾಗತರನ್ನು ಸತ್ಕರಿಸುವುದರಲ್ಲಿಯೂ ಔಚಿತ್ಯವನ್ನು ಮೀರಬಾರದು.

೫. ಗೃಹಿಣಿಯರಿಗೆ ಶರೀರವೆಂಬುದು ಅವಳು ವಾಸಿಸುವ ಮನೆ, ಅವಳ ಜೀವ, ಎಂದು ಎರಡು ಪ್ರಕಾರ ವಿಭಾಗವಾಗಿದೆ. ತನ್ನ ಶರೀರಕ್ಕೆ ಸಂಸ್ಕಾರಮಾಡಿಕೊಳ್ಳುವದಕ್ಕಿಂತ ಮುಂಚೆ ಪ್ರಯತ್ನ ಪೂರ್ವಕವಾಗಿ ಮನೆಗೆ ಸಂಸ್ಕಾರವಾಗಬೇಕು.

೬. ಬೆಳಗ್ಗೆ, ಮಧ್ಯಾಹ್ನ, ಸಂಜೆ ಈ ಮೂರು ವೇಳೆಗಳಲ್ಲೂ ಮನೆಯನ್ನು ಚೆನ್ನಾಗಿ ಗುಡಿಸಿ, ಹೊಸಲು ಪೂಜೆ ಮುಂತಾದ್ದನ್ನು ಮಾಡಿದ ಮೇಲೆ, ಗೃಹಿಣೀ ಕರ್ತವ್ಯ, ಮನೆಗೆಲಸ, ಕೆಲಸದ ಯೋಗ್ಯತೆ ಇವಕ್ಕೆ ತಕ್ಕಂತೆಯೂ, ತಮ್ಮ ಉಪಭೋಗಕ್ಕೆ ತಕ್ಕಂತೆಯೂ ಸರಿಪಡಿಸಬೇಕು.

೭. ಬೆಳಗ್ಗೆ, ಮಧ್ಯಾಹ್ನ, ಅಪರಾಹ್ನ ಈ ಮೂರು ವೇಳೆಯಲ್ಲೂ ಒಳಗೂ, ಹೊರಗೂ, ಮನೆಯೆಲ್ಲವನ್ನೂ, ಚೊಕ್ಕಟವಾಗಿ ಗುಡಿಸಬೇಕು. ಹೀಗೆ ಗುಡಿಸಿದ ಕಸವನ್ನು ಕತ್ತಲಾಗುವುದಕ್ಕೆ ಮುಂಚೆ ಹೊರಗೆ ಎಸೆಯಬೇಕು. ರಾತ್ರಿಯ ವೇಳೆಯಲ್ಲಿ ಕಸವನ್ನು ಹೊರಗೆ ಹಾಕಬಾರದು.

**ಗೋ ಮಹಿಷ್ಯಾದಿ ಶಾಲಾನಾಂ ತತ್ಪುರೀಷಾದಿ ಮಾತ್ರಕಂ ।**
**ವ್ಯಪನೇಯಂ ತು ಯತ್ನೇನ ಸಮ್ಮಾರ್ಜನ್ಯಾ ಪ್ರಸಾಧನಂ ॥ ೮ ॥**

**ದಾಸಕರ್ಮಕರಾದೀನಾಂ ಬಾಹ್ಯಾಭ್ಯಂತರಚಾರಿಣಾಂ ।**
**ಪೋಷಣಾದಿ ವಿಧಿಂ ವಿದ್ಯಾದನುಷ್ಠಾನಂ ಚ ಕರ್ಮಸು ॥ ೯ ॥**

**ಶಾಕಮೂಲ ಫಲಾದೀನಾಂ ವಲ್ಲೀನಾಮೌಷಧಸ್ಯ ಚ ।**
**ಸಂಗ್ರಹಃ ಸರ್ವಬೀಜಾನಾಂ ಯಥಾಕಾಲಂ ಯಥಾಬಲಂ ॥ ೧೦ ॥**

**ತಾಮ್ರ ಕಾಂಸ್ಯಾಯಸಾದೀನಾಂ ಕಾಷ್ಠ ವೇಣುಮಯಸ್ಯ ಚ ।**
**ಮೃನ್ಮಯಾನಾಂ ಚ ಭಾಂಡಾನಾಂ ವಿವಿಧಾನಾಂ ಚ ಸಂಗ್ರಹಂ ॥ ೧೧ ॥**

**ಕುಂಡಕಾದಿ ಜಲದ್ರೋಣ್ಯಾ ಕಲಶೋದಂ ಚ ತಾಲುಕಾಃ ।**
**ಶಾಕಪಾತ್ರಾಣ್ಯನೇಕಾನಿ ಸ್ನೇಹಾನಾಂ ಗೋರಸಸ್ಯ ಚ ॥ ೧೨ ॥**

---

೮. ದನ, ಎಮ್ಮೆ ಮುಂತಾದ್ದರ ಕೊಟ್ಟಿಗೆಗಳಲ್ಲಿ ಬಿದ್ದಿರುವ ಸಗಣಿ, ಗಂಜಲವನ್ನು ತೆಗೆದು, ಪರಕೆಯಿಂದ ಚೊಕ್ಕಟವಾಗಿ ಗುಡಿಸಿ, ನೋಡುವುದಕ್ಕೆ ಚೆನ್ನಾಗಿ ಕಾಣುವಂತೆ ಮಾಡಬೇಕು.

೯. ಮನೆಯ ಒಳಗೂ, ಹೊರಗೂ, ತಿರುಗಾಡುವ ಭೃತ್ಯರು (ಜೀತಗಾರರು) ಕೂಲಿಗಾರರು ಇವರಿಗೆ ಸರಿಯಾಗಿ ಜೀವನಕ್ಕೆ ಕೊಟ್ಟು, ಹೇಗೆ ಪೋಷಿಸಬೇಕೆಂಬುದನ್ನೂ ಅವರಿಂದ ಹೇಗೆ ಕೆಲಸ ತೆಗೆಯಬೇಕೆಂಬುದನ್ನೂ ತಿಳಿದುಕೊಳ್ಳಬೇಕು.

೧೦. ಕಾಯಿಸೊಪ್ಪು, ಗೆಡ್ಡೆಗೆಣಸು, ಹಣ್ಣುಹಂಪಲು ಮುಂತಾದುವುಗಳನ್ನೂ ರೋಗ ಪರಿಹಾರಕವಾದ ಮೂಲಿಕೆಗಳನ್ನೂ ಎಲ್ಲಾ ಬಗೆಯ ಬೀಜಗಳನ್ನೂ, ಆಯಾ ವಸ್ತುಗಳು ದೊರಕುವ ಕಾಲದಲ್ಲಿ ಶಕ್ತ್ಯನುಸಾರವಾಗಿ ಸಂಗ್ರಹಿಸಬೇಕು.

೧೧. ತಾಮ್ರ, ಕಂಚು, ಕಬ್ಬಿಣ ಮುಂತಾದ ಲೋಹದ ಪದಾರ್ಥಗಳನ್ನೂ, ಮಣೆ, ಮಂಚ, ಮರಿಗೆ ಮೊದಲಾದ ಮರದ ಸಾಮಾನುಗಳನ್ನೂ, ಮೊರ, ಮಂದರಿ, ಅಂಡೆ, ಏಣಿ ಮುಂತಾದ ಬಿದಿರುಸಾಮಾನುಗಳನ್ನೂ, ಮಡಿಕೆ, ಕುಡಿಕೆ, ಮುಂತಾದ ಬಗೆಬಗೆಯ ಮಣ್ಣಿನ ಪಾತ್ರೆಗಳನ್ನೂ, ಆವಶ್ಯಕತೆಗೆ ತಕ್ಕಂತೆ ಸಂಗ್ರಹಿಸಬೇಕು.

೧೨-೧೫. ದೊಡ್ಡಮಡಕೆ, ಸಸಿಗಳಿಗೆ ನೀರೆರೆಯುವ ಮಣ್ಣಿನ ಧಾರಾಪಾತ್ರೆ, ನೀರೆರೆಯುವ ಹರವಿಗಳು, ಅನೇಕ ಅಡಿಗೆಯ ಪಾತ್ರೆಗಳು, ಹಾಲು ಮೊಸರಿನ ಪಾತ್ರೆ

ಮುಸಲಂ ಕಂಡನೀಯಂ ತು ಯಂತ್ರಕಂ ಶೂರ್ಪವರ್ಧಿನೀ ।
ದೋಹನ್ಯೋ ನೇತ್ರಕಂ ಮಂಥಾ ಮಂಡನ್ಯಃ ಶೃಂಖಲಾನಿ ಚ ॥ ೧೩ ॥

ಸದಂಶಃ ಕುಂಡಿಕಾ ಶೂಲಾ ಪಟ್ಟಪಿಪ್ಪಲಕೋ ದೃಷತ್ ।
ಡಾವಿಕಾ ಹಸ್ತಕೋ ದರ್ವೀ ಭ್ರಾಷ್ಟಸ್ಫುಟಿಲಕಾನಿ ಚ ॥ ೧೪ ॥

ತುಲಾಪ್ರಸ್ಥಾದಿ ಮಾನಾನಿ ಮಾರ್ಜನ್ಯಃ ಪಿಟಕಾನಿ ಚ ।
ಸರ್ವಮೇತತ್ಪ್ರಕುರ್ವೀತ ಪ್ರಯತ್ನೇನ ಚ ಸರ್ವದಾ ॥ ೧೫ ॥

ಹಿಂಗ್ವಾದಿಕಮಥೋ ಜಾಜೀ ಪಿಪ್ಪಲ್ಯೋ ಮರಿಚಾನಿ ಚ ।
ರಾಜಿಕಾ ಧಾನ್ಯಕಂ ಶುಂಠೀ ತ್ರಿಚತುರ್ಜಾತಕಾನಿ ಚ ॥ ೧೬ ॥

ಲವಣಂ ಕ್ಷಾರವರ್ಗಾಶ್ಚ ಸೌವೀರಕಪರೂಷಕೌ ।
ದ್ವಿದಲಾಮಲಕಂ ಚಿಂಚಾ ಸರ್ವಾಶ್ಚ ಸ್ನೇಹಜಾತಯಃ ॥ ೧೭ ॥

ಶುಷ್ಕಕಾಷ್ಠಾನಿ ವಲ್ಲೂರಮರಿಷ್ಟಾ ಪಿಷ್ಟಮಾಷಯೋಃ ।
ವಿಕಾರಾಃ ಪಯಸಶ್ಚಾಪಿ ವಿವಿಧಾಃ ಕಂದಜಾತಯಃ ॥ ೧೮ ॥

ನಿತ್ಯ ನೈಮಿತ್ತಿಕಾನಾಂ ಹಿ ಕಾರ್ಯಾಣಾಮುಪಯೋಗತಃ ।
ಸರ್ವಮಿತ್ಯಾದಿ ಸಂಗ್ರಾಹ್ಯಂ ಯಥಾವದ್ವಿಭವೋಚಿತಂ ॥ ೧೯ ॥

---

ಗಳು, ಎಣ್ಣೆ ತುಪ್ಪದ ಮಗೆಗಳು. ಒನಕೆ, ಇಳಿಗೆಮಣೆ, ಬೀಸುವಕಲ್ಲು, ಮಂದರಿ, ಹಾಲು ಕರೆಯುವ ಪಾತ್ರೆ, ಸೋಸುವ ಬಟ್ಟೆ, ಕಡೆಯುವ ಮಂತು, ಕೆನೆಯನ್ನು ಕೂಡಿಡುವ ಪಾತ್ರೆ, ಮೊಸರು ಕಡೆಯುವ ಹಗ್ಗ, ಸೌಟು, ಹುರಿಯುವ ಓಡು, ನೊಗಚುವ ಕೈ, ತಕ್ಕಡಿ, ಸೇರು, ಪಾವು ಮುಂತಾದ ಅಳತೆಯ ಸಾಧನಗಳು. ಗುಡಿಸುವ ಸಾಧನ, ಮಂಕರಿ, ಬುಟ್ಟಿ ಮೊದಲಾದುವು. ಇವೆಲ್ಲವನ್ನೂ ಆಯಾ ಕಾಲಕ್ಕೆ ಪ್ರಯತ್ನ ಪಟ್ಟು ಸಿದ್ಧಮಾಡಿಕೊಳ್ಳಬೇಕು.

೧೬-೧೯. ಉಪ್ಪು, ಮೆಣಸಿನಕಾಯಿ, ಮುಂತಾದ ಕ್ಷಾರ ದ್ರವ್ಯಗಳು, ವಿವಿಧ ವಾದ ಬೇಳೆಗಳು, ನಲ್ಲಿಯಕಾಯಿ, ಹುಳಿಹಣ್ಣು ಮುಂತಾದ ವಸ್ತುಗಳು, ಮತ್ತು ನಾನಾಬಗೆಯಾದ ಎಣ್ಣೆಯ ಬೀಜಗಳು, ಒಣಸೌದೆ, ಒಣಗಿದಮಾಂಸ, ಉದ್ದಿನ ಹಿಟ್ಟು, ಈರುಳ್ಳಿ, ಬೆಳ್ಳುಳ್ಳಿ, ಮುಂತಾದ ನಾನಾಬಗೆಯ ಗೆಡ್ಡೆಗಳು. ನಿತ್ಯಗಟ್ಟಲೆಯ ಕೆಲಸಗಳ ಮತ್ತು ಹೆಚ್ಚುಗಟ್ಟಲೆಯ ಕೆಲಸಗಳ ಉಪಯೋಗಕ್ಕಾಗಿ ಇವೆಲ್ಲವನ್ನೂ ಹೇಗಾದರೂ ತಮ್ಮ ಅನುಕೂಲಕ್ಕೆ ತಕ್ಕಷ್ಟು ಮಟ್ಟಿಗೆ ಕೂಡಿಹಾಕಿಕೊಳ್ಳಬೇಕು.

**ಯತ್ಕಾರ್ಯಾಣಾಂ ಸಮುತ್ಪತ್ತಾವುಪಾಹರ್ತುಂ ನ ದೃಶ್ಯತೇ ।**
**ತತ್ಪ್ರಾಗೇವ ಯಥಾಯೋಗ್ಯಂ ಸಂಗೃಹ್ಣೀಯಾತ್ ಪ್ರಯತ್ನತಃ ॥ ೨೦ ॥**

**ಧಾನ್ಯಾನಾಂ ಘೃಷ್ಟಪಿಷ್ಟಾನಾಂ ಕ್ಷುಣ್ಣೋಪಹತಯೋರಪಿ ।**
**ಭೃಶಂ ಶುಷ್ಕಾದ್ರ್ರಸಿದ್ಧಾನಾಂ ಕ್ಷಯವೃದ್ಧೀ ನಿರೂಪಯೇತ್ ॥ ೨೧ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಗೃಹಧರ್ಮ ವರ್ಣನಂ ನಾಮ ಏಕಾದಶೋಽಧ್ಯಾಯಃ**



---

೨೦. ಕೆಲಸಕ್ಕೆ ಅವಶ್ಯವಾದಾಗ ಈ ವಸ್ತುಗಳನ್ನು ಹೊಸದಾದ್ದನ್ನು ತರುವುದಕ್ಕೆ ಸಾಧ್ಯವಿಲ್ಲದೇ ಹೋದರೆ ಅದು ದೊರೆಯುವಾಗಲೇ ಮುಂಚಿತವಾಗಿಯೇ ಹಳೆಯವನ್ನಾದರೂ ಪ್ರಯತ್ನಿಸಿ ಸಂಗ್ರಹಿಸಬೇಕು.

೨೧. ಅರೆಯುವುದು, ಕುಟ್ಟುವುದು, ಬೀಸುವುದು ಇವುಗಳಲ್ಲಿ ಒಣಗಿದ ಪದಾರ್ಥಗಳ ಮತ್ತು ಹಸಿಯ ಪದಾರ್ಥಗಳ ಹೆಚ್ಚುವಿಕೆ, ತಗ್ಗುವಿಕೆಗಳನ್ನು ನೋಡಿಕೊಳ್ಳಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಗೃಹಧರ್ಮ ವರ್ಣನೆಯೆಂಬ ಹನ್ನೊಂದನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ದ್ವಾದಶೋಽಧ್ಯಾಯಃ

॥ ಬ್ರಹ್ಮೋವಾಚ ॥

ವ್ರೀಹೀಣಾಂ ಕೋದ್ರವಾಣಾಂ ಚ ಸಾರಮರ್ಧಮುದಾಹೃತಂ ।
ಕಂಗು ಕ್ರೋದವಯೋಜ್ಞೇಯೋ ವರಟಃ ಪಂಚಭಾಗಕಃ ॥ ೧ ॥

ಪಂಚಭಾಗಾನ್ ಪ್ರಿಯಂಗೂನಾಂ ಶಾಲೀನಾಂ ಚ ತ್ರಯೋಽಷ್ಟ ಚ ।
ಚಣಕಾನಾಂ ತೃತೀಯಾಂಶಃ ಸಮುಕ್ಷುಣ್ಣಂ ತ್ರಯಂ ವಿದುಃ ॥ ೨ ॥

ಪಾನೀಯಯವಗೋಧೂಮಂ ಪಿಷ್ಟಧಾನ್ಯ ಚತುಷ್ಟಯಂ ।
ತುಲ್ಯಮೇವಾಗಂತವ್ಯಂ ಮುದ್ಗಾ ಮಾಷಾಸ್ತಿಲಾ ಯವಾಃ ॥ ೩ ॥

---

### ಹನ್ನೆರಡನೆಯ ಅಧ್ಯಾಯ

೧-೩. ಬ್ರಹ್ಮನು ಹೇಳುತ್ತಾನೆ—ಭತ್ತ, ಹಾರಕ, ಈ ಧಾನ್ಯಗಳಲ್ಲಿ ನಿಸ್ಸಾರವಾದ ಹೊಟ್ಟುಹೋದರೆ ಉಳಿದ ಅರ್ಧವು ಸಾರವತ್ತಾದ ಭಾಗವೆಂದು ಹೇಳಿದೆ. ಕಂಗು ಎಂಬ ನವಣೆಯಲ್ಲಿಯೂ, ಕೆಲವು ಹಾರಕ, ಬಿದಿರಕ್ಕಿ ಇವುಗಳಲ್ಲಿಯೂ ಐದನೆಯ ಒಂದುಭಾಗವು ಮಾತ್ರ ಸಾರವತ್ತಾದುದೆಂದು ಹೇಳುತ್ತಾರೆ. ಪ್ರಿಯಂಗು ಎಂಬ ನವಣೆಯಲ್ಲಿಯ ಐದನೆಯ ಒಂದುಭಾಗವೇ ಸಾರವತ್ತಾದ ನವಣೆಯಅಕ್ಕಿ, ಭತ್ತದಲ್ಲಿ ಮೂರರಲ್ಲೊಂದುಭಾಗ ಶ್ರೇಷ್ಠವಾದ ಅಕ್ಕಿಯೂ, ಎಂಟನೆಯ ಒಂದುಭಾಗವು ನುಚ್ಚು ಅಕ್ಕಿಯೂ ಸಾರವಾದುವು, ಕಡಲೆಯಲ್ಲೂ ಮೂರರಲ್ಲೊಂದು ಅಂಶ ಸಾರವಾದ ಭಾಗ ದೊರೆವುದು. ಸಮವಾದ ಅಳತೆಯ ಇವನ್ನು ಬೀಸಿದರೆ ಸಾರವಸ್ತುವು ಒಂದೇ ಸಮ ಅಳತೆಯಾಗಿ ಬರುವುದು. ಗಂಜಿಮಾಡಲು ಅರ್ಹವಾದ ಅಕ್ಕಿಯತರಿ ಅಥವಾ ಯವಧಾನ್ಯ, ಗೋಧುವೆ, ಮತ್ತು ಹಿಟ್ಟುಮಾಡಲು ಯೋಗ್ಯವಾದ ಹೆಸರು, ಉದ್ದು, ಅಕ್ಕಿ ಈ ಧಾನ್ಯಗಳು ಸಮನಾದ ಸಾರವುಳ್ಳದ್ದೆಂದು ತಿಳಿಯಬೇಕು.

ಪಂಚಭಾಗಾಧಿಕಾ ಘೃಷ್ಟಾ ಗೋಧುಮಾಃ ಸಕ್ತವಸ್ತಥಾ ।
ಕುಲ್ಮಾಷಾ ಪಿಷ್ಟಮಾಂಸಂ ಚ ಸಮ್ಯಗರ್ಧಾಧಿಕಂ ಭವೇತ್ ॥ ೪ ॥

ಸಿದ್ಧಂ ತದೇವ ದ್ವಿಗುಣಂ ಪುನ್ನಾಕೋಯಾವಕಸ್ತಥಾ ।
ಕಂಗುಕೋದ್ರವಯೋರನ್ನಂ ಚಣಕೋದಾರಕಸ್ಯ ಚ ॥ ೫ ॥

ದ್ವಿಗುಣಂ ಚೀನಕಾನಾಂ ಚ ವ್ರಿಹೀಣಾಂ ಚ ಚತುರ್ಗುಣಂ ।
ಶಾಲೇಃ ಪಂಚಗುಣಂ ವಿದ್ಯಾತ್ ಪುರಾಣೇತ್ವತಿರಿಚ್ಯತೇ ॥ ೬ ॥

ಕ್ರಿಯೋಪಾಕವಿಶೇಷಾಸ್ತು ವೃದ್ಧಿರೇವೋಪದಿಶ್ಯತೇ ।
ನಿಮಿತ್ತಸ್ಯ ವರಾನ್ನಸ್ಯ ತದ್ವೃದ್ಧಿರ್ದ್ವಿಗುಣಾ ಭವೇತ್ ॥ ೭ ॥

ತಸ್ಮಾದ್ಭೂಯೋ ವಿರೂಢಸ್ಯ ಚತುರ್ಭಾಗೋ ವಿವರ್ಧತೇ ।
ಲಾಜಾಃ ಧಾನಾಃ ಕಲಾಯಾಶ್ಚ ಭೃಷ್ಟಾದ್ದ್ವಿಗುಣ ವೃದ್ಧಯಃ ॥ ೮ ॥

---

೪-೭. ಗೋದುವೆ ಮುಂತಾದ್ದನ್ನು ಬೀಸಿದರೆ ಹಿಟ್ಟು ಐದನೇ ಒಂದುಪಾಲಷ್ಟು ಹೆಚ್ಚಾಗಿ ಬರುವುದು. ಅಲಸಂದೆ, ಉದ್ದು ಇವುಗಳ ಹಿಟ್ಟು ಅರ್ಧಕ್ಕಿಂತ ಹೆಚ್ಚಾಗಿ ಬರುವುದು. ಪುನ್ನಾಕ ಯಾವಕ ಎಂಬ ಧಾನ್ಯ ವಿಶೇಷಗಳು ನವಣೆ ಹಾರಕ ಮತ್ತು ಕಡಲೆ ಇವನ್ನು ಬೀಸಿದರೆ ಎರಡರಷ್ಟು ಹೆಚ್ಚಾಗುತ್ತದೆ. ಚೀಣಾಭತ್ತದ ಅಕ್ಕಿ ಮತ್ತು ಇತರ ಕೆಲವು ಭತ್ತದ ಅಕ್ಕಿಗಳನ್ನು ಬೇಯಿಸಿದಾಗ ಐದರಷ್ಟು ಹುಲುಸುವುದು. ಅಕ್ಕಿಯು ಹಳೆಯದಾದರೆ ಇನ್ನೂ ಹೆಚ್ಚಾಗಿ ಹುಲುಸುವುದು. ಉತ್ತಮವಾದ ರೀತಿಯಲ್ಲಿ ಅಡಿಗೆ ಬರುವವರು ಅಡಿಗೆಮಾಡಿದರೆ ಇನ್ನೂ ಹುಲುಸಾಗುವುದು. ಸರಿಯಾದ ಹದದಿಂದ ತಯಾರಿಸಿದ ಅನ್ನವು ಹದ ಕೆಡಸಿಮಾಡಿದ್ದರ ಎರಡರಷ್ಟಕ್ಕಿಂತ ಹೆಚ್ಚಾಗಿ ಬರುವುದು.

೮. ಇನ್ನೂ ಚೆನ್ನಾಗಿ ಹುಲುಸಾದ ಪೈರಿನಿಂದ ಬರುವ ಭತ್ತದಿಂದಮಾಡಿದ ಅಕ್ಕಿಯನ್ನು ಬೇಯಿಸಿದರೆ ಅದು ನಾಲ್ಕರಷ್ಟು ಹೆಚ್ಚಾಗುವುದು. ಭತ್ತದಿಂದ ಅರಳು ಹುರಿದರೂ ಕುದುಪಲಕ್ಕಿಯಿಂದ ಪುರಿ ಹುರಿದರೂ ನಾಲ್ಕರಷ್ಟು ಹೆಚ್ಚುವುದು. ನೆಲಗಡಲೇ ಬೀಜವನ್ನು ಹುರಿದರೆ ಅವು ಎರಡರಷ್ಟು ಹೆಚ್ಚಾಗುವುವು.

ಭ್ರೃಷ್ಟವ್ಯಾ ನಾಮತೋನ್ಯೇಷಾಂ ಪಂಚಭಾಗೋಧಿಕೋ ಮತಃ ।
ಚಾಪಕಾನಾಂ ಚ ಪಿಷ್ಟಾನಾಂ ಪಾದಹೀನಾಃ ಕಲಾಯಜಾಃ ॥ ೯ ॥

ಮುದ್ಗ ಮಾಷ ಮಸೂರಾಣಾಂ ಅರ್ಧಪಾದಾವರೋ ಭವೇತ್ ।
ಕ್ಲಿನ್ನ ಶುಷ್ಕ ವರಾನ್ನಾನಾಂ ಹಾನಿವೃದ್ಧಿರ್ವಿಶಿಷ್ಯತೇ ॥ ೧೦ ॥

ತಥಾರ್ಧೇನ ತು ಶೋಧ್ಯಾನಾಮಾಢಕ್ಯಾ ಮುದ್ಗಮಾಷಯೋಃ ।
ಮಸೂರಾಣಾಂ ಚ ಜಾನೀಯಾತ್ ಕ್ಷಯಂ ಪಂಚಮಭಾಗಕಂ ॥ ೧೧ ॥

ಷಡ್ಭಾಗೇನಾತಸೀತೈಲಂ ಸಿದ್ಧಾರ್ಥಕ ಕಪಿತ್ಥಯೋಃ ।
ತದಾ ನಿಂಬ ಕುಸುಂಭಾದೇಃ ವಿದ್ಯಾತ್ಪಂಚಮ ಭಾಗಕಂ ॥ ೧೨ ॥

ತಿಲೇಂಗುದೀಮಧೂಕಾನಾಂ ನಕ್ತಮಾಲಕುಸುಂಭಯೋಃ ।
ಜಾನೀಯಾತ್ಪಾದಕಂ ತೈಲಂ ಖಲಮನ್ಯತ್ಪ್ರಚಕ್ಷತೇ ॥ ೧೩ ॥

---

೯. ಹೀಗೆ ಹುರಿಯಲು ಯೋಗ್ಯವಾದ ಇತರ ಕೆಲವು ಧಾನ್ಯಗಳನ್ನು ಹುರಿದಾಗ ಅವು ನಾಲ್ಕರಷ್ಟು ಹೆಚ್ಚಾಗುವುವು. ಚಾಪಕ ಎಂಬ ಹಿಟ್ಟು ಮಾಡಬಹುದಾದ ಧಾನ್ಯಗಳನ್ನೂ ಮತ್ತು ನೆಲಗಡಲೆಯ ಕಾಯಿಯನ್ನು ಹುರಿದಾಗ ಕೆಲವುವೇಳೆ ಅವು ಕಾಲುಭಾಗದಷ್ಟು ಕಮ್ಮಿಯಾಗಬಹುದು.

೧೦. ಹಾಗೆಯೇ ಹೆಸರು, ಕಿರುಗಡಲೆ ಮುಂತಾದುವನ್ನು ಹುರಿದಾಗ ಅವು ಅರ್ಧ ಅಥವಾ ಕಾಲುಭಾಗದಷ್ಟು ಕಡಮೆಯಾಗಬಹುದು. ವರಾನ್ನಗಳು ಈ ಕಾಳುಗಳನ್ನು ನೆನಸಿದಾಗ ಹೆಚ್ಚು ಅಳತೆಯೂ, ಹಸಿಯದನ್ನು ಒಣಗಿಸಿದಾಗ ಕಡಮೆ ಅಳತೆಯೂ, ಸಂಭವಿಸಬಹುದು.

೧೧. ಜಳ್ಳುತೆಗೆದ ತೊಗರಿ, ಹೆಸರು, ಉದ್ದು, ಮಸೂರ (ಕಿರುಗಡಲೆ) ಇವುಗಳ ಬೇಳೆಮಾಡಿದಾಗ ಐದರಲ್ಲೊಂದುಪಾಲು ಕಡಮೆಯಾಗುವುದೆಂದು ತಿಳಿಯಬೇಕು.

೧೨. ಅಗಸೆಯಬೀಜದ ಅಳತೆಯ ಆರರಲ್ಲಿ ಒಂದುಪಾಲಿನಷ್ಟು ಅಳತೆಯ ಎಣ್ಣೆಯೂ, ಬಿಳಿಯಸಾಸುವೆ, ಬೇಲ, ಕುಸುಮೆಬೀಜ ಇವುಗಳ ಬೀಜದಲ್ಲಿ ಐದರಲ್ಲಿ ಒಂದುಪಾಲು ಎಣ್ಣೆಯೂ ಬರುವುದು.

೧೩. ಎಳ್ಳು, ಇಟ್ಟೆಯಬೀಜ, ಹಿಪ್ಪೆಬೀಜ, ಹೊಂಗೆಬೀಜ, ಕುಸುಮೆಬೀಜ, ಇವುಗಳಲ್ಲಿ ಬೀಜದ ಅಳತೆಯ ನಾಲ್ಕರಲ್ಲೊಂದು ಭಾಗದಷ್ಟು ಅಳತೆಯ ಎಣ್ಣೆ ಬರುತ್ತದೆ. ಮಿಕ್ಕದ್ದು ಹಿಂಡಿಯ ರೂಪದಲ್ಲಿ ನಿಲ್ಲುವುದು.

**ಕ್ಷೇತ್ರಕಾಲಕ್ರಿಯಾದಿಭ್ಯಃ ಕ್ಷಯಾದೇರ್ವ್ಯಭಿಚಾರತಃ ।**
**ಪ್ರತ್ಯಕ್ಷೀಕೃತ್ಯ ತಾನ್ ಸಮ್ಯಗನುಮಿತ್ಯಾವಧಾರಯೇತ್ ॥ ೧೪ ॥**

**ಕ್ಷೀರದೋಷೇ ಗವಾಂ ಪ್ರಸ್ಥಂ ಮಹಿಷೀಣಾಂ ಚ ಸರ್ಪಿಷಃ ।**
**ಪಾದಾಧಿಕಮಜಾವೀನಾಮುತ್ಪಾದಂ ತದ್ವಿದೋ ವಿದುಃ ॥ ೧೫ ॥**

**ಸುಭೂಮಿ ತೃಣಕಾಲೇಭ್ಯೋ ವೃದ್ಧಿರ್ವಾ ಕ್ಷೀರಸರ್ಪಿಷಾಂ ।**
**ಅತಸ್ತೇಷಾಂ ವಿಧಾತವ್ಯೋ ಹ್ಯರ್ಥಾದೇವ ವಿನಿಶ್ಚಯಃ ॥ ೧೬ ॥**

**ಪ್ರತ್ಯಕ್ಷೀಕೃತ್ಯ ಯತ್ನೇನ ಪಕ್ಷಮಾಸಾಂತರೇ ತಥಾ ।**
**ಪಯೋವೃತ್ತ್ಯೈರ್ಗವಾದೀನಾಂ ಕುರ್ಯಾತ್ಸಂಭವ ನಿರ್ಣಯಂ ॥ ೧೭ ॥**

---

೧೪. ಭೂಗುಣ, ಬೆಳೆಯಿಡುವಕಾಲ, ಬೆಳೆಯುವುದಕ್ಕೆ ಮಾಡಬೇಕಾದ ವ್ಯವಸಾಯದಕೆಲಸ, ಇವುಗಳಿಂದ ಬೆಳೆ ಹೆಚ್ಚುವುದು ಮತ್ತು ಕಮ್ಮಿಯಾಗುವುದನ್ನು ಕಾಲಾನುಗುಣವಾದ ವಿಧಿಯಿಂದ ನಿಶ್ಚಯಿಸಬೇಕು. ಪ್ರತ್ಯಕ್ಷವಾಗಿ ಹಾಗೆಮಾಡಲು ಸಾಧ್ಯವಿಲ್ಲದಾಗ ಊಹೆಯಿಂದಲಾದರೂ ನಿರ್ಧರಿಸಬೇಕು.

೧೫. ಎಮ್ಮೆಯಹಾಲು ಅಳತೆಯ ಒಂದು ಸೇರನ್ನು ಕಾಯಿಸಿ ಹೆಪ್ಪುಹಾಕಿ ಕಡೆದು ಕಾಯಿಸಿ ತುಪ್ಪಮಾಡಿದರೆ ತೂಕದ ಒಂದುಪಾವು ತುಪ್ಪವಾಗುವುದು. ಪುಷ್ಟಿ ಕರವಾದ ಆಹಾರ ಹಾಕದೆ ಇರುವ ಹಸುಗಳ ಹಾಲು ಅಷ್ಟು ಉತ್ತಮವಲ್ಲದಿದ್ದರೆ ಒಂದು ಸೇರಿಗೆ ತುಪ್ಪ ಇನ್ನೂ ಕಡಿಮೆಯಾಗುವುದು. ಆಡು, ಕುರಿಗಳ ಹಾಲಿನಲ್ಲಿ, ಹಸು, ಎಮ್ಮೆ; ಇವುಗಳ ಹಾಲಿನಲ್ಲಿ ಬರುವುದಕ್ಕಿಂತ ಇನ್ನೂ ಕಾಲುಭಾಗ ಹೆಚ್ಚಾಗಿ ಬರುತ್ತದೆ. ಇದರ ಉತ್ಪತ್ತಿಯ ವಿವರವನ್ನು ಅದನ್ನು ತಿಳಿದವರು ಇನ್ನೂ ಚನ್ನಾಗಿ ಬಲ್ಲರು.

೧೬. ಒಳ್ಳೆಯ ಭೂಮಿಯಲ್ಲಿ ಬೆಳೆದ ಹುಲ್ಲಿನಗುಣ, ಅದನ್ನು ತಿಂದರೆ ಆ ಹುಲ್ಲು ಕ್ಷೀರವಾಗಿ ಪರಿಣಾಮವಾಗುವುದಕ್ಕೂ, ಆ ಕ್ಷೀರವನ್ನು ಮೊಸರಾಗಿಮಾಡಿ ಬೆಣ್ಣೆ ತೆಗೆದು ತುಪ್ಪವಾಗಿ ಪರಿಣಮಿಸುವುದಕ್ಕೂ ಬೇಕಾದಕಾಲ, ಯಾವ ಹುಲ್ಲಿನಿಂದ ಹಾಲು, ಬೆಣ್ಣೆ, ಹೆಚ್ಚುವುದು ; ಯಾವುದನ್ನು ತಿಂದರೆ ಕಮ್ಮಿಯಾಗುವುದು, ಇವ ನ್ನೆಲ್ಲಾ ಪ್ರತ್ಯಕ್ಷ ಪರಿಶೀಲನೆಯಿಂದಲೋ, ಅನುಮಾನದಿಂದಲೋ ನಿಶ್ಚಯಿಸಬೇಕು.

೧೭. ಹದಿನೈದು ದಿನವೋ, ಒಂದು ತಿಂಗಳೋ, ಪ್ರಯತ್ನಪಟ್ಟು ತಾನೇ ಸಾಕ್ಷಾತ್ ನೋಡಿ, ಗೋವು ಮುಂತಾದುವುಗಳು ಹಾಲುಕೊಡುವ ಪ್ರಮಾಣ, ಆ ಹಾಲಿನ ರುಚಿ, ಸಾರ, ಮುಂತಾದ ಸ್ಥಿತಿಯನ್ನು ಗೊತ್ತುಮಾಡಿಕೊಳ್ಳಬೇಕು.

ಕಾರ್ಪಾಸಕ್ಷೈಮಿಕೋಶೌರ್ಣಕಕ್ಷಾವಾದಿಕರ್ತನವ್ ।
ಕುಣಿಪಂಗ್ವಂಧಯೋಷಾಭಿಃ ವಿಧವಾಭಿಶ್ಚ ಕಾರಯೇತ್ ॥ ೧೮ ॥

ಬಾಲವೃದ್ಧಾಂಧಕಾರ್ಪಣ್ಯೇ ಯತ್ಕರ್ತವ್ಯಮವಶ್ಯತಃ ।
ವಿನಿಯೋಗಂ ನಯೇತ್ಸರ್ವಂ ಪ್ರಿಯೋಪಗ್ರಹ ಪೂರ್ವಕಂ ॥ ೧೯ ॥

ಕರ್ಮಣಾಮಂತರಾಲೇಷು ಪ್ರೋಷಿತೇ ಚಾಪಿ ಭರ್ತರಿ ।
ಸ್ವಯಂ ವೈ ತದನುಷ್ಠೇಯಂ ನಿತ್ಯಾನಾಂ ಚಾವಿರೋಧತಃ ॥ ೨೦ ॥

ಶೂದ್ರಾಣಾಂ ಸ್ಥೂಲಸೂಕ್ಷ್ಮತ್ವಂ ಬಹುತ್ವಂ ಚ ವ್ಯಯಾವ್ಯಯೌ ।
ಮತ್ವಾ ವಿಶೇಷಂ ಕುರ್ವೀತ ಚೇತನಪ್ರತಿಪತ್ತಿಷು ॥ ೨೧ ॥

---

೧೮. ಹತ್ತಿಯನೂಲು, ರೇಷ್ಮೆದಾರ, ತುಪ್ಪಟದದಾರ, ಇವನ್ನು ತೆಗೆಯುವ ಕೆಲಸಗಳು, ಉಣ್ಣೆಯನ್ನು ಕತ್ತರಿಸುವುದು ಇವನ್ನೆಲ್ಲಾ ಜೊತ್ತರು, ಕುಂಟರು, ಕುರುಡರು, ವಿಧವೆಯರು ಇವರುಗಳಿಂದ ಮಾಡಿಸಬೇಕು.

೧೯. ಪತಿಯನ್ನುಳ್ಳವರು, ಹುಡುಗತನದಲ್ಲೂ, ಮುಪ್ಪಿನಲ್ಲೂ, ಕುರುಡರಾಗಿರುವಾಗಲೂ, ಕಾರ್ಪಣ್ಯಸ್ಥಿತಿಯಲ್ಲೂ; ಯಾವುದನ್ನು ಅವಶ್ಯವಾಗಿ ಮಾಡಬಹುದೋ ಅವುಗಳಲ್ಲಿ ತನ್ನ ಪ್ರಿಯನಿಗೆ ಹಿತವಾಗಿರುವಂತಹದನ್ನು ಆರಿಸಿಕೊಂಡು ಅದನ್ನೇ ಬಳಕೆಮಾಡಿಕೊಳ್ಳಬೇಕು.

೨೦. ಗಂಡನು ಊರಲ್ಲಿಲ್ಲದಿರುವಾಗಲೂ, ಮನೆಗೆಲಸದ ಮಧ್ಯೆಸಿಕ್ಕುವ ಅವಕಾಶವಲ್ಲೂ, ನಿತ್ಯಕರ್ಮಕ್ಕೆ ವಿರೋಧವಿಲ್ಲದಂತೆ ತನ್ನ ಪ್ರಯೋಜನಕ್ಕಾಗಿ ಅದನ್ನು ಬಳಕೆ ಮಾಡಿಕೊಳ್ಳಬೇಕು.

೨೧. ಚೇತನ ಜೀವಿಗಳಿಂದ ಕೆಲಸಮಾಡಿಸುವ ಸಂದರ್ಭದಲ್ಲಿ ಯಾವ ಬಗೆಯ ಶೂದ್ರರು ಯಾವ ಬಗೆಯ ಒರಟುಕೆಲಸಕ್ಕೆ ಅರ್ಹರು, ಯಾರು ಸೂಕ್ಷ್ಮ ಕೆಲಸಕ್ಕೆ ಅರ್ಹರು, ಯಾವ ಕೆಲಸವನ್ನು ಯಾರಿಗೆ ನೇಮಿಸಿದರೆ ಹೆಚ್ಚು ವೆಚ್ಚವಾಗುವುದು? ಯಾರಿಗೆ ನೇಮಿಸಿದರೆ ಖರ್ಚು ಕಡಿಮೆ? ಇವುಗಳ ತಾರತಮ್ಯ ತಿಳಿದು ಕೆಲಸಮಾಡಿಸಬೇಕು.

**ಕಾರಯೇದ್ವಸ್ತ್ರಧಾನ್ಯಾದಿ ಸ್ವಾಪ್ತೈರ್ವೃದ್ಧೈರಧಿಷ್ಠಿತಂ ।**
**ಶೂದ್ರಾಣಾಂ ಕ್ಷಯವೃದ್ಧ್ಯಾದಿ ಮಂತವ್ಯಂ ವೇತನಾನಿ ಚ** ॥ ೨೨ ॥

**ಕ್ಷೌಮಕಾರ್ಪಾಸಯೋರ್ವಿದ್ಯಾತ್ ಸೂತ್ರಂ ಪಂಚಮಭಾಗಕಂ ।**
**ದೇಶಾಕಾಲಾದಿಭಾಗಾತ್ತು ಪ್ರತ್ಯಕ್ಷಾದೇವ ನಿರ್ಣಯಃ** ॥ ೨೩ ॥

**ಅವಘಾತೇನ ತೂಲಸ್ಯ ಕ್ಷಯೋ ವಿಂಶತಿಭಾಗಕಂ ।**
**ಭನ್ನಾಂ ವ್ಯಾಪ್ತಾಂ ತು ವಾತೇನ ತದ್ವದೂರ್ಣಾಂ ಪ್ರಚಕ್ಷತೇ** ॥ ೨೪ ॥

**ಪಂಚಾಶದ್ಭಾಗಿಕೀಂ ಹಾನಿಂ ಸೂತ್ರೇ ಕುರ್ವೀತ ಲಕ್ಷಣಾತ್ ।**
**ವೃದ್ಧಿಸ್ತು ಮಂಡಸಂಪರ್ಕಾದ್ದಶೈಕಾದಶಿಕಾ ಭವೇತ್** ॥ ೨೫ ॥

---

೨೨. ಒಳ್ಳೆಯ ಆಪ್ತರು ಮತ್ತು ವಯಸ್ಸಾದವರು, ಇವರ ಮೇಲ್ವಿಚಾರಣೆಯಲ್ಲಿ ಕೆಲಸಮಾಡುವಂತೆ ನೇಮಿಸಿ, ಕೆಲಸಗಾರರ ಬಡತನ, ಸಮೃದ್ಧಿ, ಇವುಗಳ ಸ್ಥಿತಿಯನ್ನೂ ಅವರು ಮಾಡುವ ಕೆಲಸದ ಗುಣವನ್ನೂ ನೋಡಿ-ಅವರ ಕೂಲಿಯನ್ನು ಗೊತ್ತುಮಾಡಿ ವಸ್ತ್ರ, ಧಾನ್ಯಸಂಗ್ರಹ ಇವನ್ನು ಮಾಡಿಸಬೇಕು.

೨೩. ಬೇರೆಬೇರೆ ದೇಶ, ಬೇರೆಬೇರೆ ಕಾಲ ಇವುಗಳನ್ನು ನೋಡಿಕೊಂಡು ರೇಷ್ಮೆ, ಹತ್ತಿ ಇವುಗಳಿಂದಾಗುವ ನೂಲು, ಆ ರೇಷ್ಮೆಗೂಡು ಬೀಜಸಹಿತ ಹತ್ತಿಗಳ ಐದನೆ ಒಂದು ಪಾಲಿನಷ್ಟು ಆಗುವುದೇ ಎಂದು ಪ್ರತ್ಯಕ್ಷ ಪ್ರಮಾಣದಿಂದ ಅವುಗಳ ವಿಚಾರವನ್ನು ನೋಡಿ ತಿಳಿಯಬೇಕು.

೨೪. ಹತ್ತಿಯನ್ನು ಒಣಗಿಸಿ ಬಡಿಯುವುದರಿಂದ ಅದರ ಗಾತ್ರದ ಇಪ್ಪತ್ತನೆಯ ಒಂದು ಭಾಗದಷ್ಟು ಕಡಿಮೆಯಾಗುವುದು. ಆವರಣವುಳ್ಳ ಸ್ಥಳದಲ್ಲಿಟ್ಟರೂ ವಾಯುಸ್ಪರ್ಶದಿಂದ ಹತ್ತಿಯೂ ಮತ್ತು ಉಣ್ಣೆಯೂ ಇಪ್ಪತ್ತನೇ ಒಂದು ಭಾಗದಷ್ಟು ಕಮ್ಮಿಯಾಗುವುದೆಂದು ಹೇಳುತ್ತಾರೆ

೨೫. ಹತ್ತಿ, ಉಣ್ಣೆ, ಮುಂತಾದುವುಗಳಿಂದ ದಾರ ಎಳೆದರೆ ಅದರ ತೂಕದಲ್ಲಿ ಐವತ್ತರಲ್ಲಿ ಒಂದುಪಾಲು ಕಮ್ಮಿ ಬೀಳುತ್ತದೆ. ಆ ದಾರಕ್ಕೆ ಗಂಜಿ ಅಥವಾ ಸರಿ (ಅಂಟು) ಯನ್ನು ಸವರುವುದರಿಂದ ಹತ್ತರಿಂದ ಹನ್ನೊಂದು ಭಾಗದಷ್ಟು ತೂಕ ಹೆಚ್ಚುವುದು.

ಶ್ಲಕ್ಷ್ಣಮಧ್ಯಮಸೂತ್ರಾಣಾಮರ್ಧಾಧಿಕಸಮಂ ಭವೇತ್ ।
ಸ್ಥೂಲಾನಾಂ ತು ಪುನರ್ಮೌಲ್ಯಾತ್ ಪಾದೋನಂ ವಾಲಚೇತನಂ ॥ ೨೬ ॥

ಕರ್ಮಣೋ ಭೂರಿಭೇದತ್ವಾತ್ ದೇಶಕಾಲಪ್ರಸಿದ್ಧಿತಃ ।
ತದ್ವಿದ್ಭ್ಯ ಏವ ಬೋದ್ಧವ್ಯೋ ವಾಲಚೇತನನಿಶ್ಚಯಃ ॥ ೨೭ ॥

ಸ್ಥೂಲಂ ದಿನತ್ರಯಂ ದೇಯಂ ಮಧ್ಯಮಂ ಚ ತ್ರಿರಾತ್ರಿಕಂ ।
ಯದತ್ರ ಕ್ಷಯವೃದ್ಧ್ಯಾದಿ ತದುತ್ಸರ್ಗಾತ್ಪ್ರದರ್ಶಿತಂ ॥ ೨೮ ॥

ಕಾಲಕರ್ತ್ರಾದಿಭೇದೇನ ವ್ಯಭಿಚಾರೋಽಪಿ ದೃಶ್ಯತೆ ।
ಶಯ್ಯಾಸನಾನ್ಯನೇಕಾನಿ ಕಂಬಲಾಶ್ಚತುರಾಶ್ರಿಕಾಃ ॥ ೨೯ ॥

---

೨೬. ಬಹು ಸಣ್ಣಗೆ ಎಳೆದ ದಾರ, ಮಧ್ಯಮತರದ ದಾರ, ಇವುಗಳಿಗೆ ಗಂಜಿ ಹಾಕಿದಾಗ ಅರ್ಧದಷ್ಟು ಅಥವಾ ಅರ್ಧಕ್ಕಿಂತ ಹೆಚ್ಚು ತೂಕವು ಏರಬಹುದು. ಗಂಜಿ ಸವರುವುದಕ್ಕೆ ಮುಂಚೆ ಎಷ್ಟು ತೂಕವಿತ್ತೋ, ಗಂಜಿ ಸವರಿದ ಮೇಲೆ ಅದರ ಒಂದೂವರೆಯಷ್ಟು ತೂಕವಾಗುವುದು. ದಪ್ಪದಾರಗಳು ಸೂಕ್ಷ್ಮವಾದ ದಾರಗಳಿಗಿಂತ ಕ್ರಯದಲ್ಲಿ ಕಾಲುಭಾಗದಷ್ಟು ಕಡಮೆಯಾಗುವುದು.

೨೭. ಕೆಲಸದ ಕ್ರಮದಲ್ಲಿ ಅನೇಕ ಬಗೆಗಳಿರುವುದರಿಂದಲೂ, ಒಂದೊಂದು ದೇಶದಲ್ಲಿ ಒಂದೊಂದು ಕಾಲದಲ್ಲಿ ಮಾಡಿದ ಕೆಲಸಕ್ಕೆ ಒಂದೊಂದು ಬಗೆಯ ಫಲ ದೊರಕುವುದರಿಂದಲೂ, ಸೂತ್ರದ ಶಕ್ತಿನಿಷ್ಕರ್ಷೆಯ ನಿಜಾಂಶವನ್ನು ಅದರ ಗುಟ್ಟು ಬಲ್ಲವರನ್ನು ಕೇಳಿ ತಿಳಿದುಕೊಳ್ಳಬಹುದು.

೨೮. ದಪ್ಪದಾರಕ್ಕೆ ಮೂರುಹಗಲು, ಮಧ್ಯಮತರದ ದಾರಕ್ಕೆ ಮೂರುರಾತ್ರಿ, ಸೂಕ್ಷ್ಮವಾದ ದಾರಕ್ಕೆ ಒಂದುಪಕ್ಷ ಎಂದರೆ ಹದಿನೈದು ದಿನದಿಂದ ಒಂದುತಿಂಗಳು ಈ ರೀತಿ ಅದರ ಸಂಸ್ಕಾರಕರ್ಮಕ್ಕೆ ಅವಕಾಶಬೇಕು.

೨೯. ಇದರ ಹೆಚ್ಚುವಿಕೆ, ಕಡಮೆಯಾಗುವಿಕೆ, ಇವುಗಳನ್ನು ಸಾಮಾನ್ಯವಾಗಿ ತಿಳಿಸಿದಂತೆ ಆಯಿತು. ಸಿದ್ಧಮಾಡಲು ಹಿಡಿಯುವ ಕಾಲ, ಮಾಡುವ ಮನುಷ್ಯನ ಕೈಚಳಕ, ಇದಕ್ಕನುಸಾರವಾಗಿ ಫಲದಲ್ಲಿ ವ್ಯತ್ಯಾಸವಾಗುವುದುಂಟು. ಹತ್ತಿ, ಉಣ್ಣೆ ಈ ದಾರಗಳಿಂದ ಕಂಬಳಿಗಳು ಮತ್ತು ವಿಧವಿಧವಾದ ಹಾಸಿಗೆಗಳು, ಕುಳಿತುಕೊಳ್ಳುವ ಜಮಖಾನ, ರತ್ನಗಂಬಳಿ ಮುಂತಾದ ಪದಾರ್ಥಗಳು ಸಿದ್ಧವಾಗುತ್ತವೆ.

**ಕಂಬುಕೆಶ್ಶಾವಕೋಷಾಶ್ಚ ಮಧ್ಯಾ ರಕ್ತಾಶ್ಚ ಭೂರಿಶಃ ।**
**ಗುರುಬಾಲಾದಿ ವೃದ್ಧಾನಾಮಭ್ಯಾಗತಜನಸ್ಯ ಚ ॥ ೩೦ ॥**

**ಭೋಗಾಯಾನುಗತೋ ಭರ್ತಾ ಕುರ್ಯಾದ್ವಿವಿಧಮಾತ್ರಕಂ ।**
**ಯದಸ್ಯ ಶ್ವಶುರಾದೀನಾಂ ಕಲ್ಪಿತಂ ಶಯನಾದಿಕಂ ॥ ೩೧ ॥**

**ಭರ್ತುಶ್ಚೈವ ವಿಶೇಷೇಣ ತದನ್ಯೇನ ನ ಕಾರಯೇತ್ ।**
**ವಸ್ತ್ರಂ ಮಾಲ್ಯಮಲಂಕಾರಂ ವಿಧೃತಂ ದೇವರಾದಿಭಿಃ ॥ ೩೨ ॥**

**ನ ಧಾರಯೇನ್ನ ಚೈತೇಷಾಮಾಕ್ರಮೇಚ್ಛಯನಾನಿ ವಾ ।**
**ಪಿಣ್ಯಾಕನ ಕಕುಟ್ವಾಶ್ಚ ಕಾಲರೂಕ್ಷಾಣಿ ಯಾನಿ ಚ ॥ ೩೩ ॥**

**ಹೇಯಂ ಪರ್ಯುಷಿತಾದ್ಯನ್ನಂ ಗೋಭಕ್ತೇನೋಪಯೋಜಯೇತ್ ।**
**ಕುಲಾನಾಂ ಬಹುಧೇನೂನಾಂ ಗೋಧ್ಯಕ್ಷವ್ರಜಜೀವಿನಾಂ ॥ ೩೪ ॥**

---

೩೦-೩೧. ಮಧ್ಯೆ ಕೆಂಪುಬಣ್ಣವು ಚೆನ್ನಾಗಿ ಕಾಣುವಂತೆ ತೆಗೆದ ಕಂಬುಧಾನ್ಯದ ಹೊಟ್ಟಿನಿಂದ ಮಾಡಿದ ಹಾಸಿಗೆಯನ್ನು ದೊಡ್ಡವರು, ಹುಡುಗರು, ಮುದುಕರು, ಪರಸ್ಥಳದ ಜನರು ಇವರುಗಳು ಉಪಯೋಗಿಸುವುದಕ್ಕಾಗಿ ಏರ್ಪಡಿಸಬೇಕು ಮನೆಯಲ್ಲಿ ಭೋಗಿಯಾದ ಗಂಡನಿಗೆ ವಿವಿಧವರ್ಣದ ಹಾಸಿಗೆ ಶ್ರೇಷ್ಠವಾದ್ದು. ಮಾವ ಮೊದಲಾದವರ ಶಯನಾದಿಗಳಿಗೆ ನಿರ್ಮಿತವಾದ ಹಾಸಿಗೆಯನ್ನು ವಿಶೇಷವಾಗಿ ಗಂಡನಿಗಾಗಲಿ, ಸಾಮಾನ್ಯವಾಗಿ ಇತರರಿಗಾಗಲಿ ಉಪಯೋಗಿಸಬಾರದು.

೩೨-೩೩. ಮುಖ್ಯವಾಗಿ ಗಂಡನಿಗೆ ಹಾಸಿಗೆಯನ್ನು ಹಾಸಬೇಕಾದಾಗ ತಾನೇ ಹಾಸಬೇಕು. ಇತರರದಿಂದ ಆ ಕೆಲಸ ಮಾಡಿಸಬಾರದು. ಮೈದುನ ಮೊದಲಾದವರು ಉಪಯೋಗಿಸಿದ ಬಟ್ಟೆ, ಪುಷ್ಪಹಾರ, ಒಡವೆ (ಆಭರಣ) ಮೊದಲಾದುವನ್ನು ತಾನು ಉಪಯೋಗಿಸಬಾರದು. ಅವರ ಹಾಸಿಗೆಯನ್ನು ತಾನು ಮೆಟ್ಟಬಾರದು.

೩೪. ಅನೇಕ ದನಕರುಗಳನ್ನು ಸಾಕಿಕೊಂಡಿರುವ ಗೊಲ್ಲರ ಹಳ್ಳಿಯ ಮುಖಂಡರು ಹಿಂಡಿ, ಹಾರಕ ಮುಂತಾದ ಒರಟಾದ ಕಪ್ಪು ಧಾನ್ಯಾದಿಗಳನ್ನೂ, ಸೇವಿಸಲು ದೂಷಿತವಾದ ತಂಗಳು ಮುಂತಾದುವನ್ನೂ ದನಗಳ ಆಹಾರಕ್ಕಾಗಲಿ, ಕಿಲಾಟರು, ದನಕಾಯುವ ಗವಿಕರು, ಇವರ ಆಹಾರಕ್ಕಾಗಿಯಾಗಲಿ ಉಪಯೋಗಿಸಬೇಕು.

**ಕಿಲಾಟ ಗವಿಕಾದೀನಾಂ ಭಕ್ತಾರ್ಥಮುಪಯೋಜನಂ ।**
**ದಧ್ನಃ ಸಮಾಹರೇತ್ಸರ್ಪಿರ್ದುಹೇದ್ವತ್ಸಾನ್ನ ಪೀಡಯೇತ್ ॥ ೩೫ ॥**

**ವರ್ಷಾಶರದ್ವಸಂತೇಷು ದ್ವೌ ಕಾಲಾವನ್ಯದಾ ಸಕೃತ್ ।**
**ತಕ್ರಂ ಶ್ವಾಪ್ಯುಪಯುಂಜೀತ ಶ್ವವರಾಹಾದಿ ಪೋಷಣೇ ॥ ೩೬ ॥**

**ಪಿಣ್ಯಾಕಕ್ಲೇದನಾರ್ಥಂ ವಾ ವಿಕ್ರೇಯಂ ವಾ ತದರ್ಹಯೇತ್ ।**
**ವೃತ್ತಿಂ ಧಾನ್ಯಹಿರಣ್ಯೇನ ಗೋಪಾದೀನಾಂ ಪ್ರಕಲ್ಪಯೇತ್ ॥ ೩೭ ॥**

**ತೇ ಹಿ ಕ್ಷೀರವ್ರತಾಲೋಭಾದುಪಹನ್ಯುಸ್ತನದ್ವಯಾನ್ ।**
**ದೋಹಕಾಲಂ ಗವಾಂ ದೋಗ್ಧಾ ನಾತಿವರ್ತೇತ ವೈ ದ್ವಿಜಾಃ ॥ ೩೮ ॥**

**ಪ್ರಸರೋದಕಯೋರ್ಗೋಪಾ ಮಂಥಕಸ್ಯ ಚ ಮಂಥಕಾಃ ।**
**ಮಾಸಮೇಕಂ ಯಥಾ ಸ್ತನ್ಯಂ ಮಾಸಮೇಕಂ ಸ್ತನದ್ವಯಂ ॥ ೩೯ ॥**

---

೩೫. ಮೊಸರಿನಿಂದ ಬೆಣ್ಣೆಯನ್ನು ತೆಗೆಯಬೇಕು. ಕರೆಯುವಾಗ ಕರುಗಳಿಗೆ ಹಾಲಿಲ್ಲದಂತೆ ತೊಂದರೆಮಾಡಬಾರದು.

೩೬. ಮಳೆಗಾಲ, ಶರತ್ಕಾಲ, ವಸಂತರ್ತು, ಇವುಗಳಲ್ಲಿ ಎರಡುಸಲ ಹಸುವನ್ನು ಕರೆಯಬೇಕು. ಮಿಕ್ಕ ಕಾಲಗಳಲ್ಲಿ ಒಂದೇಸಲ ಕರೆಯಬೇಕು. ನಾಯಿ, ಹಂದಿ ಮೊದಲಾದುವುಗಳನ್ನು ಪೋಷಿಸಲು ಮಜ್ಜಿಗೆಯನ್ನಾದರೂ ಉಪಯೋಗಿಸಬಹುದು. ಅಲ್ಲದೆ ಹಿಂಡಿಯನ್ನು ನೆನಸುವುದಕ್ಕೋ, ಮಾರುವುದಕ್ಕೋ ಸಹ ಮಜ್ಜಿಗೆಯನ್ನು ಉಪಯೋಗಿಸಬಹುದು.

೩೭. ಗೊಲ್ಲರು, ದನಕಾಯುವವರು, ಮೊದಲಾದವರಿಗೆ ಜೀವನಕ್ಕಾಗಿ ಧಾನ್ಯವನ್ನೋ ಅಥವಾ ದುಡ್ಡನ್ನೋ ಕೂಲಿ ಕೊಡಬೇಕು. ಇಲ್ಲದಿದ್ದರೆ ಅವರು ಹಾಲಿನ ಆಸೆಯಿಂದ ಆ ದನಗಳ ಹಿಂಡುಗಳನ್ನೇ ಹಾಳುಮಾಡುತ್ತಾರೆ.

೩೮. ಎಲೈ ಬ್ರಾಹ್ಮಣರಿರಾ, ಕೇಳಿ ; ಹಸುಕರೆಯುವ ಹೊತ್ತನ್ನು ಎಂದಿಗೂ ಮೀರಿ ಕರೆಯಲಾಗದು.

೩೯. ಗೋರಕ್ಷಕರು ಒಂದು ತಿಂಗಳವರೆಗೂ ಕರುವನ್ನು ಹಾಲು ನೀರು ಮಿಶ್ರವಾದ ಆಹಾರದಿಂದ ಸಾಕಬೇಕು. ಆಮೇಲೆ ಒಂದುತಿಂಗಳು ಒಂದುಮೊಲೆಯ ಹಾಲನ್ನು ಕುಡಿಯಲು ಬಿಡುವುದರಿಂದಲೂ, ಆ ಮುಂದಿನ ತಿಂಗಳು ಎರಡುಮೊಲೆ ಹಾಲನ್ನು ಕುಡಿಸುವುದರ ಮೂಲಕವೂ, ಕರುಗಳನ್ನು ಸಾಕಬೇಕು.

**ಸತತಂ ಪಾಯಯೇಧೂರ್ಧ್ವಂ ಸ್ತನಮೇಕಂ ಸ್ತನದ್ವಯಂ ।**
**ತಿಲಪಿಷ್ಟಾಭಿಃ ಪಿಂಡಾಭಿಃ ತೃಣೇನ ಲವಣೇನ ಚ ॥**
**ವಾರಿಣಾ ಚ ಯಥಾಕಾಲಂ ಪುಷ್ಣೀಯಾದಿತಿವತ್ಸಕಾನ್ ॥ ೪೦ ॥**

**ಜರದ್ಗುರ್ಗರ್ಭಿಣೀ ಧೇನುಃ ವತ್ಸಾ ವತ್ಸತರೀ ತಥಾ ।**
**ಪಂಚಾನಾಂ ಸಮಭಾಗೇನ ಘಾಸಂ ಯೂಥೇ ಪ್ರಕಲ್ಪಯೇತ್ ॥ ೪೧ ॥**

**ಏಕೋ ಗೋಪಾಲಕಸ್ತಸ್ಯ ತ್ರಯಾಣಾಮಥ ವಾ ದ್ವಯಂ ।**
**ಪಂಚಾನಾಂ ವತ್ಸಕಶ್ಚೈಕಃ ಪ್ರವರಾಸ್ತು ಪೃಥಕ್ ಪೃಥಕ್ ॥ ೪೨ ॥**

**ಗೋಚರಸ್ಯಾನಯನಾರ್ಥಂ ವ್ಯಾಲಾನಾಂ ಶಾಸನಾಯ ಚ ।**
**ಘಂಟಾಃ ಕಂಠೇಷು ಬಧ್ನೀಯುಃ ಶೋಭಾರಕ್ಷಾರ್ಥಮೇವ ಚ ॥ ೪೩ ॥**

---

೪೦. ಯಾವಾಗಲೂ ಕರುಗಳಿಗೆ ಅದರ ತಾಯಿಯ ಒಂದು ಮೊಲೆಯ ಹಾಲನ್ನೋ ಅಥವಾ ಎರಡುಮೊಲೆಯಲ್ಲಿನ ಹಾಲನ್ನೋ ಕುಡಿಸಬೇಕು. ಅದಕ್ಕಿಂತ ಹೆಚ್ಚಾಗಿ ಕುಡಿಸಬಾರದು ಅದರ ಜತೆಗೆ ಎಳ್ಳುಹುಡಿ, ಹುಲ್ಲು, ಉಪ್ಪು, ಮಿಶ್ರಿತ ವಾದ ಹಿಟ್ಟು, ನೀರು ಇವುಗಳನ್ನು ಹಾಕಿ ಪೋಷಣೆ ಮಾಡಬೇಕು.

೪೧. ಹುಲ್ಲನ್ನು ಮೇಯಿಸಿ ಕ್ಲುಪ್ತವಾದ ಕಾಲದಲ್ಲಿ ನೀರನ್ನು ಕುಡಿಸಬೇಕು. ಅವು ಕುಡಿಯದೇ ಇದ್ದರೆ ಗೊಟ್ಟದಿಂದಲಾದರೂ ಕುಡಿಸಿ ಚೆನ್ನಾಗಿ ಸಾಕಬೇಕು. ದನದ ಹಿಂಡಿನಲ್ಲಿ ಮುದಿಹಸು, ಗರ್ಭವಾದ ಹಸು, ಹೊಸದಾಗಿ ಕರುಹಾಕಿದ ಹಸು, ಎಳಗರು, ಉಳುಮೆ ಹಸು, ಇವೆಲ್ಲಕ್ಕೂ ಯಾವ ವ್ಯತ್ಯಾಸವೂ ಇಡದೆ ಸಮಪ್ರಮಾಣ ದಿಂದ ಹುಲ್ಲನ್ನು ಹಾಕಬೇಕು.

೪೨. ದನಗಳ ಗುಂಪಿಗೆಲ್ಲಾ ಒಬ್ಬನೇ ಗೋಪಾಲಕನಿರಬಹುದು. ಒಟ್ಟು ಹಿಂಡನ್ನು ಎರಡು ಅಥವಾ ಮೂರು ಗುಂಪುಮಾಡಿ ಒಂದೊಂದಕ್ಕೂ ಬೇರೆಬೇರೆಯವ ರನ್ನು ನಿಯಮಿಸಬಹುದು. ಎಂದರೆ ಕರುಗಳನ್ನೂ, ಗೂಳಿಗಳನ್ನೂ ನೋಡಿಕೊಳ್ಳಲು ಬೇರೆಬೇರೆಯವರನ್ನು ನೇಮಿಸಬಹುದು.

೪೩. ದನಗಳು ಕೊಟ್ಟಿಗೆಗೆ ಬಂದುವು ಎಂದು ಸೂಚನೆಯಾಗುವುದಕ್ಕೂ, ದುಷ್ಟಮೃಗಗಳನ್ನು ಹೆದರಿಸುವುದಕ್ಕೂ, ಅಲಂಕಾರಕ್ಕಾಗಿಯೂ, ರಕ್ಷೆಗಾಗಿಯೂ ಅವು ಗಳ ಕೊರಳಲ್ಲಿ ಗಂಟೆಯನ್ನು ಕಟ್ಟಿರುವರು.

ಪಶವ್ಯೇ ವ್ಯಾಲನಿರ್ಮುಕ್ತೇ ದೇಶೇ ಭೂರಿ ತೃಣೋದಕೇ ।
ಅಭೂತದುಷ್ಟೇ ವಾರಣ್ಯೇ ಸದಾ ಕುರ್ವೀತ ಗೋಕುಲಂ ॥ ೪೪ ॥

ಸಗುಪ್ತಮಟವೀವಾಸಂ ನಿತ್ಯಂ ಕುರ್ಯಾದಜಾವಿಕಂ ।
ಊರ್ಣಾ ವರ್ಷೇ ದ್ವಿರಾ ದದ್ಯಾಚ್ಚೈತ್ರಾಶ್ವಯುಜಮಾಸಯೋಃ ॥ ೪೫ ॥

ಯೂಥೇ ವೃಷಾದಶೈತಾಸಾಂ ಚತ್ವಾರಃ ಪಂಚ ವಾ ಗವಾಂ ।
ಅಶ್ವೋಷ್ಟ್ರಮಹಿಷಾಣಾಂ ಚ ಯಥಾಸ್ಯುಃ ಸುಖಸೇವಿತಾಃ ॥ ೪೬ ॥

ವಿದ್ಯಾತ್ಕೃಷೀವಲಾದೀನಾಂ ಯೋಗಂ ಕೃಷಿಕಕರ್ಮಸು ।
ಭಕ್ತವೇತನಲಾಭಂ ಚ ಕರ್ಮಕಾಲಾನುರೂಪತಃ ॥ ೪೭ ॥

ಕ್ಷೇತ್ರಕೇದಾರವಾಟೀಷು ಭೃತ್ಯಾನಾಂ ಕರ್ಮಕುರ್ವತಾಂ ।
ಖಲೇಷು ಚ ವಿಜಾನೀಯಾತ್ ಕ್ರಿಯಾಯೋಗಂ ಪ್ರತಿಕ್ಷಣಂ ॥ ೪೮ ॥

---

೪೪. ಹುಲ್ಲು, ನೀರು ಇವುಗಳ ಸಮೃದ್ಧಿಯುಳ್ಳುದೂ, ಸರ್ಪಬಾಧೆಯಿಲ್ಲದುದೂ ದುಷ್ಟಮೃಗಗಳ ಕಾಟವಿಲ್ಲದುದೂ ಆಗಿರುವ ಅರಣ್ಯದಲ್ಲಿ ದನಗಳ ಕೊಟ್ಟಿಗೆಯನ್ನು ಮಾಡಬೇಕು.

೪೫. ಆಡು, ಕುರಿಗಳನ್ನು ನಿತ್ಯವೂ ಕಾಡಿನಲ್ಲಿ ಗುಟ್ಟಾಗಿರುವಂತೆ ಇಟ್ಟಿರಬೇಕು. ಇವುಗಳ ಉಣ್ಣೆಯನ್ನು ಚೈತ್ರಮಾಸದಲ್ಲೊಂದು ಸಾರಿ, ಆಶ್ವಯುಜಮಾಸದಲ್ಲಿ ಒಂದುಸಾರಿ, ಹೀಗಿ ವರ್ಷಕ್ಕೆರಡು ಸಲ ಕತ್ತರಿಸಬೇಕು.

೪೬. ದನಗಳ ಹಿಂಡಿನಲ್ಲಿ ನಾಲ್ಕೈದು ಹಸುಗಳಿಗೆ ಒಂದರಂತೆ ಗೂಳಿಗಳಿರಬೇಕು. ಅಷ್ಟು ಇಡಲು ಸಾಧ್ಯವಿಲ್ಲದಿದ್ದರೆ ಹತ್ತು ಹಸುಗಳಿಗೆ ಒಂದರಂತೆ ಆದರೂ ಇರಬೇಕು ಕುದುರೆ, ಒಂಟೆ, ಎಮ್ಮೆ ಇವುಗಳಿಗೆ ಗಂಡುಪ್ರಾಣಿಗಳು ಎಷ್ಟಿದ್ದರೆ ಅವುಗಳ ಸೇವೆ ಸುಖವಾಗಿ ನಡೆಯುವುದೋ ಅಷ್ಟು ಇರಬೇಕು.

೪೭ ಭೂವ್ಯವಸಾಯಕ್ಕೆ ಆಳುಗಳನ್ನು ನೇಮಿಸಬೇಕು. ಹೀಗೆ ನೇಮಿಸುವಾಗ ಅವರು ಮಾಡುವ ಕೆಲಸ; ಅವರು ದುಡಿಯುವ ಕಾಲದ ಪರಿಮಾಣ, ಇವಕ್ಕೆ ಅನುಸಾರವಾಗಿ ಅವರಿಗೆ ಊಟ, ಸಂಬಳ ಇವನ್ನು ಸಲ್ಲಿಸಬೇಕು.

೪೮. ಹೊಲಗದ್ದೆಗಳಲ್ಲಿ ಕೆಲಸಮಾಡುವವರಲ್ಲಿ ಮೈಗಳ್ಳರು ಯಾರು, ಕೆಲಸಗಾರರು ಯಾರು, ಎಂಬುದನ್ನು ಹೊಲಗದ್ದೆಗಳಲ್ಲಿ ಅವರು ಬೆಳೆದ ಬೆಳೆಯನ್ನೂ, ಕಣದಲ್ಲಿ ಬಂದ ಫಸಲನ್ನೂ, ನೋಡಿ ಅವರ ಕೆಲಸದ ಮರ್ಮವನ್ನು ತಿಳಿಯಬೇಕು.

**ಯೋಗ್ಯತಾತಿಶಯಂ ಮತ್ವಾ ಕರ್ಮಯೋಗೇಷು ಕಸ್ಯಚಿತ್ ।**
**ಗ್ರಾಸಾಚ್ಛಾದಶಿರೋಭ್ಯಂಗೈರ್ವಿಶೇಷಂ ತಸ್ಯ ಕಾರಯೇತ್ ॥ ೪೯ ॥**

**ಪುಷ್ಪಶಾಕಾದಿವಾಪಾನಾಂ ಕಂದಬೀಜಾದಿ ಜನ್ಮನಾಮ್ ।**
**ಸಂಗ್ರಹಃ ಸರ್ವಬೀಜಾನಾಂ ಕಾಲೇ ವಾಪಃ ಸುಭೂಮಿಷು ॥ ೫೦ ॥**

**ಜಾತಾನಾಂ ರಕ್ಷಣಂ ಸಮ್ಯಕ್ ರಕ್ಷಿತಾನಾಂ ಚ ಸಂಗ್ರಹಃ ।**
**ತೇಷಾಂ ಚ ಸಂಗೃಹೀತಾನಾಂ ಯಥಾವನ್ನಿವಪಕ್ರಿಯಾ ॥ ೫೧ ॥**

**ಗೃಹಮೂಲಂ ಸ್ತ್ರಿಯಶ್ಚೈವ ಧಾನ್ಯಮೂಲೋ ಗೃಹಾಶ್ರಮಃ ।**
**ತಸ್ಮಾದ್ಧಾನ್ಯೇಷು ಭಕ್ತೇಷು ನ ಕುರ್ಯಾನ್ಮುಕ್ತಹಸ್ತತಾಂ ॥ ೫೨ ॥**

---

೪೯. ಕೆಲಸಮಾಡುತ್ತಿರುವ ಆಳುಗಳಲ್ಲಿ ಚೆನ್ನಾಗಿ ಕೆಲಸಮಾಡುವವನು ಇಂಥವನೆಂದು ತಿಳಿದುಬಂದಾಗ ಅವನಿಗೆ ಒಳ್ಳೆಯ ಊಟ, ಹೊದ್ದುಕೊಳ್ಳಲು ಕಂಬಳಿ, ಆಗಾಗ್ಗೆ ತಲೆಗೆ ಅಭ್ಯಂಗ. ಇವುಗಳಿಗೆಲ್ಲಾ ಅವಕಾಶಮಾಡಿಕೊಟ್ಟು ಮಿಕ್ಕವರಿಗಿಂತ ಮೇಲಾಗಿ ಪೋಷಿಸಬೇಕು.

೫೦. ಫಲವತ್ತಾದ ಪ್ರದೇಶಗಳಲ್ಲಿ ಹೂವು, ತರಕಾರಿಯಬೀಜ ಇವುಗಳನ್ನು ಹಾಕಿ, ಅವು ಫಲಿಸಿದ್ದನ್ನು ನೋಡಿ, ಭೂಮಿಯ ಯೋಗ್ಯತೆಯನ್ನು ತಿಳಿಯಬೇಕು. ಆಯಾ ಬೆಳೆಗಳಿಗೆ ಯೋಗ್ಯವಾದ ಭೂಮಿಗಳಲ್ಲಿ ಆಯಾ ಬೀಜಗಳನ್ನು ಹದವರಿತು ಹಾಕಬೇಕು.

೫೧. ಹುಟ್ಟಿದ ಗಿಡಗಳನ್ನು ಚನ್ನಾಗಿ ಕಾಪಾಡುವುದೂ, ಹಾಗೆ ಬೆಳೆಯಿಸಿದ ಗಿಡಗಳಿಂದ ಬಿತ್ತನೆಯನ್ನು ಸಂಗ್ರಹಿಸುವುದೂ ಮುಖ್ಯ. ಹೀಗೆ ಸಂಗ್ರಹಿಸಿದುವುಗಳನ್ನು ಜೋಪಾನವಾಗಿಟ್ಟು ತಕ್ಕಂತೆ ಸಕಾಲದಲ್ಲಿ ಪುನಃ ಬಿತ್ತನೆಗೆ ಉಪಯೋಗಿಸಬೇಕು.

೫೨. ಮನೆಗೆ ಹೆಂಗಸರಿರುವುದು ಮುಖ್ಯ. ಗೃಹಸ್ಥಾಶ್ರಮದ ಕೆಲಸಗಳಿಗೆ ಧಾನ್ಯ ಸಮೃದ್ಧಿಯು ಮುಖ್ಯ. ಆದ್ದರಿಂದ ಧಾನ್ಯಗಳು, ಅನ್ನ ಇವುಗಳ ವಿಷಯದಲ್ಲಿ ಅತಿ ಧಾರಾಳವಾಗಿರಬಾರದು.

ಧಾನ್ಯಂ ತು ಸಂಚಿತಂ ನಿತ್ಯಂ ಮಿತೋಭಕ್ತಪರಿವ್ಯಯಃ ।
ನ ಚಾನ್ನೇ ಮುಕ್ತಹಸ್ತತ್ವಂ ಗೃಹಿಣೀನಾಂ ಪ್ರಶಸ್ಯತೇ ॥ ೫೩ ॥

ಅಲ್ಪಮಿತ್ಯೇವ ನಾವಜ್ಞಾಂ ಚರೇದನ್ನೇಷು ವೈ ದ್ವಿಜಾಃ ।
ಮಧುವಲ್ಮೀಕಯೋರ್ವೃದ್ಧಿಂ ಕ್ಷಯಂ ದೃಷ್ಟ್ವಾಂಜನಸ್ಯ ಚ ॥ ೫೪ ॥

ಯೇ ಕೇಚಿದಿಹ ನಿರ್ದಿಷ್ಟಾ ವ್ಯಾಪಾರಾಃ ಪುರುಷೋಚಿತಾಃ ।
ದಂಪತ್ಯೋರೈಕ್ಯಮಾಸ್ಥಾಯ ತದ್ಧಿ ದಾನಪ್ರಸಂಗತಃ ॥ ೫೫ ॥

ಸಂತ್ಯೇವ ಪುರುಷಾ ಲೋಕೇ ಸ್ತ್ರೀಪ್ರಧಾನಾಃ ಸಹಸ್ರಶಃ ।
ತೇಷು ತಾಸಾಂ ಪ್ರಯೋಕ್ತೃತ್ವಾತ್ ಅದೋಷ ಇತಿ ಗೃಹ್ಯತಾಂ ॥ ೫೬ ॥

---

೫೩. ಪುರುಷನು ಸತ್ಯವೂ ಆದಷ್ಟು ಧಾನ್ಯವನ್ನು ಶೇಖರಿಸುತ್ತಿರಬೇಕು. ಅನ್ನದ ಖರ್ಚನ್ನು ಮಾತ್ರ ತಕ್ಕಷ್ಟು ತಗ್ಗಿಸಬೇಕು. ಗೃಹಿಣಿಯರು ಮಾತ್ರ ಮನೆಗೆ ಬಂದವರಿಗೆ ಅನ್ನ ಹಾಕುವುದಕ್ಕೆ ಕೈಹಿಡಿತಮಾಡಬಾರದು.

೫೪. ಜೇನು ಸ್ವಲ್ಪಸ್ವಲ್ಪವೇ ಕೂಡುತ್ತಾ ಬಂದರೂ ಹುತ್ತವು ಸ್ವಲ್ಪಸ್ವಲ್ಪವಾಗಿ ಕಟ್ಟಲ್ಪಡುತ್ತಿದ್ದರೂ ಕಾಲಕ್ರಮದಲ್ಲಿ ಹೇರಳವಾಗಿ ವೃದ್ಧಿಯಾಗುವುದನ್ನೂ ಕಾಡಿಗೆಯು ಸ್ವಲ್ಪಸ್ವಲ್ಪ ಹಚ್ಚುತ್ತಿದ್ದರೂ ಕಾಲಕ್ರಮದಲ್ಲಿ ಮುಗಿದುಹೋಗುವುದನ್ನೂ ನೋಡಿದ್ದೇವೆ. ಆದ್ದರಿಂದ ಅನ್ನದ ವಿಚಾರದಲ್ಲಿ ಸ್ವಲ್ಪ ಹೋದರೇನು ಎಂದು ತಿರಸ್ಕಾರವನ್ನು ತೋರಿಸಬಾರದು.

೫೫. ದಾನಕೊಡುವುದು ಮುಂತಾದ ಸಂದರ್ಭಗಳಲ್ಲಿ ಪುರುಷರು ಮಾಡತಕ್ಕದ್ದೆಂದು ಯಾವ ಯಾವ ಕೆಲಸಗಳು ಗೊತ್ತಾಗಿವೆಯೋ, ಅವುಗಳನ್ನೂ ಸಹ ಸ್ತ್ರೀಪುರುಷರಿಬ್ಬರೂ ಕಲೆತು ಆಲೋಚಿಸಿ ಒಮ್ಮನಸ್ಸಿನಿಂದ ಮಾಡುವುದೇ ಉಚಿತವು.

೫೬. ಹೆಂಡತಿಯರ ಮಾತನ್ನೇ ಮುಖ್ಯವಾಗಿ ಮಾಡಿಕೊಂಡು ಕೆಲಸ ನಡೆಯಿಸುವ ಪುರುಷರು ಸಾವಿರಾರು ಮಂದಿ ಲೋಕದಲ್ಲಿ ಉಂಟು. ಅವರು ತಕ್ಕ ಆಲೋಚನೆಯನ್ನು ಹೇಳಿ ಕೆಲಸ ನಡೆಯಿಸತಕ್ಕವರಾದುದರಿಂದ ಗಂಡಸರು ಅವರ ಮಾತಿಗೆ ಪ್ರಾಧಾನ್ಯಕೊಡುವುದು ತಪ್ಪಲ್ಲವೆಂದು ತಿಳಿಯಬೇಕು.

**ಏವಂ ಯೋಗ್ಯತಯಾ ಯುಕ್ತಾ ಸೌಭಾಗ್ಯೇನೋದ್ಯಮೇನ ಚ ।**
**ಸಮ್ಯಗಾರಾಧ್ಯ ಭರ್ತಾರಂ ತತ್ರೈನಂ ವಶಮಾನಯೇತ್　　　॥ ೫೭ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸ್ತ್ರೀಧರ್ಮ ವರ್ಣನಂ ನಾಮ ದ್ವಾದಶೋಧ್ಯಾಯಃ.**



---

೫೭. ಸ್ತ್ರೀಯರು ಈ ಪ್ರಕಾರ ಸಾಮರ್ಥ್ಯದಿಂದಲೂ; ಬುದ್ಧಿವಂತಿಕೆಯಿಂದಲೂ, ಶುಭಪ್ರದವಾದ ಪ್ರಯತ್ನಗಳಿಂದಲೂ, ಗಂಡಸನ್ನು ಚೆನ್ನಾಗಿ ಸೇವೆ ಮಾಡಿ ಸ್ವಾಧೀನಪಡಿಸಿಕೊಳ್ಳಬೇಕು.

ಎಂಬಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಸ್ತ್ರೀಧರ್ಮವರ್ಣನೆಯೆಂಬ ಹನ್ನೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ತ್ರಯೋದಶೋಽಧ್ಯಾಯಃ

॥ ಬ್ರಹ್ಮೋವಾಚ ॥

ಪ್ರಥಮಂ ಪ್ರತಿಬುದ್ಧ್ಯೇತ ಪ್ರವರ್ತೇತ ಸ್ವಕರ್ಮಸು ।
ಪಶ್ಚಾತ್ ಭೃತ್ಯಜನಸ್ಯಾಪಿ ಭುಂಜೀತ ಚ ಶಯೀತ ಚ ॥ ೧ ॥

ಭರ್ತ್ರಾವಿರಹಿತಾ ಸ್ತ್ರೀ ಚ ಶ್ವಶುರಾಭ್ಯಾಂ ವಿಶೇಷತಃ ।
ದೇಹಲೀಂ ನಾತಿವರ್ತೇತ ಪ್ರತೀಕಾರೇ ಮಹತ್ಯಪಿ ॥ ೨ ॥

ಉತ್ಥಾಯ ಪ್ರಥಮಂ ಭರ್ತುರವಿಜ್ಞಾತಾ ನ ನಿಷ್ಕ್ರಮೇತ್ ।
ಕ್ಷಪಾಯಾಂ ಸಾವಶೇಷಾಯಾಂ ರಾತ್ರೌ ವಾ ವಾಸರಾದಿಷು ॥ ೩ ॥

---

### ಹದಿಮೂರನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಹೆಂಗಸು ಮೊದಲು ಹಾಸಿಗೆಯನ್ನು ಬಿಟ್ಟೆದ್ದು ತನ್ನ ಕೆಲಸಕ್ಕೆ ತೊಡಗಬೇಕು. ಮನೆಯ ಆಳುಗಳು ಊಟಮಾಡಿದ ಮೇಲೆ ತಾನೂ ಊಟಮಾಡಿ ಮಲಗಬೇಕು.

೨. ಗಂಡನು ಊರಲ್ಲಿಲ್ಲದಾಗ, ಮೇಲಾಗಿ ಅತ್ತೆಮಾವಂದಿರೂ ಇಲ್ಲದ್ದಾಗ ಮಾಡಬೇಕಾದ ಬಹಳ ಕೆಲಸವಿದ್ದರೂ ಹೊಸಲಿನಿಂದಾಚೆ ಹೋಗಬಾರದು.

೩. ಗಂಡನಿಗಿಂತ ಮೊದಲೇ ಏಳಬೇಕು. ರಾತ್ರಿ ಅಥವಾ ಬೆಳಗಿನ ಝಾವದಲ್ಲಿಯೂ, ಹೆಚ್ಚುಕಟ್ಟಲೆಯ ದಿನ, ವಾರ, ಹಬ್ಬ ಮೊದಲಾದವುಗಳಲ್ಲಿಯೂ ಪತಿಗೆ ತಿಳಿಸದೆ ಬೀದಿಯ ಬಾಗಿಲ ಹೊಸಲನ್ನು ದಾಟಬಾರದು.

ತದ್ವ್ಯಾಸಭವನಸ್ಯೈವ ಶನೈರಾಹೂಯ ಕಾರ್ಮಿಕಾನ್ ।
ಸ್ವವ್ಯಾಪಾರೇಷು ತಾನ್ ಸರ್ವಾನ್ ತತ್ರತತ್ರ ನಿಯೋಜಯೇತ್ ॥ ೪ ॥

ವಿಬುದ್ಧಸ್ಯ ತತೋ ಭರ್ತುಃ ನಿರ್ವರ್ತ್ಯಾವಶ್ಯಕಂ ವಿಧಿಂ ।
ಗೃಹಕಾರ್ಯಾಣಿ ಸರ್ವಾಣಿ ವಿದಧೀತಾಪ್ರಮಾದತಃ ॥ ೫ ॥

ಮುಕ್ತ್ವಾವಾಸಕನೇಪಥ್ಯಂ ಕರ್ಮಯೋಗ್ಯಂ ವಿಧಾಯ ಚ ।
ತತ್ಕಾಲೋಚಿತಕರ್ತವ್ಯಮನುತಿಷ್ಠೇದ್ಯಥಾಕ್ರಮಂ ॥ ೬ ॥

ಮಹಾನಸಂ ಸುಸಂಮೃಷ್ಟಂ ಚುಲ್ಲ್ಯಾದಿ ವಿಹಿತಾರ್ಚನಂ ।
ಸರ್ವೋಪಕರಣೋಪೇತಮಸಂಬಂಧಮನಾವಿಲಂ ॥ ೭ ॥

ನಚಾತಿಗುಹ್ಯಂ ಪ್ರಕಟಂ ಪ್ರವಿಭಕ್ತಕ್ರಿಯಾಶ್ರಯಂ ।
ಭರ್ತುರಾಪ್ತಜನಾಕೀರ್ಣಂ ಗೂಢಂ ಕಕ್ಷ್ಯಾದಿವರ್ಜಿತಂ ॥ ೮ ॥

---

೪. ಮನೆಯಲ್ಲಿದ್ದುಕೊಂಡು ಕೆಲಸಗಾರರನ್ನು ಮನೆಗೇ ಮೆಲ್ಲಗೆ ಕರೆದು, ಅವರೆಲ್ಲರನ್ನೂ ಅವರವರ ಕೆಲಸಗಳಲ್ಲಿ ನಿಯಮಿಸಬೇಕು.

೫. ಆಮೇಲೆ ಪತಿಯು ಏಳುತ್ತಲೇ ಆತನಿಗೆ ಸಂಬಂಧಿಸಿದ ಆವಶ್ಯಕಕಾರ್ಯ ವನ್ನು ನೆರವೇರಿಸಿ, ಮರೆಯದೆ ಮನೆಯ ಕೆಲಸಕಾರ್ಯಗಳೆಲ್ಲವನ್ನು ಮಾಡಬೇಕು.

೬. ಭೋಗಕ್ಕೆ ಬೇಕಾದ ವಿಶೇಷವಾದ ಅಲಂಕಾರದಲ್ಲಿ ತೊಡಗದೆ ಆಗಿನ ಕೆಲಸಕ್ಕೆ ಯೋಗ್ಯವಾದಷ್ಟು ಮಟ್ಟಿಗೆ ಶೃಂಗರಿಸಿಕೊಂಡು ಕ್ರಮವಾಗಿ ಆ ಕಾಲೋಚಿತ ವಾದ ಕೆಲಸವನ್ನು ನಡೆಯಿಸಬೇಕು.

೭. ಅಡಿಗೆಯಮನೆಯನ್ನು ಚನ್ನಾಗಿ ಗುಡಿಸಿ, ಒಲೆ ಮೊದಲಾದುವಕ್ಕೆ ರಂಗವಲ್ಲಿ ಮೊದಲಾದುವನ್ನು ಹಾಕಿ, ಪೂಜೆಮಾಡಿ, ಅಡಿಗೆಯ ಉಪಕರಣಗಳನ್ನು ಕೆದರದೆ ಜೋಡಿಸಿರುವಂತೆ ಮಾಡಿ ನಿರ್ಮಲವಾಗಿಟ್ಟಿರಬೇಕು.

೮. ಅಡಿಗೆಗೆ ಬೇಕಾದ ಉಪಕರಣಗಳನ್ನು ಹುಡುಕಿ ಬಹಳ ಕಷ್ಟಪಟ್ಟರೂ ಸಿಕ್ಕದಂತೆ ಬಹಳ ಗುಟ್ಟಾಗಿ ಇಡದೆಯೂ, ಅಥವಾ ಎಲ್ಲರ ಕಣ್ಣಿಗೂ ಬೀಳುವಂತೆ ಅತಿ ಪ್ರಕಟವಾಗಿ ಇಡದೆಯೂ, ಆಯಾ ಕೆಲಸಗಳಿಗೆ ಬೇಕಾದುವನ್ನು ಥಟ್ಟನೆ ದೊರೆಯು ವಂತೆ ಜೋಡಿಸಬೇಕು. ಗಂಡನಿಗೆ ಬೇಕಾದ ಆಪ್ತಜನರು ಮನೆಗೆ ಬರುವ ಸಂದರ್ಭ

ತತ್ರ ಪಾಕಾದಿಭಾಂಡಾನಿ ಬಹಿರಂತಶ್ಚ ಕಾರಯೇತ್ ।
ನಿರ್ಣಿಕ್ತಮಲಪಂಕಾನಿ ಶುಕ್ತಿವಲ್ಕಾದಿಚೂರ್ಣಕೈಃ ॥ ೯ ॥

ನಿಶಿ ಕುರ್ವೀತ ಧೂಮಾರ್ಚಿಃ ಶೋಧಿತಾನಿ ದಿವಾತಪೈಃ ।
ದಧಿಪಾತ್ರಾಣಿ ಕುರ್ವೀತ ಶಿಕ್ಯೇನಾಂತರಿತಾನಿ ಚ ॥ ೧೦ ॥

ಸಾಧುತಾಪಿತದುಗ್ಧೇಷು ಶೋಧಿತೇಷು ದಿವಾತಪೆ ।
ಈಷದ್ಗೃಹ್ಯೋಕ್ತಪಾತ್ರೇಷು ಸ್ವಚ್ಛಂ ಯೇನ ಭವೇದ್ದಧಿ ॥ ೧೧ ॥

ಸ್ನೇಹಗೋರಸಪಾಕಾದಿ ಕೃತ್ವಾ ಸುಪ್ರತ್ಯವೇಕ್ಷಿತಂ ।
ಕುರ್ಯಾತ್ಸ್ವಯಮುಧಿಷ್ಠಾಯ ಭರ್ತುಃ ಪಾಕವಿಧಿಕ್ರಿಯಾಂ ॥ ೧೨ ॥

---

ದಲ್ಲಿ ಅವರ ಕಣ್ಣಿಗೆ ಅಸಹ್ಯವಾಗಿ ಕಾಣದಂತೆ ಗುಪ್ತವಾಗಿ ಯಾವುದಾದರೊಂದು ಸ್ಥಳದಲ್ಲಿ ಆ ಉಪಕರಣಗಳನ್ನು ಇಡಿಸಬೇಕು.

೯. ಪಾತ್ರೆಯ ಕೊಳೆ, ಮಸಿ ಇವುಗಳನ್ನು ಕಪ್ಪೇಚಿಪ್ಪಿನ ತುದಿ, ನಾರಿನ ಜಂಗುಗಳಿಂದ ಚೆನ್ನಾಗಿ ಕೆರೆದು, ಉಜ್ಜಿ ತೊಳೆಯಬೇಕು. ರಾತ್ರಿಕಾಲದಲ್ಲಿ ಬೆಂಕಿಯ ಶಾಖದಿಂದಾಗಲಿ, ಬೆಂಕಿಯ ಜ್ವಾಲೆಯಿಂದಾಗಲಿ, ಹಗಲುಹೊತ್ತು ಬಿಸಿಲಿನಲ್ಲಾಗಲಿ ಒಣಗಿಸಿ ಶುದ್ಧಿಮಾಡಬೇಕು.

೧೦. ಮೊಸರಿನ ಪಾತ್ರೆಗಳನ್ನು ನೆಲುವಿನ ಮೇಲೆ ಒಂದಕ್ಕೊಂದು ತಗಲದಂತೆ ಇಡಬೇಕು.

೧೧ ಚೆನ್ನಾಗಿ ಕಾಯಿಸಿದ ಹಾಲನ್ನು ಹಗಲಿನಲ್ಲಿ ಬಿಸಿಲಿನಿಂದ ಶುದ್ಧಮಾಡಿ, ಅದರಲ್ಲಿ ಸ್ವಲ್ಪ ತೆಗೆದುಕೊಂದು ಮೇಲೆ ಹೇಳಿದ ಪಾತ್ರೆಗಳಲ್ಲಿ ಹಾಕಿದರೆ ನಿರ್ಮಲವಾದ ಮೊಸರಾಗುವುದು.

೧೨. ತುಪ್ಪ, ಎಣ್ಣೆ ಮೊದಲಾದ ಜಿಡ್ಡು ಪದಾರ್ಥಗಳನ್ನೂ, ಮಜ್ಜಿಗೆ ಮೊದಲಾದುವುಗಳನ್ನೂ, ಚೆನ್ನಾಗುವಂತೆ ಇರುವುದಕ್ಕಾಗಿ ತಾನೇ ಮೇಲ್ವಿಚಾರಣೆ ಮಾಡುತ್ತಾ ಗಂಡನಿಗೆ ಇಷ್ಟವಾದ ಅಡಿಗೆಯನ್ನು ಮಾಡಬೇಕು.

**ಕಿಂ ಪ್ರಿಯಂ ಚ ಕಿಮಾಗ್ನೇಯಂ ಷಡ್ರಸಾಭ್ಯಂತರೇಷು ಚ ।**
**ಕಿಂ ಪಥ್ಯಂ ಕಿಮಪಥ್ಯಂ ಚ ಸ್ವಾಸ್ಥ್ಯಂ ವಾಸ್ಯ ಕಥಂ ಭವೇತ್ ॥**
**ಇತಿ ಯತ್ನಾದ್ವಿಜಾನೀಯಾತ್ ಅನುಷ್ಠೇಯಂ ಚ ತತ್ತಥಾ** ॥ ೧೩ ॥

**ನಿತ್ಯಾನುರಾಗಂ ಸತ್ಕಾರಮಾಹಾರಂ ಸುಪರೀಕ್ಷಿತಮ್ ।**
**ಮಹಾನಸಾದೌ ಕುರ್ವೀತ ಜನಮಾಪ್ತಂ ಕ್ರಮಾಗತಂ** ॥ ೧೪ ॥

**ಶತ್ರುಂ ದಾಯಾದಸಂಬಂಧಂ ಕ್ರುದ್ಧಭೀತಾವಮಾನಿತಂ ।**
**ಅವಾಚ್ಯೋಪಗೃಹೀತಂ ವಾ ನೈವಮಾದೀ ನಿಯೋಜಯೇತ್** ॥ ೧೫ ॥

**ಪುನಃ ಪುನಃ ಪ್ರತಿಷ್ಠಾಪ್ಯ ಗುಪ್ತಂ ಸ್ವಯಮಧಿಷ್ಠಿತಂ ।**
**ಭರ್ತುರಾಹಾರಪಾನಾದಿ ವಿದಧ್ಯಾದಪ್ರಮಾದತಃ** ॥ ೧೬ ॥

---

೧೩. ಸಿಹಿ, ಹುಳಿ ಮೊದಲಾದ ಆರು ರಸಗಳಲ್ಲಿ ಗಂಡನಿಗೆ ಯಾವುದು ಇಷ್ಟ, ಬಿಸಿಯಾದುದು ಬೇಕೋ, ತಣ್ಣಗಿರುವುದು ಬೇಕೋ, ಎಂಬುದನ್ನು ತಿಳಿಯಬೇಕು. ಗಂಡನಿಗೆ ಯಾವುದು ಪಥ್ಯವು, ಯಾವುದು ಅಪಥ್ಯವು, ಅವನು ಆರೋಗ್ಯವಾಗಿರ ಬೇಕಾದರೆ ಹೇಗೆ ಸೇವೆಮಾಡಬೇಕೆಂಬುದನ್ನು ತಿಳಿದು ಅದರಂತೆ ಮಾಡಬೇಕು.

೧೪. ಗಂಡನಲ್ಲಿ ಯಾವಾಗಲೂ ಪ್ರೀತಿಯಿಂದ ಉಪಚರಿಸುತ್ತಾ, ಚೆನ್ನಾಗಿ ಪರೀಕ್ಷಿಸಿದ ಆಹಾರವನ್ನು ಕೊಡುತ್ತಾ, ಅಡಿಗೆ ಮೊದಲಾದ ಕೆಲಸಗಳಿಗೆ ಹಿಂದಿನಿಂದ ಕ್ರಮವಾಗಿ ಬಂದ ಆಪ್ತಜನರನ್ನೇ ನಿಯಮಿಸಬೇಕು.

೧೫. ಶತ್ರುವಾದವನು, ಜ್ಞಾತಿಸಂಬಂಧದವನು, ರೇಗಿರುವವನು, ಹೆದರಿ ದವನು, ಅವಮಾನಪಟ್ಟವನು, ನಿಂದೆಗೆ ಗುರಿಯಾದವನು ಇಂಥವರನ್ನು ಅಡಿಗೆ ಮನೆಯ ಕೆಲಸಕ್ಕೆ ನಿಯಮಿಸಬಾರದು.

೧೬. ಮತ್ತೆಮತ್ತೆ ತೆಗೆದಿಟ್ಟು ಸುರಕ್ಷಿತವಾಗಿ ತನ್ನ ಮೇಲ್ವಿಚಾರಣೆಗೆ ಒಳಪಟ್ಟಿ ರುವಂತೆ ನೋಡಿಕೊಂಡು ಗಂಡನಿಗೆ ಬೇಕಾದ ಆಹಾರಪಾನಾದಿಗಳನ್ನು ಎಚ್ಚರದಿಂದ ಏರ್ಪಡಿಸಬೇಕು.

ಸಾಕಂ ನಿರ್ವರ್ತ್ಯ ಗಾತ್ರಾಣಾಂ ಕೃತ್ವಾ ಸ್ವೇದಪ್ರಮಾರ್ಜನಂ ।
ಗಂಧ ತಾಂಬೂಲ ಮಾಲ್ಯಾದಿ ಕಿಂಚಿದಾದಾಯ ಮಾತ್ರಯಾ ॥ ೧೭ ॥

ಯಥೌಚಿತ್ಯಾದಿ ತತ್ಕಾಲೇ ಭರ್ತುರ್ವಿನಯಸಂಭ್ರಮೈಃ ।
ತತ್ಕಾಲಾನುಗತಾತ್ಯರ್ಥಮಾಹಾರಮುಪಪಾದಯೇತ್ ॥ ೧೮ ॥

ಸ್ವಭಾವಾಮಯಕಾಲಾನಾಂ ವೈಪರೀತ್ಯೇನ ಸರ್ವದಾ ।
ಸರ್ವಮಾಹಾರಪಾನಾದಿ ಪ್ರಯೋಜ್ಯಂ ತದ್ವಿದೋ ಜಗುಃ ॥ ೧೯ ॥

ಹೀನತುಲ್ಯಾಧಿಕತ್ವೇನ ಭರ್ತಾ ಪಶ್ಯತಿ ಯಂ ಯಥಾ ।
ತಂ ತಥೈವಾಧಿಕಂ ಪಶ್ಯೇನ್ನ್ಯಾಯತಃ ಪ್ರತಿಪತ್ತಿಷು ॥ ೨೦ ॥

ಸಾಪತ್ನಕಾನ್ಯಪತ್ಯಾನಿ ಪಶ್ಯೇತ್ ಸ್ವೇಭ್ಯೋ ವಿಶೇಷತಃ ।
ಭಗಿನೀವತ್ಸಪತ್ನೀಶ್ಚ ತದ್ಬಂಧೂನ್ನಿಜಬಂಧುವತ್ ॥ ೨೧ ॥

---

೧೭. ಅಡಿಗೆಯನ್ನು ಮಾಡಿದ ಮೇಲೆ ಮೈಬೆವರನ್ನು ಚೆನ್ನಾಗಿ ಒರಸಿಕೊಂಡು ಗಂಧ, ತಾಂಬೂಲ, ಪುಷ್ಪ ಇವುಗಳನ್ನು ತೆಗೆದುಕೊಂಡು ;

೧೮. ಉಚಿತವರಿತು ಆ ಕಾಲಕ್ಕೆ ತಕ್ಕಂತೆ ಗಂಡನಲ್ಲಿ ವಿನಯವುಳ್ಳವಳಾಗಿ ತ್ವರೆಯಿಂದ ಆ ಕಾಲಕ್ಕೆ ತಕ್ಕ ಉಪಹಾರವನ್ನು ಮಾಡಿಕೊಡಬೇಕು.

೧೯. ಯಾವಾಗಲೂ ಸ್ವಭಾವವಾಗಿ ರೋಗ ಉಲ್ಬಣವಾಗುವ ಕಾಲಗಳನ್ನು ಅರಿತು ಆಗ ಆಹಾರ ಬದಲಾವಣೆಯ ಮೂಲಕ ಎಲ್ಲಾ ಬಗೆಯ ಆಹಾರಪಾನಗಳನ್ನೂ ಉಪಯೋಗಿಸಬೇಕೆಂದು ಬಲ್ಲವರು ಹೇಳಿದ್ದಾರೆ.

೨೦. ಗಂಡನು ಯಾವನನ್ನು ಹೀನವಾಗಿ ಕಾಣುವನೋ, ಯಾವನನ್ನು ಸಮಾನನನ್ನಾಗಿ ಕಾಣುವನೋ, ಯಾವನನ್ನು ಮೇಲಾಗಿ ಕಾಣುತ್ತಾನೋ, ತಾನೂ ಅವರನ್ನು ಹಾಗೆಯೇ (ವಿಶೇಷವಾಗಿ) ನ್ಯಾಯಪ್ರಕಾರ ಯೋಗ್ಯತೆ ತಿಳಿದು ಕಾಣಬೇಕು.

೨೧. ಸವತಿಯ ಮಕ್ಕಳನ್ನು ಸ್ವಂತ ಮಕ್ಕಳಿಗಿಂತ ಅತಿಶಯವಾಗಿ ಕಾಣಬೇಕು. ಸವತಿಯರನ್ನು ಸೋದರಿಯರಂತೆಯೂ, ಅವರ ಬಂಧುಜನರನ್ನು ತನ್ನ ಬಂಧುಜನಗಳಂತೆಯೂ ಕಾಣಬೇಕು.

ಗ್ರಾಸಾಚ್ಛಾದಶಿರೋಭ್ಯಂಗಸ್ನಾನಮಂಡನಕಾದಿಕಂ ।
ಸಪತ್ನೀನಾಮಕೃತ್ವಾ ತು ಆತ್ಮನೋಽಪಿ ನ ಕಾರಯೇತ್ ॥ ೨೨ ॥

ವ್ಯಾಧಿತಾನಾಂ ಚಿಕಿತ್ಸಾರ್ಥಮೌಷಧಾದಿಕ್ರಮಾದರಾತ್ ।
ವಿ ದಧ್ಯಾದಾತ್ಮನಸ್ತಾಸಾಂ ಸರ್ವಾಶ್ರಿತ ಜನಸ್ಯ ಚ ॥ ೨೩ ॥

ತಚ್ಛೋಕೇ ಶುಚಮಾದದ್ಯಾತ್ ತತ್ತುಷ್ಟ್ಯಾ ಮುದಮಾವಹೇತ್ ।
ಭೃತ್ಯಬಂಧುಸಪತ್ನೀನಾಂ ತುಲ್ಯದುಃಖಸುಖಾ ಭವೇತ್ ॥ ೨೪ ॥

ಲಬ್ಧಾವಕಾಶಾ ಸ್ವಸ್ಯಾಚ್ಚ ನಿಶಿ ಸುಪ್ತೋತ್ಥಿತಾ ಕ್ರಮಾತ್ ।
ಅನ್ಯತ್ರ ವ್ಯಯಕರ್ತಾರಂ ಪತಿಂ ರಹಸಿ ಬೋಧಯೇತ್ ॥ ೨೫ ॥

ಯದವದ್ಯಂ ಸಪತ್ನೀನಾಂ ಸ್ವಯಮುಸ್ಮೈ ನ ತದ್ವದೇತ್ ।
ದೌಃಶೀಲ್ಯಾದಿ ತು ಸಾಪಾಯಂ ಗೂಢಮುಸ್ಮೈ ನಿವೇದಯೇತ್ ॥ ೨೬ ॥

---

೨೨. ಊಟ, ಉಡಿಗೆತೊಡಿಗೆಗಳು, ತಲೆಗೆ ಎಣ್ಣೆಹಚ್ಚಿಕೊಂಡು ಸ್ನಾನ ಮಾಡುವುದು (ಎರೆದುಕೊಳ್ಳುವುದು), ಒಡವೆಗಳಿಂದ ಅಲಂಕರಿಸಿಕೊಳ್ಳುವುದು, ಈ ಕೆಲಸಗಳನ್ನು ಸವತಿಯರು ಮಾಡಿಕೊಳ್ಳದೆ ಇರುವಾಗ ತಾನೂ ಮಾಡಿಕೊಳ್ಳ ಬಾರದು.

೨೩. ರೋಗಿಗಳಾದ ಸಪತ್ನೀಬಂಧುಗಳು, ತನ್ನ ಬಂಧುಗಳು, ಆಶ್ರಿತಜನರ ಬಂಧುಗಳು. ಇವರಿಗೆಲ್ಲಾ ಚಿಕಿತ್ಸೆಯನ್ನು (ಔಷಧೋಪಚಾರವನ್ನು) ಮಾಡಬೇಕು.

೨೪. ಅವರಿಗೆ ದುಃಖವುಂಟಾದ ಕಾಲದಲ್ಲಿ ತಾನೂ ದುಃಖಪಟ್ಟು ಅವರಿಗೆ ಸಂತೋಷವಾದಾಗ ತಾನೂ ಸಂತೋಷಪಡಬೇಕು. ಸೇವಕರು, ಬಂಧುಗಳು, ಸವತಿಯರು ಇವರ ಸುಖದುಃಖಗಳಲ್ಲಿ ತಾನೂ ಬೆರೆಯಬೇಕು.

೨೫. ರಾತ್ರಿ ಗಂಡನೊಡನೆ ಮಲಗಿದಾಗ ಅವಕಾಶಪಡೆದಾಗಲಿ, ಮಲಗಿದ್ದು ಹಾಸಿಗೆ ಬಿಟ್ಟೆದ್ದಾಗಲಾಗಲಿ ಗಂಡನು ಬೇರೆದಾರಿಯಲ್ಲಿ ಖರ್ಚುಮಾಡುವುದರ ಅನು ಕೂಲ ಪ್ರತಿಕೂಲಗಳನ್ನು ಗುಟ್ಟಾಗಿ ತಿಳಿಸಬೇಕು.

೨೬. ಸವತಿಯರಲ್ಲಿ ಕಂಡ ದೋಷವನ್ನು ತಾನು ಗಂಡನಿಗೆ ಹೇಳಬಾರದು. ಕೇಡನ್ನುಂಟುಮಾಡುವ ಸವತಿಯರ ದುಃಶೀಲತೆ ಮೊದಲಾದುವನ್ನು ಇವನಿಗೆ ಗುಟ್ಟಾಗಿ ತಿಳಿಸಬೇಕು.

ದುರ್ಭಗಾಮನಪತ್ಯಾಂ ವಾ ಭರ್ತ್ರಾ ಚಾತಿತಿರಸ್ಕೃತಾಂ ।
ಅಮುಷ್ಯಾಂ ಸಮ್ಯಗಾಶ್ವಾಸ್ಯ ತೇನೈಕಾಮನುಕೂಲಯೇತ್ ॥ ೨೭ ॥

ತಥಾ ವಾಗ್ದಂಡಪಾರುಷ್ಯೈಃ ಜನಂ ಭರ್ತ್ರಾ ವಿಪೀಡಿತಂ ।
ಕುರ್ಯಾದ್ವಿಧೇಯಮಾಶ್ವಾಸ್ಯ ನ ಚೇದ್ದ್ವೇಷಾಯ ತದ್ಭವೇತ್ ॥ ೨೮ ॥

ಮತ್ವಾತ್ಮನೋಽನಪತ್ಯತ್ವಂ ಕಾಲಂ ಚಾಪಿ ಗತಂ ಬಹುಂ ।
ಸಂತಾನಾದಿಕಮುದ್ದಿಶ್ಯ ಕಾರ್ಯಮಾತ್ಮನಿವೇದನಂ ॥ ೨೯ ॥

ಯಚ್ಚಾನ್ಯದಪಿ ಜಾನೀಯಾತ್ ಕಿಂಚಿದಸ್ಯ ಚಿಕೀರ್ಷಿತಂ ।
ತತ್ಕಿಲಾಜಾನತೀವಾಸ್ಯ ಸಿದ್ಧಮೇವ ಪ್ರದರ್ಶಯೇತ್ ॥ ೩೦ ॥

ವೈವಾಹಿಕಂ ವಿಧಿಂ ಭರ್ತುಃ ಸರ್ವಂ ಕೃತ್ವಾ ಸಸಂಭ್ರಮಂ ।
ಪರಿಣೀತಾಂ ಚ ತಾಂ ಪಶ್ಯೇತ್ ನಿತ್ಯಂ ಭಗಿನಿಕಾಮಿವ ॥ ೩೧ ॥

---

೨೭. ಕುರೂಪಿಯಾಗಿ, ಮಕ್ಕಳಿಲ್ಲದೆ, ಗಂಡನ ವಿಶೇಷ ತಿರಸ್ಕಾರಕ್ಕೊಳಗಾಗಿರುವ ಸಪತ್ನಿಸ್ತ್ರೀಯನ್ನು ಚೆನ್ನಾಗಿ ಸಂತವಿಟ್ಟು, ಗಂಡನು ಅವಳಿಗೆ ಅನುಕೂಲನಾಗುವಂತೆ ಮಾಡಬೇಕು

೨೮. ಮತ್ತು ಗಂಡನು ಬೈದು, ಹೊಡೆದು, ವಿಶೇಷವಾಗಿ ತೊಂದರೆಪಡಿಸಿದ ಜನರನ್ನು ಬಾಧಕವಿಲ್ಲದ ಪಕ್ಷದಲ್ಲಿ ಸಮಾಧಾನಮಾಡಿ ಅವರು ವಿಧೇಯರಾಗುವಂತೆ ಮಾಡಬೇಕು.

೨೯. ತನಗೆ ಮಕ್ಕಳಿಲ್ಲದೆ ಬಹುಕಾಲ ಕಳೆದಿರುವುದನ್ನು ಜ್ಞಾಪಿಸಿಕೊಂಡು ಅದಕ್ಕಾಗಿ ತನಗೆ ತೋರಿದ ಸಲಹೆಯನ್ನು ತಾನೇ ಕೊಡಬೇಕು.

೩೦. ಇವನು ಮತ್ತೇನಾದರೂ ಮಾಡಲು ಉದ್ದೇಶಿಸಿರುವನೇ ಎಂಬುದನ್ನು ತಿಳಿಯಬೇಕು. ಅದನ್ನು ತಾನೂ ಅರಿಯದಂತೆಯೇ ಇದ್ದು ಅವನು ಮಾಡಲಿಚ್ಛಿಸುವುದು ಸಾಧುವೆಂದೇ ಅಭಿಪ್ರಾಯ ತೋರಿಸಬೇಕು.

೩೧. ತನಗೆ ಮಕ್ಕಳಿಲ್ಲದ ಕಾರಣದಿಂದ ಬೇರೆ ಕನ್ಯೆಯನ್ನು ಗಂಡನು ಮದುವೆಯಾಗುವ ಸಂದರ್ಭದಲ್ಲಿ ಮದುವೆಗೆ ಬೇಕಾದ ಸಲಕರಣೆಗಳೆಲ್ಲವನ್ನೂ ಸಡಗರದಿಂದ ಸಿದ್ಧಮಾಡಬೇಕು. ಆರೀತಿ ಮದುವೆಯಾದ ಹುಡುಗಿಯನ್ನು ಯಾವಾಗಲೂ ಸೋದರಿಯಂತೆ ಕಾಣಬೇಕು.

ಪೂಜಾಂ ಸಂಬಂಧಿವರ್ಗಸ್ಯ ಮಂಗಲಂ ಮಂಡಲಾನಿ ಚ ।
ಕುರ್ಯಾದಭಿನವೋಢಾಯಾಃ ಸುಪ್ರಹೃಷ್ಟೇನ ಚೇತಸಾ ॥ ೩೨ ॥

ಮಾತೃವಚ್ಛಿಕ್ಷಯೇದೇನಾಂ ಗೃಹಕೃತ್ಯೇಷ್ವಮತ್ಸರಾ ।
ಪ್ರದೇಶಿಕವಿಧಿಂ ವಾಸ್ಯಾ ವಿದಧ್ಯಾದ್ಯತ್ನತಃ ಸ್ವಯಂ ॥ ೩೩ ॥

ಏವಂ ಭರ್ತುರಭಿಪ್ರಾಯ ಸರ್ವಮಿತ್ಯಾದಿಕಾರಯೇತ್ ।
ಸುಖಾರ್ಥಂ ವಾಪಿ ಸಂತ್ಯಜ್ಯ ಸ್ತ್ರೀಣಾಂ ಭರ್ತಾಧಿದೇವತಾ ॥ ೩೪ ॥

ಭರ್ತಾಧಿದೇವತಾ ನಾರ್ಯಾ ವರ್ಣಾ ಬ್ರಾಹ್ಮಣದೇವತಾಃ ।
ಬ್ರಾಹ್ಮಣಾ ಹ್ಯಗ್ನಿದೇವಾಸ್ತು ಪ್ರಜಾ ರಾಜನ್ಯದೇವತಾಃ ॥ ೩೫ ॥

ತಾಸಾಂ ತ್ರಿವರ್ಗಸಂಸಿದ್ಧ್ಯೈ ಪ್ರದಿಷ್ಟಂ ಕಾರಣದ್ವಯಂ ।
ಭರ್ತುರ್ಯದನುಕೂಲತ್ವಂ ಯಚ್ಚ ಶೀಲಮವಿಪ್ಲುತಂ ॥ ೩೬ ॥

---

೩೨. ಈ ಮದುವೆಯ ಸಂದರ್ಭದಲ್ಲಿ ಮದುವೆಗೆ ಬಂದಿದ್ದ ನೆಂಟರಿಗೂ, ಹೆಣ್ಣಿನ ಕಡೆಯವರಿಗೂ; ಅರಿಶಿನ, ಕುಂಕುಮ ಮೊದಲಾದ ಮಂಗಳದ್ರವ್ಯಗಳನ್ನು ಸಂತೋಷದಿಂದ ಕೊಟ್ಟು ಉಪಚರಿಸಬೇಕು.

೩೩. ಈ ಹುಡುಗಿಯಲ್ಲಿ ಮತ್ಸರ ತೋರಿಸದೆ, ತಾಯಿಯಂತೆ ಮನೆಯ ಕೆಲಸಗಳನ್ನು ಕಲಿಸಿಕೊಡಬೇಕು. ತಾನೇ ಪ್ರಯತ್ನಪಟ್ಟು ಇವಳಿಗೆ ನಡೆವಳಿಕೆಯ ಮಾರ್ಗವನ್ನು ತೋರಿಸಬೇಕು.

೩೪. ಹೀಗೆ ತನ್ನ ಸುಖವನ್ನಾದರೂ ಬಿಟ್ಟು ಗಂಡನ ಮನಸ್ಸಿಗೆ ಒಪ್ಪುವಂತೆ ಎಲ್ಲವನ್ನೂ ಮಾಡಬೇಕು ಹೆಂಗಸರಿಗೆ ಗಂಡನೇ ದೇವರಲ್ಲವೆ.

೩೫. ಹೆಂಗಸರಿಗೆ ಗಂಡನೇ ದೇವರು, ಜಾತಿಗಳಿಗೆ ಬ್ರಾಹ್ಮಣನು ದೇವರು, ಬ್ರಾಹ್ಮಣನಿಗೆ ಅಗ್ನಿಯು ದೇವರು, ಪ್ರಜೆಗಳೇ ರಾಜನಿಗೆ ದೇವರು.

೩೬. ಮಾನಿನಿಯರಿಗೆ ಧರ್ಮಾರ್ಥಕಾಮಗಳು ಲಭಿಸುವುದಕ್ಕೆ ಗಂಡನಿಗೆ ಅನುಕೂಲಳಾಗಿರುವುದೊಂದು, ನಡತೆಯು ಕೆಡದಿರುವುದೊಂದು, ಇವೆರಡೂ ಸಾಧನ ಗಳಾಗಿವೆ.

ನ ತಥಾ ಯೌವನಂ ಲೋಕೇ ನಾಪಿ ರೂಪಂ ನ ಭೂಷಣಂ ।
ಯಥಾ ಪ್ರಿಯಾನುಕೂಲತ್ವಂ ಸಿದ್ಧಂ ಶಶ್ವದನೌಷಧಂ ॥ ೩೭ ॥

ವಯೋರೂಪಾದಿಹಾರಿಣ್ಯೋ ದೃಶ್ಯಂತೇ ದುರ್ಭಗಾಃ ಸ್ತ್ರಿಯಃ ।
ವಲ್ಲಭಾ ಮಂದರೂಪಾಶ್ಚ ಬಹ್ವ್ಯೋ ಗಲಿತಯೌವನಾಃ ॥ ೩೮ ॥

ತಸ್ಮಾತ್ಪ್ರಿಯತ್ವಂ ಲೋಕಾನಾಂ ನಿದಾನಂ ಯೋಗ್ಯತಾಪರಂ ।
ತಾಂ ವಿನಾನ್ಯೇ ಗುಣಾ ವಂಧ್ಯಾಃ ಸರ್ವೇऽನರ್ಥಕೃತೋಪಿ ವಾ ॥ ೩೯ ॥

ತಸ್ಮಾತ್ಸರ್ವಪ್ರಯತ್ನೇನ ವಿದಧ್ಯಾದಾತ್ಮಯೋಗ್ಯತಾಂ ।
ಪರಚಿತ್ತಜ್ಞತಾಚಾಸ್ಯಾ ಮೂಲಂ ಸರ್ವಕ್ರಿಯಾಸ್ವಿಹ ॥ ೪೦ ॥

---

೩೭ ಗಂಡನು ಯಾವಾಗಲೂ ತನಗೆ ಅನುಕೂಲ (ವಶ) ನಾಗಿ ಇದ್ದಾಗ ಅವನನ್ನು ವಶಪಡಿಸಿಕೊಳ್ಳುವುದಕ್ಕೋಸ್ಕರ ಬೇರೆ ಮೂಲಿಕಾದಿಗಳು ಲೋಕದಲ್ಲಿ ಹೇಗೆ ಆವಶ್ಯಕವಿಲ್ಲವೋ ಹಾಗೆ ಇವಳ ಯೌವನವಾಗಲಿ, ರೂಪವಾಗಲಿ, ಒಡವೆವಸ್ತುಗಳಾಗಲಿ, ಇವು ಯಾವುವೂ ಅವನನ್ನು ಒಲಿಸಿಕೊಳ್ಳಲು ಅವಶ್ಯವಲ್ಲ.

೩೮. ಕೆಲವರು ಕುರೂಪಿಗಳಾದ ಸ್ತ್ರೀಯರು ಕಲ್ಪಿತ ವಯೋರೂಪಾದಿಗಳಿಂದ ಪುರುಷರ ಮನಸ್ಸನ್ನು ಆಕರ್ಷಿಸುತ್ತಿರುವುದನ್ನು ಕಾಣುತ್ತೇವೆ. ಎಷ್ಟೋಮಂದಿ ಮಹಿಳೆಯರು ಪ್ರಾಯಕಳೆದು ಮುಪ್ಪು ಒದಗಿದ್ದರೂ, ಸೌಂದರ್ಯ ಕ್ಷೀಣಿಸಿದ್ದರೂ ತಮ್ಮ ಪತಿಗೆ ಪ್ರಿಯೆಯರಾಗಿಯೇ ಇರುತ್ತಾರೆ,

೩೯. ಆದುದರಿಂದ ಜನಾನುರಾಗಿಯಾಗುವುದಕ್ಕೆ ಶ್ರೇಷ್ಠವಾದ ಯೋಗ್ಯತೆಯಿರುವುದೇ ಮುಖ್ಯ ಈ ಯೋಗ್ಯತೆ ಇಲ್ಲದಿದ್ದರೆ ಉಳಿದವುಗಳೆಲ್ಲವೂ ವ್ಯರ್ಥ ಒಂದುವೇಳೆ ಅವು ಕೇಡನ್ನು ಉಂಟುಮಾಡಿದರೂ ಮಾಡಬಹುದು.

೪೦. ಆದುದರಿಂದ ಬಹು ಪ್ರಯತ್ನಪಟ್ಟಾದರೂ, ತನಗೆ ಈ ಯೋಗ್ಯತೆಯನ್ನುಂಟುಮಾಡಿಕೊಳ್ಳಬೇಕು. ಎಲ್ಲಾ ಕಾರ್ಯಗಳಲ್ಲೂ ಇತರರ ಅಭಿಪ್ರಾಯವನ್ನು (ಮನಸ್ಸನ್ನು) ತಿಳಿದು ನಡೆಯುವುದು ಈ ಯೋಗ್ಯತೆಯುಂಟಾಗಲು ಸಾಧನವಾಗಿದೆ.

**ಬಹಿರಾಗಚ್ಛತೋ ಜ್ಞಾತ್ವಾ ಕಾಲಂ ಸಂಮೃಜ್ಯ ಭೂಮಿಕಾಂ ।**
**ಸಜ್ಜೀಕೃತಾಸನಾ ತಿಷ್ಠೇತ್ತಸ್ಯಾಜ್ಞಾಂ ಪ್ರತಿತತ್ಪರಾ　　॥ ೪೧ ॥**

**ಸ್ವಯಂ ಪ್ರಕ್ಷಾಲಯೇತ್ಪಾದಾವುತ್ಥಾಯ ಪರಿಚಾರಿಕಾ ।**
**ತಾಲವೃಂತಾದಿಕೈಃ ಕುರ್ಯಾತ್ ಶ್ರಮಸ್ವೇದಾಪನೋದನಂ　　॥ ೪೨ ॥**

**ಆಹಾರಸ್ನಾನಪಾನಾದೌ ಸಸ್ಪೃಹಂ ಯತ್ರ ಲಕ್ಷಯೇತ್ ।**
**ತದಿಂಗಿತಜ್ಞಾ ತತ್ವೇನ ಸಿದ್ಧಮಸ್ಮೈ ನಿವೇದಯೇತ್　　॥ ೪೩ ॥**

**ಸಪತ್ನೀ ಪತಿಬಂಧೂನಾಂ ಭರ್ತೃಚಿತ್ತಾನುಕೂಲ್ಯತಃ ।**
**ಪ್ರತಿಪತ್ತಿಂ ಪ್ರಯುಂಜೀತ ಸ್ವಬಂಧೂನಾಂ ನ ವೈ ತಥಾ　　॥ ೪೪ ॥**

---

೪೧　ಗಂಡನು ಹೊರಗೆ ಹೋಗಿದ್ದು ಬರುವ ಸಮಯವನ್ನು ತಿಳಿದು ನೆಲವನ್ನು ಚೊಕ್ಕಟವಾಗಿ ಗುಡಿಸಿ, ಕುಳಿತುಕೊಳ್ಳುವ ಪೀಠವನ್ನು ಸಿದ್ಧಪಡಿಸಿ, ಅವನ ಆಪ್ಪಣೆಯನ್ನು ನಿರೀಕ್ಷಿಸುತ್ತಿರಬೇಕು.

೪೨.　ಉಪಚರಿಸಲು ತಾನೇ ಎದ್ದು ಗಂಡನ ಪಾದಗಳನ್ನು ತೊಳೆಯಬೇಕು. ಬೀಸಣಿಗೆಯಿಂದ ಗಾಳಿ ಬೀಸಿ ಆತನ ಆಯಾಸವನ್ನೂ, ಬೆವರನ್ನೂ ಹೋಗಲಾಡಿಸಬೇಕು.

೪೩.　ಆಹಾರ, ಸ್ನಾನ, ಪಾನ, ಇತ್ಯಾದಿಗಳಲ್ಲಿ ಇವನಿಗೆ (ಪತಿಗೆ) ಯಾವುದರಲ್ಲಿ ಇಚ್ಛೆಯಿದೆ ಎಂಬುದನ್ನು ನೋಡಿಕೊಳ್ಳಬೇಕು. ನಿಜವಾಗಿ ಅವನ ಮನೋಭಿಪ್ರಾಯವನ್ನು ತಿಳಿದು "ತಮಗೆ ಇಷ್ಟವಾದುದು ಸಿದ್ಧವಾಗಿದೆ" ಎಂದು ಅವನಿಗೆ ತಿಳಿಸಬೇಕು.

೪೪.　ಗಂಡನ ಮನಸ್ಸಿಗೆ ಅನುಕೂಲೆಯಾಗಿರಬೇಕೆಂದು ಆಶಿಸುವವಳು ತನ್ನ ಸವತಿಯ ಬಂಧುಗಳು, ಮತ್ತು ಗಂಡನ ಬಂಧುಗಳು, ಇವರನ್ನು ವಿಶೇಷವಾಗಿ ಉಪಚರಿಸುತ್ತ ಇರಬೇಕು. ತನ್ನ ಸ್ವಂತ ಬಂಧುಗಳಿಗೆ ಉಪಚರಿಸುವುದರಲ್ಲಿ ಅಷ್ಟೊಂದು ಆದರ ತೋರಿಸಬಾರದು.

ತೇಷು ಚಾತ್ಮನಿ ಚ ಜ್ಞಾತ್ವಾ ಭರ್ತೃಚಿತ್ತಂ ಪ್ರಸಾದಯೇತ್ ।
ಪ್ರತಿಪತ್ತಿಂ ತಥಾಪ್ಯೇಷಾಂ ನಾದ್ರಿಯೇತ ಸ್ವಬಂಧುಷು ॥ ೪೫ ॥

ಅಪಿ ಭರ್ತುರಭಿಪ್ರೇತಂ ನಾರೀ ತತ್ಕುಲವಾಸಿನೀ ।
ಸತ್ಕಾರೈರ್ನಿಜಬಂಧೂನಾಂ ತೇನ ನೋಪೈತಿ ವಾಚ್ಯತಾಂ ॥ ೪೬ ॥

ಪೂಜ್ಯ ಏವ ಹಿ ಸಂಬಂಧಃ ಸರ್ವಾವಸ್ಥಾಸು ಯೋಷಿತಾಂ ।
ಕಸ್ತತೋಽಪ್ಯುಪಕಾರಾಂಶಂ ಲಿಪ್ಸೇತ ಕುಲಜಃ ಪುಮಾನ್ ॥ ೪೭ ॥

ಸಂಪೂಜ್ಯ ಸ್ವಸುತಾಂ ತಸ್ಮೈ ವಿಧಿವತ್ಪ್ರತಿಪಾದ್ಯತೆ ।
ತತೋಽಸ್ಯಾ ಲಿಪ್ಸತೇನಾಮ ಕಿಮಕಾರ್ಯಮತಃ ಪರಂ ॥ ೪೮ ॥

ಕನ್ಯಾಂ ಪ್ರದಾಯ ಯೈರ್ವೃತ್ತಿರಾತ್ಮನಃ ಪರಿಕಲ್ಪ್ಯತೇ ।
ವಾಸಭಂಡನಟಾದೀನಾಂ ಮಾರ್ಗೋಽಯಂ ನ ಮಹಾತ್ಮನಾಂ ॥ ೪೯ ॥

---

೪೫ ತನ್ನ ವಿಷಯದಲ್ಲೂ, ಆ ಬಂಧುಗಳ ವಿಷಯದಲ್ಲಿಯೂ, ಗಂಡನ ಮನಸ್ಸು ಹೇಗಿದೆ ಎಂಬುದನ್ನು ತಿಳಿದು, ಅದು ಅನನುಕೂಲವಾಗಿದ್ದರೆ ಸರಿಪಡಿಸಿ ಆತನು ಪ್ರಸನ್ನನಾಗುವಂತೆ ಮಾಡಬೇಕು. ಆದರೂ ಅವರ ಬಂಧುಗಳಿಗೆ ಮಾಡುವಷ್ಟು ಉಪಚಾರವನ್ನು ತನ್ನ ಬಂಧುಗಳಿಗೆ ಮಾಡುವುದಕ್ಕೆ ಹೋಗಬಾರದು

೪೬. ತನ್ನ ಗಂಡನು ಮನೆಯಲ್ಲಿರುವಾಗ ಆತನ ಅಭಿಪ್ರಾಯವನ್ನು ತಿಳಿದು ಅದರಂತೆ ತನ್ನ ಬಂಧುಗಳಿಗೆ ಸತ್ಕಾರಮಾಡಿದರೆ ಆಗ ನಿಂದೆಗೆ ಆಸ್ಪದವಿರುವುದಿಲ್ಲ.

೪೭. ಯಾವ ಸ್ಥಿತಿಯಲ್ಲಿದ್ದಾಗಲೇ ಆದರೂ ಸ್ತ್ರೀಯರಿಗೆ ತಮ್ಮ ಬಂಧುಗಳನ್ನು ಸತ್ಕರಿಸುವುದೆಂಬುದು ವಿಹಿತವೇ ಸರಿ. ಸದ್ವಂಶಜನಾದ ಯಾವ ಪುರುಷನು ಅದಕ್ಕಿಂತ ಹೆಚ್ಚಿನ ಇನ್ನೇನು ಉಪಚಾರವನ್ನು ತಾನೇ ಬಯಸಿಯಾನು ?

೪೮. ಶಾಸ್ತ್ರೋಕ್ತಪ್ರಕಾರ ತನ್ನ ಮಗಳನ್ನು ಪೂಜಿಸಿ ಅವನಿಗೆ ಕೊಟ್ಟಿರುವಾಗ ಅವಳು ತನ್ನ ಹೆಸರನ್ನು ಕೆಡಿಸಿಕೊಂಡರೆ ಇದಕ್ಕಿಂತಲೂ ಅವಳಿಗೆ ಬೇರೆ ಅಕಾರ್ಯವೇನುಂಟು.

೪೯. ಯಾರು ಹೆಣ್ಣುಕೊಟ್ಟು ಅದರಿಂದ ತಮ್ಮ ಜೀವನವನ್ನು ಕಲ್ಪಿಸಿಕೊಳ್ಳುವರೋ, ಅವರು ಕೂಲಿ ಆಳುಗಳು, ನಟರು, ಇವರ ಜೀವನಮಾರ್ಗವನ್ನು ಅನುಸರಿಸಿದ ಹಾಗಾಗುವುದು. ಅದು ಎಂದಿಗೂ ಮಹಾತ್ಮರ ಮಾರ್ಗವಲ್ಲ.

ತಸ್ಮಾತ್ ಸ್ತ್ರೀಬಾಂಧವಾ ನಿತ್ಯಂ ಪ್ರೀತಿಮಾತ್ರೈಕಸಾಧಿನೀಂ ।
ಪ್ರತಿಪತ್ತಿಂ ಸಮಾದದ್ಯುಃ ಸಂಬಂಧಿಭ್ಯಃ ಪ್ರಸಂಗಿನೀಂ ॥ ೫೦ ॥

ತಸ್ಯಾ ಭರ್ತರಿ ರಕ್ಷೇತ ಪ್ರೀತಿಂ ಲೋಕೇ ಚ ವಾಚ್ಯತಾಂ ।
ಆತ್ಮನೋಽಸತ್ಪ್ರವಾದಂ ಚ ಚೇಷ್ಟೇರನ್ ಸಾಧುವೃತ್ತಯಃ ॥ ೫೧ ॥

ಏವಂ ವಿಜ್ಞಾಯ ಸದ್ವೃತ್ತಂ ಸ್ತ್ರೀ ವರ್ತೇತ ತಥಾ ಸದಾ ।
ಯೇನ ತತ್ಪರಿವರ್ಗಸ್ಯ ಭವೇದ್ಭರ್ತುಶ್ಚ ಸಮ್ಮತಾ ॥ ೫೨ ॥

ಪ್ರಿಯಾಪಿ ಸಾಧುವೃತ್ತಾಪಿ ವಿಖ್ಯಾತಾಭಿಜನಾಪಿ ಚ ।
ಜನಾಪವಾದಾತ್ಸಂಪ್ರಾಪ ಸೀತಾನರ್ಥಂ ಸುದಾರುಣಂ ॥ ೫೩ ॥

ಸರ್ವಸ್ಯಾಮಿಷಭೂತತ್ವಾತ್ ಗುಣದೋಷಾನಭಿಜ್ಞತಃ ।
ಪ್ರಾಯೇಣಾವಿನಯೌಚಿತ್ಯಾತ್ ಸ್ತ್ರೀಣಾಂ ವೃತ್ತಂ ಹಿ ದುಷ್ಕರಂ ॥ ೫೪ ॥

---

೫೦. ಆದುದರಿಂದ ಹೆಂಡತಿಯ ಕಡೆಯ ಬಂಧುಗಳು ಯಾವಾಗಲೂ ಪ್ರೀತಿ ಸಾಧಕವಾದ ನಡೆವಳಿಕೆಯನ್ನೇ ಅನುಸರಿಸಬೇಕು. ಇದು ಸಂಬಂಧಿಗಳಿಗೆ ಅನ್ವಯಿಸತಕ್ಕದು.

೫೧. ಹೆಂಗಸು ತನ್ನ ಗಂಡನಲ್ಲಿರುವ ಪ್ರೀತಿಯನ್ನು ಕಾಪಾಡಿಕೊಂಡು ಲೋಕಾಪವಾದವು ತನಗೆ ಬಾರದಂತೆ ನೋಡಿಕೊಳ್ಳಬೇಕು. ಒಳ್ಳೆಯ ನಡತೆಗಳು ಎಂದಿಗೂ ಅಪವಾದ ತರುವುದಿಲ್ಲ.

೫೨. ಹೆಂಗಸು ಹೀಗೆ ಒಳ್ಳೆಯ ನಡೆವಳಿಕೆಯನ್ನು ಚೆನ್ನಾಗಿ ತಿಳಿದುಕೊಂಡು, ಯಾವಾಗಲೂ ಆದರಂತೆ ನಡೆಯಬೇಕು. ಹೀಗೆ ಮಾಡಿದರೆ ಗಂಡನ ಪರಿಜನಕ್ಕೂ, ಗಂಡನಿಗೂ ಇಷ್ಟಳಾಗುವಳು.

೫೩. ಗಂಡನಿಗೆ ಬೇಕಾದವಳಾಗಿರಲಿ, ಒಳ್ಳೆಯ ನಡತೆಯುಳ್ಳವಳಾಗಿರಲಿ, ಪ್ರಸಿದ್ಧವಾದ ವಂಶಜವಳಾಗಿರಲಿ, ಜನಾಪವಾದಕ್ಕೆ ಗುರಿಯಾಗೋಣದರಿಂದ ಭಯಂಕರವಾದ ಕೇಡನ್ನು ಹೊಂದುವಳು.

೫೪. ಎಲ್ಲಾ ಗಂಡಸರ ದೃಷ್ಟಿಗೂ ಗುರಿಯಾಗುವುದರಿಂದಲೂ, ತಾನು ಗುಣದೋಷಗಳನ್ನು ತಿಳಿಯದವಳಾದುದರಿಂದಲೂ, ಪ್ರಾಯಿಕವಾಗಿ ತಗ್ಗಿ ನಡೆಯುವ ಸ್ವಭಾವವಿಲ್ಲದುದರಿಂದಲೂ, ಸ್ತ್ರೀಯರು ನಡತೆಯಲ್ಲಿ ಸರಿ ಎನ್ನಿಸಿಕೊಳ್ಳುವುದು ಶ್ರಮವಾಗುವುದು.

ಅಗೃಹ್ಯತ್ವಾನ್ಮನೋವೃತ್ತೇಃ ಪ್ರಾಯಃ ಕಪಟದರ್ಶನಾತ್ ।
ನಿರಂಕುಶತ್ವಾಲ್ಲೋಕಸ್ಯ ನಿರ್ವಾಚ್ಯಾ ವಿರಲಾಃ ಸ್ತ್ರಿಯಃ ॥ ೫೫ ॥

ದೈವಯೋಗಾದಯೋಗ್ಯತ್ವಾತ್ ವ್ಯವಹಾರಾನಭಿಜ್ಞತಃ ।
ವಾಚ್ಯತಾಪತ್ತಯೋ ದೃಷ್ಟಾಃ ಸ್ತ್ರೀಣಾಂ ಶುದ್ಧೇಪಿ ಚೇತಸಿ ॥ ೫೬ ॥

ತಾಸಾಂ ದೈವಪ್ರತೀಕಾರೋ ನೋಪಭೋಗಾದೃತೇ ಭವೇತ್ ।
ಚಾರಿತ್ರಂ ಲೋಕವೃತ್ತಂ ಚ ಏತಯೋರ್ವಿದುರೌಷಧಂ ॥ ೫೭ ॥

ಹಿಂದೋಲಕಾದಿ ಕ್ರೀಡಾಯಾಂ ಪ್ರಸಕ್ತಾಂ ತರುಣೀಂ ನಿಶಿ ।
ರಮಮಾಣಾ ವಿಟೈಸ್ಸಾರ್ಧಂ ವಿಧವಾಂ ಸ್ವೈರಚಾರಿಣೀಂ ॥ ೫೮ ॥

ವೃದ್ಧಾದಿಭಾರ್ಯಾಂ ಸಜ್ಜಾಂ ಚ ಪಾನಗೇಯಾದಿ ಸಂಗಿನೀಂ ।
ಕಃ ಶ್ರದ್ಧಧ್ಯಾತ್ ಸತೀತ್ಯೇವಂ ಸಾಧ್ವೀಮಪಿ ಹಿ ಯೋಷಿತಂ ॥ ೫೯ ॥

---

೫೫. ಮನೆಯ ಆಡಳಿತವನ್ನು ನಡೆಯಿಸುವ ಯೋಗ್ಯತೆಯಿಲ್ಲದ್ದರಿಂದಲೂ, ಪ್ರಾಯಿಕವಾಗಿ ಮನೋವೃತ್ತಿಯಲ್ಲಿ ಕಪಟ ಕಾಣುವುದರಿಂದಲೂ, ನಿಯತವಾದ ನಿಬಂಧನೆಗೆ ಸಿಕ್ಕದಿರುವುದರಿಂದಲೂ ಅಪವಾದಕ್ಕೆ ಗುರಿಯಾಗದ ಹೆಂಗಸರು ಬಹಳ ಕಡಿಮೆ.

೫೬. ದುರದೃಷ್ಟವಶದಿಂದಲೂ, ಯೋಗ್ಯತೆ ಸಾಲದುದರಿಂದಲೂ, ಲೋಕ ವ್ಯವಹಾರವನ್ನು ತಿಳಿಯದುದರಿಂದಲೂ, ಸ್ತ್ರೀಯರಿಗೆ ಮನಸ್ಸು ಶುದ್ಧವಾಗಿದ್ದರೂ ಜನಾಪವಾದ ರೂಪಗಳಾದ ವಿಪತ್ತುಗಳು ಪ್ರಾಪ್ತವಾಗುವುವು.

೫೭. ಹೀಗಾದಾಗ ಅವರಿಗೆ ಅದನ್ನು ಅನುಭವಿಸುವುದು ಹೊರತು ಅವರ ಅದೃಷ್ಟಕ್ಕೆ ಬೇರೆ ಮಾರ್ಗವೇ ಇಲ್ಲ. ಒಳ್ಳೆಯ ನಡೆವಳಿಕೆಯಿಂದಿರುವುದು ಲೋಕದ ಜನರಿಗೆ ಒಳ್ಳೆಯ ಅಭಿಪ್ರಾಯ ಹುಟ್ಟಿಸುವುದೂ ಇವೇ ಇದಕ್ಕೆ ಔಷಧಗಳು.

೫೮. ರಾತ್ರಿಯಲ್ಲಿ ವಿಹಾರಮಾಡುವುದರಲ್ಲಿ ಆಸಕ್ತಳು, ಪೂರ್ವವಯಸ್ಸಿನವಳಾಗಿದ್ದರೂ ವಿಟರ ಜತೆಯಲ್ಲಿ ಕ್ರೀಡಿಸುವವಳು, ಮನಸ್ವೇಚ್ಛೆಯಿಂದ ನಡೆವ ವಿಧವೆ, ಇವರುಗಳೂ

೫೯. ಅಶಕ್ತನ ಅಥವಾ ಮುದುಕನ ಹೆಂಡತಿಯಾಗಿದ್ದರೂ ಕ್ರೀಡೆಗೆ ಶೃಂಗರಿಸಿಕೊಳ್ಳುವಳು ಮದ್ಯಪಾಯಿಗಳ ಜತೆಯುಳ್ಳವರು ಇವರು ಪರಿಶುದ್ಧೆಯರಾಗಿದ್ದರೂ ಪತಿವ್ರತೆಯೆಂದು ಜನರು ನಂಬದೆ ಹೋಗುವರು.

ಯೌ ಚಾಸಾಮಿಂಗಿತಾಕಾರೌ ಸಂಧಿಗ್ಧಾರ್ಥಪ್ರಸಾಧಕೌ ।
ತಯೋಸ್ತತ್ತ್ವಪರಿಜ್ಞಾನಂ ವಿಷಯೋ ಯೋಗಿನಾಂ ಯದಿ ॥ ೬೦ ॥

ತಸ್ಮಾದ್ಯಥೋಕ್ತಮಾಚಾರಮನುತಿಷ್ಠೇತ್ಸುಸಂಯುತಃ ।
ಮಿಥ್ಯಾಲಗ್ನೋ ಪ್ಯಸದ್ವಾದಃ ಕಂಪಯತ್ಯೇವ ತತ್ಕುಲಂ ॥ ೬೧ ॥

ತ್ರಿಕುಲ್ಯಾ ವಾಚ್ಯತಾ ರಕ್ಷ್ಯಾ ಪ್ರತಿಷ್ಠಾಪ್ಯಥಸಂತತಿಃ ।
ಭರ್ತುಸ್ತ್ರಿವರ್ಗಸಿದ್ಧಿಶ್ಚ ಸಾಧ್ಯಂ ತತ್ಕುಲಯೋಷಿತಾಂ ॥ ೬೨ ॥

ಪಾತಯಂತ್ಯೇವ ದೌಃಶೀಲ್ಯಾದಾತ್ಮಾನಂ ಸಕುಲತ್ರಯಂ ।
ಉದ್ಧರಂತಿ ತದ್ವೈವೈತಾಃ ಸ್ತ್ರಿಯಶ್ಚಾರಿತ್ರಭೂಷಣಾಃ ॥ ೬೩ ॥

ಭರ್ತ್ಯ ಚಿತ್ತಾನುಕೂಲತ್ವಂ ಯಾಸಾಂ ಶೀಲಮವಿಪ್ಲುತಂ ।
ತಾಸಾಂ ರತ್ನಸುವರ್ಣಾದಿ ಭಾರ ಏವ ನ ಮಂಡನಂ ॥ ೬೪ ॥

---

೬೦. ಇವರ ಅಭಿಪ್ರಾಯಗಳೂ, ಮುಖಚಿಹ್ನಗಳೂ, ಸಂದಿಗ್ಧವಾಗಿ ಊಹಿಸುವುದಕ್ಕೆ ಸಾಧಕಗಳಾಗಿರುವಲ್ಲಿ ಇವುಗಳ ತತ್ವವನ್ನು ತಿಳಿಯುವುದು ಯೋಗಿಗಳಿಗೆ ಮಾತ್ರ ಸಾಧ್ಯವು.

೬೧. ಆದುದರಿಂದ ಮನಸ್ಸನ್ನು ಬಿಗಿಹಿಡಿದು ಹಿಂದೆ ಹೇಳಿದ ಆಚಾರವನ್ನು ನಡೆಯಿಸಬೇಕು. ಕುಹಕಕ್ಕಾಗಿ ಆಡಿದ ಅಪವಾದವಾದರೂ ಆ ಸ್ತ್ರೀಯರ ಕುಲವನ್ನೇ ನಡುಗಿಸುವುದು.

೬೨. ತಂದೆಯ ವಂಶ, ತಾಯ ವಂಶ, ತನ್ನ ವಂಶ, ಇವಕ್ಕೆ ಸೇರಿದ ಯಾವ ವ್ಯಕ್ತಿಯಿಂದಲೂ ಅಪವಾದ ಬಾರದಂತೆ ಹೆಂಗಸು ತನ್ನ ಸ್ಥಿತಿಯನ್ನು ಕಾಪಾಡಿಕೊಳ್ಳಬೇಕು. ಹೀಗಾದರೆ ಹೆಂಗಸರಿಗೆ ಗಂಡನ ತ್ರಿವರ್ಗಸಾಧನವೂ, ಸಂತತಿ ಸ್ಥಾಪನೆಯೂ ಸಾಧ್ಯವು.

೬೩. ಕೆಟ್ಟನಡತೆಯಿಂದ ಸ್ತ್ರೀಯರು ಕುಲತ್ರಯಸಹಿತರಾಗಿ ತಾವೇ ದುರ್ಗತಿಗೆ ಈಡಾಗುವರು. ಹಾಗೆಯೇ ಒಳ್ಳೆಯ ನಡತೆಯಿಂದ ಶೋಭಿತೆಯರಾದ ಸ್ತ್ರೀಯರು ಕುಲವನ್ನೇ ಉದ್ಧರಿಸುವರು.

೬೪. ಗಂಡನ ಮನಸ್ಸಿಗೆ ಒಪ್ಪುವಂತೆ ಯಾರಿರುವರೋ, ಯಾರ ಚರಿತ್ರೆಯು ದುಷ್ಟವಿಷಯಗಳಿಂದ ಕೋಟಲೆಗೊಂಡಿರುವುದಿಲ್ಲವೋ, ಅವರಿಗೆ ರತ್ನಖಚಿತವಾದ ಚಿನ್ನದ ಆಭರಣಗಳು ಕೇವಲ ಭಾರವೇ ಹೊರತು ನಿಜವಾದ ಅಲಂಕಾರಗಳಲ್ಲ.

ಲೋಕಜ್ಞಾನೇ ಪರಾ ಕೋಟಿಃ ಪತ್ಯೌ ಭಕ್ತಿಶ್ಚ ಶಾಶ್ವತೀ ।
ಶುದ್ಧಾನ್ವಯಾನಾಂ ನಾರೀಣಾಂ ವಿದ್ಯಾದೇತತ್ಕುಲವ್ರತಂ ॥ ೬೫ ॥

ತಸ್ಮಾಲ್ಲೋಕಶ್ಚ ಭರ್ತಾ ಚ ಸಮ್ಯಗಾರಾಧಿತೋ ಯಯಾ ।
ಧರ್ಮಮರ್ಥಂ ಚ ಕಾಮಂ ಚ ಸೈವಾಪ್ನೋತಿ ನಿರತ್ಯಯಾ ॥ ೬೬ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸ್ತ್ರೀಧರ್ಮ
ಕಥನಂ ನಾಮ ತ್ರಯೋದಶೋಽಧ್ಯಾಯಃ.



೬೫. ಶುದ್ಧಕುಲದಲ್ಲಿ ಹುಟ್ಟಿದ ಹೆಂಗಸರಿಗೆ ಲೋಕವ್ಯವಹಾರದಲ್ಲಿ ಶ್ರೇಷ್ಠ ಜ್ಞಾನ, ಸ್ಥಿರವಾದ ಪತಿಭಕ್ತಿ. ಇವೇ ಆಭರಣಗಳು. ಅಲ್ಲದೆ ಇದು ಕುಲವ್ರತವೆಂದೂ ತಿಳಿಯಬೇಕು.

೬೬. ಆದುದರಿಂದ ಯಾವಳು ಗಂಡನನ್ನೂ, ಲೋಕವನ್ನೂ, ಚೆನ್ನಾಗಿ ಮೆಚ್ಚಿಸುವಳೋ ಅವಳೇ ಗಂಡನಿಗೆ ಪ್ರಿಯಳಾಗಿ ಅವನಿಂದ ನಿರಾತಂಕವಾಗಿ ಅರ್ಥ ಕಾಮಗಳನ್ನು ಹೊಂದುವಳು.

ಎಂಬಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಸ್ತ್ರೀಧರ್ಮ
ಸ್ವರೂಪ ವರ್ಣನವೆಂಬ ಹದಿಮೂರನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಚತುರ್ದಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಪ್ರೋಷಿತೇ ಮಂಡನಂ ಸ್ತ್ರೀಣಾಂ ಪತ್ಯಾ ಮಂಗಲಮಾತ್ರಕಂ ।
ನಿಷ್ಪಾದನಂ ಚ ಯತ್ನೇನ ತವಾರಬ್ಧಸ್ಯ ಕರ್ಮಣಃ ॥ ೧ ॥

ಶಯ್ಯಾ ಗುರುಸಮೀಪೇ ಸ್ಯಾತ್ ದೇಹಸಂಸ್ಕಾರವರ್ಜನಂ ।
ಸಮುಪಾರ್ಜನಮರ್ಥಾನಾಂ ವ್ಯಯಾನಾಂ ಪರಿಹಾಪಣಂ ॥ ೨ ॥

ವ್ರತೋಪವಾಸತಾತ್ಪರ್ಯಂ ತದ್ವಾರ್ತಾಪರಿಮಾರ್ಗಣಂ ।
ದೈವಜ್ಞೇಕ್ಷಣಿಕಪ್ರಶ್ನೋ ದೇವಾನಾಮುಪಯಾಚನಂ ॥ ೩ ॥

---

## ಹದಿನಾಲ್ಕನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಗಂಡನು ಊರಲ್ಲಿಲ್ಲದೆ ಪರಸ್ಥಲಕ್ಕೆ ಹೋಗಿರುವಾಗ ಹೆಂಗಸರು ಹೆಚ್ಚು ಒಡವೆಗಳನ್ನು ಧರಿಸಬಾರದು. ಓಲೆ, ಬಳೆ ಮೊದಲಾದುವುಗಳನ್ನು ಮಾತ್ರ ಧರಿಸಬೇಕು. ಗಂಡನು ಊರಲ್ಲಿದ್ದಾಗ ಪ್ರಾರಂಭಿಸಿದ ಕೆಲಸವನ್ನು ಅವನು ಬರುವ ಹೊತ್ತಿಗೆ ಮಾಡಿ ಮುಗಿಸಿರಬೇಕು.

೨. ತಾನು ಅತ್ತೆ ಮೊದಲಾದ ಗುರುಜನಗಳ ಹತ್ತಿರ ಮಲಗಬೇಕು. ಅಭ್ಯಂಗ ಮುಂತಾದ ಸಂಸ್ಕಾರಗಳನ್ನು ಮಾಡಿಕೊಳ್ಳಬಾರದು. ಬರಬೇಕಾಗಿದ್ದ ಹಣವನ್ನು ಬರಮಾಡಿಕೊಳ್ಳಬೇಕು. ಸ್ವತಂತ್ರಿಸಿ ಖರ್ಚುಗಳನ್ನು ಮಾಡಬಾರದು.

೩. ವ್ರತ, ಉಪವಾಸ ಇವುಗಳಲ್ಲಿ ಆಸಕ್ತಳಾಗಿರಬೇಕು. ಗಂಡನ ಸುದ್ದಿಯನ್ನು ಯತ್ನದಿಂದ ತಿಳಿಯಬೇಕು. ಜೋಯಿಸರನ್ನು ಕಂಡರೆ, ಗಂಡನ ಕ್ಷೇಮ ಆಗಮನ ಇವುಗಳನ್ನು ಕುರಿತು ಪ್ರಶ್ನೆ ಮಾಡಬೇಕು.

ನಿತ್ಯಂ ತಸ್ಯಾಗಮಾಶಂಸಾ ಕ್ಷೇಮಾರ್ಥಂ ದೇವಪೂಜನಂ ।
ನಚಾತ್ಯುಜ್ಜ್ವಲವೇಷತ್ವಂ ನ ಸದಾ ತೈಲಧಾರಣಂ ॥ ೪ ॥

ಜ್ಞಾತಿವೇಶ್ಮ ನ ಗಂತವ್ಯಂ ಸಕಾಮುಗಮನೇನ ಚ ।
ಗುರೂಣಾಮಾಜ್ಞಯಾ ಯಾವತ್ ಭರ್ತುರಾಪ್ತಜನೈಃಸಹ ॥ ೫ ॥

ತತ್ರಾಪಿ ನ ಚಿರಂ ತಿಷ್ಠೇತ್ ಸ್ನಾನಾದೀನ್ನಾಪಿ ನಾಚರೇತ್ ।
ಯಾವದರ್ಥಂ ಕ್ಷಣಂ ಸ್ಥಿತ್ವಾ ತತಃ ಶೀಘ್ರಂ ಸಮಾಚರೇತ್ ॥ ೬ ॥

ಆಗತೇ ಪ್ರಕೃತಿಸ್ಥೈವ ಕೃತ್ವಾ ತಾತ್ಕಾಲಿಕಂ ವಿಧಿಂ ।
ಮುಕ್ತಪ್ರವಾಸನೇಪಥ್ಯೇ ಸ್ನಾತೇ ಭುಕ್ತವತಿ ಪ್ರಿಯೇ ॥ ೭ ॥

ಆತ್ಮಾನಂ ಸಮಲಂಕೃತ್ಯ ಸವಿಶೇಷಂ ಮುದಾನ್ವಿತಾ ।
ದೇವಪೂಜೋಪಹಾರಾದೀನ್ ದದ್ಯಾತ್ ಪ್ರಾಗುಪಪಾದಿತಾನ್ ॥ ೮ ॥

---

೪. ಯಾವಾಗಲೂ ಅವನ ಆಗಮನವನ್ನು ಕೋರಬೇಕು. ಅವನ ಕ್ಷೇಮಕ್ಕಾಗಿ ದೇವತಾಸೇವೆಯನ್ನು ಮಾಡಬೇಕು. ಪ್ರಕಾಶವಾಗಿ ಅಲಂಕಾರವನ್ನು ಮಾಡಿಕೊಳ್ಳಬಾರದು. ತಲೆಗೆ ಸದಾ ಎಣ್ಣೆ ಹಚ್ಚಿಕೊಳ್ಳುತ್ತಿರಬಾರದು.

೫. ಜ್ಞಾತಿಗಳ ಮನೆಗೆ ಕೆಲಸವಿಲ್ಲದಿದ್ದರೂ ಬೇಕೆಂದು ಹೋಗಬಾರದು. ಆವಶ್ಯಬಿದ್ದಾಗ ಗುರುಗಳ ಅಪ್ಪಣೆ ಪಡೆದು ಗಂಡನ ಆಪ್ತಜನರೊಂದಿಗೆ ಹೋಗಬಹುದು.

೬. ಅಲ್ಲಿ ಬಹಳ ಹೊತ್ತು ನಿಲ್ಲಲೂ ಬಾರದು. ಅಲ್ಲಿ ಸ್ನಾನ ಮೊದಲಾದುವನ್ನು ಮಾಡಬಾರದು. ಕೆಲಸ ಮುಗಿಯುವವರೆಗೆ ಅಥವಾ ಕ್ಷಣಕಾಲದವರೆಗೆ ಇದ್ದು ಆಮೇಲೆ ಬೇಗ ಮನೆಗೆ ಬರಬೇಕು.

೭. ಗಂಡನು ಬಂದಾಗ ಸ್ವಭಾವಸ್ಥಿತಿಯಲ್ಲೇ ಇದ್ದು, ಆಯಾ ಕಾಲದಲ್ಲಿ ಮಾಡಬೇಕಾದ ಕೆಲಸವನ್ನು ಮಾಡಬೇಕು. ಗಂಡನು ಪ್ರವಾಸಕಾಲದಲ್ಲಿ ಧರಿಸಿದ್ದ ಉಡುಪು ಮೊದಲಾದ ಅಲಂಕಾರ (ವೇಷ) ವನ್ನು ತೆಗೆದುಹಾಕಿದ ಮೇಲೆ ಸ್ನಾನ ಮಾಡುವುದಕ್ಕೂ ಭೋಜನಕ್ಕೂ ಅಣಿಮಾಡಬೇಕು.

೮. ದೇಹವನ್ನು ಚೆನ್ನಾಗಿ ಅಲಂಕರಿಸಿಕೊಂಡು ತುಂಬ ಸಂತೋಷದಿಂದ ಕೂಡಿದವಳಾಗಿ ದೇವರಿಗೆ ನಿವೇದನಮಾಡಿ ಸಿದ್ಧಮಾಡಿದ ಉಪಹಾರಾದಿಗಳನ್ನು ಪತಿಗೆ ಕೊಡಬೇಕು.

ಕನಿಷ್ಠಾ ಮಾತೃವಜ್ಜ್ಯೇಷ್ಠಾಂ ತದಪತ್ಯಾನಿ ಚಾತ್ಮವತ್ ।
ಪಶ್ಯೇತ್ತತ್ಪರಿವರ್ಗಂ ತು ನಿತ್ಯಂ ಸ್ವಪರಿವರ್ಗವತ್ ॥ ೯ ॥

ತತ್ಪುರೋವಾಸನೇ ತಿಷ್ಠೇತ್ ಪತಿಂ ನಾಮಂತ್ರಯೇತ ಚ ।
ತದಭಿಪ್ರಾಯತಃ ಕುರ್ಯಾತ್ ಪ್ರವೃತ್ತಿಂ ಸರ್ವಕರ್ಮಸು ॥ ೧೦ ॥

ನ ಸಂಸೃಜೇತ ತದ್ದ್ವಿಷ್ಟೈಃ ಸಖ್ಯಂ ಕುರ್ವೀತ ತತ್ಪ್ರಿಯೈಃ ।
ಜನಮಾಪ್ತತಮಂ ತಸ್ಯಾಂ ಸದಾ ಭರ್ತುಶ್ಚ ಮಾನಯೇತ್ ॥ ೧೧ ॥

ಪೈತೃಕಾತ್ಸಮುಪಾನೀತಂ ವಸುಸೌಗಂಧಿಕಾದಿಕಂ ।
ತಸ್ಮೈ ನಿವೇದ್ಯಾತ್ಮತಯಾ ತದಾ ತದುಪಯೋಜಯೇತ್ ॥ ೧೨ ॥

ಸೋಪಿ ತತ್ಪ್ರೀತಯೇ ಕಿಂಚಿದಾದದ್ಯಾದಲ್ಪಮೂಲ್ಯಕಂ ।
ಸಂಗೋಪ್ಯ ಮಾತೃವತ್ ಸ್ಥೇಯಂ ತತ್ತಥೈವೋಪಯೋಜಯೇತ್ ॥೧೩॥

---

೯. ಬಹುಪತ್ನಿಯರಿದ್ದರೆ, ಕಿರಿಯಹೆಂಡತಿಯು ಹಿರಿಯಹೆಂಡತಿಯನ್ನು ತಾಯಿಯಂತೆಯೂ, ಆಕೆಯ ಮಕ್ಕಳನ್ನು ತನ್ನಂತೆಯೂ, ಅವಳ ಪರಿವಾರದ ಜನರನ್ನು ತನ್ನ ಪರಿಜನರಂತೆಯೂ ಕಾಣಬೇಕು.

೧೦. ಹಿರಿಯ ಹೆಂಡತಿಯ ಸಮುಖದಲ್ಲಿ ಪೀಠದ ಮೇಲೆ ಕುಳ್ಳಿರಬಾರದು. ಮತ್ತು ಗಂಡನನ್ನು ಸ್ವೇಚ್ಛಾನುಸಾರವಾಗಿ ಕರೆಯಬಾರದು. ಎಲ್ಲ ಕೆಲಸಗಳಲ್ಲಿಯೂ ಹಿರಿಯ ಹೆಂಡತಿಯ ಅಭಿಪ್ರಾಯದಂತೆ ನಡೆಯಬೇಕು.

೧೧. ಅವಳ ದ್ವೇಷಿಗಳೊಡನೆ ಸೇರಬಾರದು. ಅವಳಿಗೆ ಬೇಕಾದವರೊಡನೆ ತಾನೂ ಸ್ನೇಹಮಾಡಿಕೊಳ್ಳಬೇಕು. ಹಿರಿಯಹೆಂಡತಿಯ ಆಪ್ತರನ್ನೂ ಗಂಡನ ಆಪ್ತಜನರನ್ನೂ ಮರ್ಯಾದೆಯಿಂದ ಕಾಣಬೇಕು.

೧೨. ತನ್ನ ತವರುಮನೆಯಿಂದ ತಂದ ಹಣ, ಕಾಸು, ಸುಂಗಧದ್ರವ್ಯ ಮೊದಲಾದುವನ್ನು ಪತಿಗೆ ತಿಳಿಯಪಡಿಸಿ ಆಮೇಲೆ ಅದನ್ನು ತನ್ನದೆಂದು ಉಪಯೋಗಿಸಿಕೊಳ್ಳಬಹುದು.

೧೩. ಪತ್ನಿಯು ಹೀಗೆ ತಿಳಿಯಪಡಿಸಿದಾಗ ಗಂಡನು ಅವಳ ಪ್ರೀತ್ಯರ್ಥವಾಗಿ ಆಕೆಯ ತವರುಮನೆಯಿಂದ ತಂದ ವಸ್ತುಗಳಲ್ಲಿ ಸ್ವಲ್ಪಮಾತ್ರವನ್ನು ತಾನು ಉಪ

ತತ್ಪ್ರೀತ್ಯರ್ಥಂ ಗೃಹೀತಂ ಯದ್ವೈಲಕ್ಷ್ಯಾದಿ ನಿವೃತ್ತಯೇ ।
ಸವಿಶೇಷಂ ಪ್ರಸಂಗೇನ ತಸ್ಯೈ ತತ್ಪ್ರತಿಪಾದಯೇತ್ ॥ ೧೪ ॥

ಸ್ತ್ರೀಣಾಂ ಯದೇತತ್ಸಾಪತ್ನ್ಯಂ ಪರಂ ಮಾತ್ಸರ್ಯಕಾರಣಂ ।
ತಸ್ಮಾತ್ತತ್ಪರಿಹರ್ತವ್ಯಂ ಪರಮೋದಾರಚರ್ಯಯಾ ॥ ೧೫ ॥

ತಥಾ ಕಲ್ಪಿತನೇಪಥ್ಯಾ ಭರ್ತುಃ ಪರ್ಯಾಯವಾಸರೇ ।
ಪ್ರಿಯಮಾದಾಯ ಮಾನೇವ ಪತಿಂ ಗಚ್ಛೇದ್ವಿಸರ್ಜಿತಾ ॥ ೧೬ ॥

ಗತ್ವಾ ರಹಸಿ ಭರ್ತಾರಂ ತತ್ಕಾಲೋಚಿತಸಂಭ್ರಮೈಃ ।
ತದ್ಭಾವಾನುಗತೈಸ್ತೈಸ್ತೈಃ ಸವಿಶೇಷಮುಪಾಚರೇತ್ ॥ ೧೭ ॥

---

ಯೋಗಕ್ಕೆ ತೆಗೆದುಕೊಳ್ಳಬೇಕು. ಉಳಿದುದನ್ನು ಬಚ್ಚಿಡಿಸಿ ತಾಯಿಯು ಮಗಳ ದ್ರವ್ಯವನ್ನು ರಕ್ಷಿಸುವಂತೆ ಕಾಪಾಡಬೇಕು.

೧೪. ಅವಳಿಗೆ ವೈಲಕ್ಷ್ಯವುಂಟಾಗದೆ ಪ್ರೀತಿಯುಂಟಾಗಲೆಂದು ತಾನು ತೆಗೆದುಕೊಂಡಿದ್ದುದನ್ನು ಪ್ರಸ್ತಾಪವಶದಿಂದ ಸಂದರ್ಭಕಲ್ಪಿಸಿ ಅವಳಿಗೇ ಅದನ್ನು ಕೊಟ್ಟು ಬಿಡಬೇಕು.

೧೫. ಸವತಿಯುರಿರುವುದು ಎಂಬುದೇ ಹೆಂಗಸರಿಗೆ ವಿಶೇಷ ಮಾತ್ಸರ್ಯಕ್ಕೆ ಕಾರಣವು. ಆದಾಗ್ಯೂ ಬಹು ಉತ್ಕೃಷ್ಟವಾದ ನಡೆವಳಿಕೆಯಿಂದಿರಬೇಕೆಂಬ ಧಾರಾಳ ಬುದ್ಧಿಯಿಂದ ಕೂಡಿ ಆ ಮಾತ್ಸರ್ಯವನ್ನು ಬಿಡಬೇಕು.

೧೬. ಸವತಿಯುರು ಗಂಡನ ಶಯನಗೃಹಕ್ಕೆ ಹೋಗುವುದಕ್ಕೆ ಸರದಿಯನ್ನು ಗೊತ್ತುಮಾಡಿಕೊಂಡು ಒಬ್ಬಳು ತಾನು ಹೋಗಬೇಕಾದ ಸರದಿಯದಿನ ಸಪತ್ನಿಯ ಸಮ್ಮತಿಪಡೆದು, ಅಲಂಕರಿಸಿಕೊಂಡು ಅವಳು ದಯೆತೋರಿಸಿ ಕಳುಹಿಸಿಕೊಟ್ಟವಳಂತೆ ಪ್ರಿಯಪತಿಯ ಬಳಿಗೆ ಹೋಗಬೇಕು.

೧೭. ಗಂಡನ ಬಳಿಗೆ ಏಕಾಂತದಲ್ಲಿ ಹೋಗಿ, ಅವನ ಚಿತ್ತವೃತ್ತಿಗೆ ಅನುಕೂಲವಾಗಿರುವಂತೆ ಆ ವೇಳೆಗೆ ಯೋಗ್ಯವಾದ ಬೆಡಗುಗಳಿಂದ ಅವನನ್ನು ಉಪಚರಿಸಬೇಕು.

**ಪ್ರತಿಬುದ್ಧ್ಯ ತತಃ ಕಾಲೇ ಸವಿಶೇಷಂ ತ್ರಪಾನ್ವಿತಾ ।**
**ಜ್ಯೇಷ್ಠಾಯಾ ವಸತಿಂ ಗಚ್ಛೇತ್ ವಿಶೇಷೇಣ ತಥಾ ಪುನಃ ॥ ೧೮ ॥**

**ಅಪ್ರಾತಿಕೂಲ್ಯಂ ಜ್ಯೇಷ್ಠಾಯಾ ಹಿತಮನ್ಯತ್ರ ಯೋಷಿತಃ ।**
**ತತಶ್ಶನೈಸ್ತ್ವವಚ್ಛಿದ್ಯ ಪತಿಂ ಸ್ವವಶಮಾನಯೇತ್ ॥ ೧೯ ॥**

**ಬಹಿಷ್ಪಾಕಾದಿ ಯೋಗೇನ ಚತುಷ್ಷಷ್ಟ್ಯಾ ರಹೋಗತಂ ।**
**ಜ್ಯೇಷ್ಠಾಮತಿಶಯಾನೇವ ಭರ್ತಾರಮುಪರಂಜಯೇತ್ ॥ ೨೦ ॥**

**ಪ್ರಾಗಲ್ಭ್ಯಂ ರಹಸಿ ಸ್ತ್ರೀಣಾಂ ಲಜ್ಜಾಧಿಕ್ಯಂ ತತೋಽನ್ಯದಾ ।**
**ಚಿತ್ತಜ್ಞಾನಾನುವೃತ್ತಿಶ್ಚ ಪತ್ಯಾ ಸಂಸೇವನಂ ಪರಂ ॥ ೨೧ ॥**

---

೧೮. ಹೀಗೆ ಆ ರಾತ್ರಿಯನ್ನು ಕಳೆದು ಹೊತ್ತಿಗೆ ಮುಂಚೆ ಎದ್ದು ನಾಚಿಕೆಯಿಂದ ಕೂಡಿದವಳಾಗಿ ಹಿರಿಯಹೆಂಡತಿಯ (ತಾನು ಸಮ್ಮತಿಪಡೆದ ಸಪತ್ನಿಯ) ವಾಸಸ್ಥಳಕ್ಕೆ ಪುನಃ ಬರಬೇಕು.

೧೯. ಸಂದರ್ಭಬಿದ್ದಾಗ ಹಿರಿಯಹೆಂಡತಿಯು ತನ್ನ ವಿಚಾರದಲ್ಲಿ ಪತಿಯು ಅನನುಕೂಲನಾಗದಂತೆ ನೋಡಿಕೊಳ್ಳುವುದಕ್ಕಾಗಿ ಕಿರಿಯಹೆಂಡಗೂ, ಪತಿಗೂ ನಿಧಾನವಾಗಿ ವಿಚ್ಛೇದವನ್ನುಂಟುಮಾಡಿ ಗಂಡನನ್ನು ತನ್ನ ವಶಮಾಡಿಕೊಳ್ಳಬೇಕು.

೨೦. ಇಂಥ ಸಂದರ್ಭದಲ್ಲಿ ಕಿರಿಯವಳು ಅಡಿಗೆ ಮುಂತಾದ ಹೊರಗಿನ ಕೆಲಸಗಳಲ್ಲಿ ಉಪಚರಿಸುವುದರಿಂದಲೂ, ಏಕಾಂತದಲ್ಲಿ ಅರುವತ್ತುನಾಲ್ಕು ಕಾಮಕಲಾ ಪ್ರೌಢಿಮೆ ತೋರಿಸಿ ತೃಪ್ತಿಪಡಿಸಿ ಉಪಚರಿಸುವುದರಿಂದಲೂ, ಹಿರಿಯಹೆಂಡತಿಯನ್ನು ಮೀರಿಸಿದವಳಂತೆ ನಡೆದುಕೊಂಡು ಗಂಡನನ್ನು ಸಂತೋಷಪಡಿಸಬೇಕು.

೨೧. ಏಕಾಂತದಲ್ಲಿ ವಿಶೇಷವಾದ ಪ್ರೌಢಿಮೆಯಿಂದ ವರ್ತಿಸುವುದು. ಹೊರಗಡೆ ವಿಶೇಷವಾದ ಲಜ್ಜೆಯಿಂದ ನಡೆಯುವುದು. ಅವನ ಮನಸ್ಸನ್ನು ತಿಳಿದು ಅದಕ್ಕನುಸಾರವಾಗಿ ನಡೆಯುವುದು. ಇವುಗಳೇ ಗಂಡನನ್ನು ವಿಶೇಷವಾಗಿ ಸೇವಿಸುವ ಕ್ರಮಗಳು.

ಏವಮಾರಾಧ್ಯ ಭರ್ತಾರಂ ಗೃಹಮಾಕ್ರಮ್ಯ ಚ ಕ್ರಮಾತ್ ।
ಗೌರವಂ ಪ್ರತಿಪತ್ತಿಂ ವಾ ಜ್ಯೇಷ್ಠಾದಿಷು ನ ಹಾಪಯೇತ್ ॥ ೨೨ ॥

ಗೃಹವ್ಯಾಪಾರದಾನೇಷು ಪತಿಂ ಗೂಢಂ ತಥಾ ವದೇತ್ ।
ಅಧಿಕುರ್ಯಾದನಿಚ್ಛಂತೀ ಜ್ಯೇಷ್ಠೈವೇನಾಂ ಯಥಾ ಬಲಾತ್ ॥ ೨೩ ॥

ಸಾಪಿ ವಿಜ್ಞಾಯ ಭರ್ತಾರಂ ಕನಿಷ್ಠಾಕೃಷ್ಟಮಾನಸಂ ।
ವಿಶ್ರಾಮಂ ಪ್ರಾರ್ಥಯೇದೇನಾಮಧಿಕುರ್ಯಾತ್ಸುತಾಮಿವ ॥ ೨೪ ॥

ಮತ್ವಾ ಭರ್ತುರಭಿಪ್ರೇತಂ ರಕ್ಷಂತೀ ನಿಜಗೌರವಂ ।
ಕೃತಂ ಭರ್ತ್ರನುಕೂಲಂ ಚೇತ್ ತದಿಷ್ಟಾಯಾನುಮೋದಯೇತ್ ॥ ೨೫ ॥

---

೨೨. ಈರೀತಿ ಗಂಡನನ್ನು ಸೇವಿಸಿ ಕ್ರಮವಾಗಿ ಮನೆಯ ಸ್ವಾತಂತ್ರ್ಯವನ್ನು ವಹಿಸಿದರೂ, ಹಿರಿಯಹೆಂಡತಿ, ಪತಿಯ ಬಂಧುಗಳು ಮುಂತಾದವರಲ್ಲಿ ಗೌರವ ವನ್ನೂ, ನಂಬಿಕೆಯನ್ನೂ, ತಪ್ಪಿಸಬಾರದು.

೨೩. ನಡೆಯಬೇಕಾದ ಮನೆಗೆಲಸಗಳನ್ನು ಹಂಚಿಹಾಕುವ ಕ್ರಮವನ್ನು ಒಳಗೊಳಗೇ ಗುಟ್ಟಿನಲ್ಲಿ ಗಂಡನಿಗೆ ತಿಳಿಸಿ, ಪತಿಯಿಂದಲೇ ಹಂಚಿಸಿ, ಹೊರಗೆ ಮಾತ್ರ ತನಗೆ ಇಚ್ಛೆಯಿಲ್ಲದಿದ್ದರೂ ಹಿರಿಯಳ ಬಲಾತ್ಕಾರದಿಂದ ಆ ಕೆಲಸಮಾಡುತ್ತಿರುವವಳ ಹಾಗೆ ನಟಿಸಬೇಕು.

೨೪. ಕಿರಿಯಹೆಂಡತಿಯು ಗಂಡನ ಮನಸ್ಸನ್ನು ಸೆಳೆದಿರುವ ವಿಷಯವನ್ನು ಹಿರಿಯಹೆಂಡತಿ ತಿಳಿದುಕೊಂಡು ಗಂಡನಿಗೆ ಸ್ವಲ್ಪ ವಿರಾಮಕೊಡುವಂತೆ ಆಕೆಯನ್ನು ಪ್ರಾರ್ಥಿಸಬೇಕು. ಪ್ರಾರ್ಥಿಸುವುದೆಂದರೆ ತಾಯಿಯು ಮಗಳಿಗೆ ಹೇಳುವ ರೀತಿ ಹಿತೋಕ್ತಿಯಾಗಿರಬೇಕು.

೨೫. ಗಂಡನ ಇಷ್ಟವನ್ನು ತಿಳಿದುಕೊಳ್ಳುತ್ತಾ, ತನ್ನ ಗೌರವವನ್ನು ಕಾಪಾಡಿ ಕೊಳ್ಳುತ್ತಾ, ಮಾಡುವ ಕೆಲಸವು ಗಂಡನಿಗೆ ಅನುಕೂಲವಾಗುವ ಸಂದರ್ಭದಲ್ಲಿ ಗಂಡನಿಗೆ ಇಷ್ಟವಾದುದೆಂಬುದಕ್ಕೋಸ್ಕರ ಅದಕ್ಕೆ ಸಮ್ಮತಿಸಬೇಕು.

ಸ್ವಾಮಿನೋ ಯದಭಿಪ್ರೇತಂ ಭೃತ್ಯೈಃ ಕಿಂ ಕ್ರಿಯತೇಽನ್ಯಥಾ ।
ಕ್ಲಿಶ್ಯತೇ ತತ್ರ ಮೂಢಾತ್ಮಾ ಪರತಂತ್ರೋಽವೃಥಾ ಜನಃ ॥ ೨೬ ॥

ತಸ್ಮಾತ್ ಸರ್ವಾಸ್ವವಸ್ಥಾಸು ಮನೋವಾಕ್ಕಾಯಕರ್ಮಭಿಃ ।
ಹಿತಂ ಸ್ವಾಮ್ಯನುಕೂಲತ್ವಂ ನಾರೀಣಾಂ ತು ವಿಶೇಷತಃ ॥ ೨೭ ॥

ಸಾಪಿ ಜ್ಯೇಷ್ಠಾ ಪತಿಂ ಚೈವ ಗೃಹತಂತ್ರಂ ಚ ಸರ್ವದಾ ।
ಸಮಾವರ್ಜ್ಯ ಗುಣೈರ್ಧೀರಾ ಪ್ರಾಗವಸ್ಥಾಂ ನ ವಿಸ್ಮರೇತ್ ॥ ೨೮ ॥

ನ ಸೌಭಾಗ್ಯಮದಂ ಕುರ್ಯಾತ್ ನಚೋದ್ಧತ್ಯಾದಿ ವಿಕ್ರಿಯಾಂ ।
ನಿತರಾಮಾನತಿಂ ಗಚ್ಛೇತ್ ಸದಾನಾರ್ಯಭಯಾದಿವ ॥ ೨೯ ॥

ಯಯಾ ಯೋಗ್ಯತಯಾ ಪತ್ಯೌ ಸೌಭಾಗ್ಯಮಭಿವರ್ಧತೇ ।
ಸ್ಪರ್ಧಯೇಚ್ಚ ಕುಲಸ್ತ್ರೀಣಾಂ ಪ್ರಶ್ರಯೇಣಾಧಿಕಂ ತಥಾ ॥ ೩೦ ॥

---

೨೬. ಮನೆಯ ಆಳುಗಳು ಯಜಮಾನನ ಇಷ್ಟಕ್ಕೆ ವಿರೋಧವಾಗಿ ನಡೆಯುವುದು ಎಂದಿಗಾದರೂ ಸಾಧ್ಯವೇ ? ಹೀಗಿದ್ದರೂ ತಿಳಿಯದವನು ತನಗೆ ಸ್ವಾತಂತ್ರ್ಯವಿಲ್ಲವೆಂದು ಸುಮ್ಮನೆ ಕ್ಲೇಶಪಟ್ಟುಕೊಳ್ಳುತ್ತಾನೆ.

೨೭. ಆದ್ದರಿಂದ ಎಲ್ಲಾ ಸ್ಥಿತಿಯಲ್ಲಿಯೂ ತನಗೆ ಹಿತವಾಗುವಂತೆಯೂ, ಯಜಮಾನನಿಗೆ ಅನುಕೂಲವಾಗುವಂತೆಯೂ, ಮನೋವಾಕ್ಕಾಯಗಳಿಂದ ನಡೆದುಕೊಳ್ಳಬೇಕು. ಹೆಂಗಸರ ವಿಚಾರದಲ್ಲಿ ಈ ಮಾತನ್ನು ವಿಶೇಷವಾಗಿ ಹೇಳಬೇಕು.

೨೮. ಹಿರಿಯ ಹೆಂಡತಿಯೂ ಕೂಡ, ತನ್ನ ಗುಣಗಳು ಮನೆಗೆಲಸ ಇವುಗಳಿಂದ ಗಂಡನನ್ನು ಸ್ವಾಧೀನಮಾಡಿಕೊಂಡರೂ ತನಗೆ ಈ ಅಧಿಕಾರ ಬರುವ ಮೊದಲು ತನ್ನ ಅವಸ್ಥೆ ಹೇಗಿದ್ದಿತು ಎಂಬುದನ್ನು ಮರೆಯಬಾರದು.

೨೯. ಗಂಡನಿಗೆ ತಾನು ಅತಿಪ್ರಿಯಳಾಗಿದೇನೆಂದು ಮದಿಸಬಾರದು. ದುಡುಕುವುದು ಮುಂತಾದ ಮನೋವಿಕಾರವನ್ನು ಹೊಂದಬಾರದು. ದುಷ್ಟರಾದ ಅನಾರ್ಯರಿಗೆ ಸತ್ಪುರುಷನು ಹೆದರಿಕೊಂಡಿರುವಂತೆ ಯಾವಾಗಲೂ ತಗ್ಗಿ ನಡೆಯಬೇಕು.

೩೦. ತಾನು ಪತಿಯಲ್ಲಿ ಘನತೆಯನ್ನೂ, ತಿಳಿವಳಿಕೆಯನ್ನೂ, ತೋರಿಸೋಣದರಿಂದ ತನ್ನ ಸೌಭಾಗ್ಯ ಹೇಗೆ ಹೆಚ್ಚುತ್ತದೆಯೋ ಹಾಗೆಯೇ, ವಿನಯ ತೋರಿ

**ಏವಮಾರಾಧ್ಯ ಭರ್ತಾರಂ ತತ್ಕಾರ್ಯೇಷ್ವಪ್ರಮಾದಿನೀ ।**
**ಪೂಜ್ಯಾನಾಂ ಪೂಜನೇ ನಿತ್ಯಂ ಭೃತ್ಯಾನಾಂ ಭರಣೇಷು ಚ ॥ ೩೧ ॥**

**ಗುಣಾನಾಮಾರ್ಜನೇ ನಿತ್ಯಂ ಶೀಲಸ್ಯಾಪಿ ಚ ರಕ್ಷಣೇ ।**
**ಪ್ರೇತ್ಯಚೇಹ ಸ ನಿರ್ದ್ವಂದ್ವಂ ಸುಖಮಾಪ್ನೋತ್ಯನುತ್ತಮಂ ॥ ೩೨ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸ್ತ್ರೀಧರ್ಮೇಷು ಸತ್ಪತ್ನೀಕರ್ತವ್ಯವರ್ಣನಂ ನಾಮ ಚತುರ್ದಶೋಽಧ್ಯಾಯಃ.**



---

ಷೋಣದರಿಂದ ಕುಲಸ್ತ್ರೀಯರೆನಿಸಿ ಪ್ರಸಿದ್ಧರಾದವರ ಸೌಭಾಗ್ಯಕ್ಕಿಂತ ತನ್ನ ಸೌಭಾಗ್ಯವು ಇನ್ನೂ ಹೆಚ್ಚುವಂತೆ ಹುರಡುಪಡಬೇಕು.

೩೧. ಈರೀತಿ ಪತ್ನಿಯು ಗಂಡನನ್ನು ಸೇವಿಸಿ, ಅವನ ಕೆಲಸಗಳಲ್ಲಿ ಎಚ್ಚರ ತಪ್ಪದೆ ನಡೆಯುವುದರಲ್ಲಿಯೂ, ಯಾವಾಗಲೂ ಪೂಜ್ಯರನ್ನು ಪೂಜಿಸುವುದರಲ್ಲಿಯೂ, ಸೇವಕರನ್ನು ಪೋಷಿಸುವುದರಲ್ಲಿಯೂ, ತೊಡಗಬೇಕು.

೩೨. ಸ್ತ್ರೀಯಾಗಲೀ, ಪುರುಷನಾಗಲೀ ಯಾವಾಗಲೂ ಸುಗುಣಗಳನ್ನು ಅನುವರ್ತಿಸುವುದರಿಂದಲೂ, ಶೀಲವನ್ನು ಕಾಪಾಡಿಕೊಳ್ಳುವುದರಿಂದಲೂ, ಜೀವಿತಕಾಲದಲ್ಲಿ ಇಹಲೋಕದಲ್ಲೂ, ಸತ್ತಮೇಲೆ ಪರಲೋಕದಲ್ಲಿಯೂ ದ್ವಂದ್ವದುಃಖಗಳಿಲ್ಲದಂತೆ ಸರ್ವೋತ್ತಮವಾದ ಸುಖವನ್ನು ಪಡೆಯುವರು.

ಎಂಬಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಸ್ತ್ರೀಧರ್ಮದಲ್ಲಿ ಸತ್ಪತ್ನೀಕರ್ತವ್ಯವೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.





॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಪಂಚದಶೋಽಧ್ಯಾಯಃ

॥ ಬ್ರಹ್ಮೋವಾಚ ॥

ದುರ್ಭಗಾ ಚ ಪುನರ್ನಿತ್ಯಮುಪವಾಸಾದಿ ತತ್ಪರಾ ।
ಬಾಹ್ಯೇಷು ಪತಿಕೃತ್ಯೇಷು ಸ್ಯಾದ್ವಿಶೇಷಾಭಿಯೋಗಿನೀ ॥ ೧ ॥

ನ ಪ್ರಶಂಸಾಂ ಸಪತ್ನೀಷು ನಿಂದಾಂ ಚಾಪಿ ತಥಾತ್ಮನಿ ।
ಅಸೂಯಾಂ ಭರ್ತುರೀರ್ಷ್ಯಾಂ ವಾ ಪ್ರಣಯಂ ವಾಪಿ ದರ್ಶಯೇತ್ ॥ ೨ ॥

ಮದ್ವಿಧಾ ಯಾ ಹಿ ಬಹ್ವೇತತ್ತಚ್ಚಾತ್ಯಂತಿಕಮುಚ್ಯತೇ ।
ಯದಸ್ಯಾಯುಷ್ಮತೋ ಯಾಯಾತ್ ಭಾರ್ಯಾಶಬ್ದಾಭಿಧೇಯತಾಂ ॥ ೩ ॥

---

### ಹದಿನೈದನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಪ್ರತಿದಿನವೂ ಉಪವಾಸಾದಿಗಳನ್ನು ಮಾಡುತ್ತಾ, ಗಂಡನಿಗೆ ಸಂಬಂಧಪಟ್ಟ ಹೊರಗಣ ಕೆಲಸಗಳಲ್ಲಿ ಮಾತ್ರ ವಿಶೇಷಾಸಕ್ತಳಾಗಿರುವ ಹೆಂಗಸನ್ನು ಅದೃಷ್ಟಹೀನೆಯೆನ್ನಬಹುದು

೨. ಸವತಿಯರನ್ನು ವಿಶೇಷವಾಗಿ ಹೊಗಳಲೂಬಾರದು. ತನ್ನನ್ನು ನಿಂದಿಸಿಕೊಳ್ಳಲೂಬಾರದು. ಗಂಡನಲ್ಲಿ ಈರ್ಷ್ಯಾಸೂಯೆಗಳನ್ನಾಗಲಿ ವಿಶೇಷ ಪ್ರೀತಿಯನ್ನಾಗಲಿ ತೋರಿಸಬಾರದು.

೩. ನನ್ನಂಥವಳಿಗೆ ಆಯುಷ್ಮಂತನಾದ ಈ ಮಹನೀಯನ ಹೆಂಡತಿಯೆನಿಸಿಕೊಂಡಿರುವುದೇ ಒಂದು ಅತಿಶಯ. ಅದೇ ಬಹು ಮೇಲ್ಮೆಯಾದುದು ಎನ್ನಬೇಕು.

ನ ಚ ನಿರ್ಭೂಷಣಾ ತಿಷ್ಠೇತ್ ನ ಚಾಪ್ಯುದ್ಧತಭೂಷಣಾ ।
ನಾನ್ಯದಾ ಗಂಧಮಾಲ್ಯಾದಿ ಗ್ರಾಹ್ಯಂ ಪತ್ಯುಪಚಾರತಃ ॥ ೪ ॥

ತನ್ನ್ಯೂನಂ ಸರ್ವಶೋ ಗ್ರಾಹ್ಯಂ ವಲ್ಲಭಾಯಾ ವಿಶೇಷತಃ ।
ಭೂಷಣಂ ಗಂಧಮಾಲ್ಯಂ ತು ತಾವತ್ಕಾಲಮಲಕ್ಷಿತಂ ॥ ೫ ॥

ಸಂಬಾಧಾನಾಂ ಪ್ರವೇಶಾನಾಂ ನಿತ್ಯಂ ಸ್ವೇದಾದಿ ಮಾರ್ಜನಂ ।
ದಂತನಾಸಾದಿ ಪಂಕಾನಾಂ ವಿಗಂಧಸ್ಯ ಚ ಶೋಧನಂ ॥ ೬ ॥

ನಿಮಿತ್ತಂ ಭರ್ತುರೇತಾಸಾಂ ಯತ್ಕಿಂಚಿದಭಿಲಕ್ಷಯೇತ್ ।
ನಾನೇನ ವಾ ತಯೋರ್ಯತ್ನಂ ವಿದಧ್ಯಾದಂಗಮಾರ್ಜನೇ ॥ ೭ ॥

ಸರ್ವಾಸಾಂ ಚ ಸಪತ್ನೀನಾಂ ಸರ್ವತ್ರಾನುಗತಾ ಭವೇತ್ ।
ನೈತಸೀಂ ವೃತ್ತಿಮಾಸ್ಥಾಯ ವಲ್ಲಭಾಯಾ ವಿಶೇಷತಃ ॥ ೮ ॥

---

೪. ಆಭರಣಗಳಿದ್ದರೂ ಯಾವುದನ್ನೂ ಇಟ್ಟುಕೊಳ್ಳದೆ, ಅಲಂಕಾರಶೂನ್ಯಳಾಗಿರಬಾರದು. ಬಹಳ ಬೆಡಗನ್ನು ತೋರಿಸುವ ಹೆಚ್ಚು ಒಡವೆಗಳನ್ನು ಅತಿಯಾಗಿ ಧರಿಸಲೂ ಬಾರದು. ಗಂಧಪುಷ್ಪಾದಿಗಳಲ್ಲಿಯೂ ಹೀಗೆಯೇ ವರ್ತಿಸಬೇಕು

೫. ಆದುದರಿಂದ ಸರ್ವಪ್ರಕಾರದಿಂದಲೂ ಆಭರಣಗಳನ್ನು ಸ್ವಲ್ಪವಾಗಿಯೇ ಇಟ್ಟುಕೊಳ್ಳಬೇಕು. ವಿಶೇಷತಃ ಗಂಡನಿಗೆ ಅತಿ ಪ್ರಿಯಳಾದಾಗ್ಗೂ ತನ್ನ ಒಡವೆಗಳು ಬಹು ಕಡಿಮೆಯಾಗಿರಬೇಕು. ಗಂಧಮಾಲ್ಯ (ಪುಷ್ಪ) ಗಳು ಮಾತ್ರ ರತಿಕಾಲದವರೆಗೆ ಹೊರಗೆ ಕಾಣದಿರಬೇಕು.

೬. ಜನರ ಗುಂಪುಗಳಿಗೆ ಪ್ರವೇಶಮಾಡಬೇಕಾದಾಗ ತನ್ನ ಮೈ ಬೆವರನ್ನೂ, ಬೇರೆ ಕೊಳೆಯಿದ್ದರೆ ಅದನ್ನೂ ತೊಳೆದುಕೊಳ್ಳಬೇಕು. ಹಲ್ಲು, ಮೂಗು ಮೊದಲಾದುವುಗಳ ಕೊಳೆ, ದುರ್ವಾಸನೆ, ಇವು ಚೊಕ್ಕಟವಾಗಿ ಹೋಗುವಂತೆ ಉಜ್ಜಿ ತೊಳೆದುಕೊಳ್ಳಬೇಕು.

೭. ಈ ವಾಸನಾದಿಗಳು ಗಂಡಸಿನಲ್ಲಿ ಉಂಟಾಗಿದ್ದರೆ ಅದರ ನಿಮಿತ್ತವನ್ನು ಕಂಡುಹಿಡಿಯಬೇಕು. ಹೀಗೆಂದು ಅನಾವಶ್ಯಕವಾಗಿ ಪದೇಪದೇ ಅವರ ಅಂಗಮಾರ್ಜನಕ್ಕೆ ಯತ್ನಿಸಬಾರದು.

೮. ಎಲ್ಲಾ ಸವತಿಯರನ್ನೂ, ಎಲ್ಲಾ ಸಂದರ್ಭಗಳಲ್ಲೂ ಅನುಸರಿಸಿಕೊಂಡಿರಬೇಕು. ಗಂಡನಿಗೆ ಬಹು ಪ್ರಿಯಳಾದವಳಲ್ಲಿ ಹೆಚ್ಚಾಗಿ ವೇತಸವೃತ್ತಿಯನ್ನನುಸರಿಸ

**ಅನ್ಯಸ್ಯಾ ಯದಸುಷ್ಠೇಯಂ ಯನ್ನ ಸೀದೇತ್ಸಮರ್ಪಿತಂ ।**
**ಭರ್ತುಶ್ಚಾಪಿದಿತಂ ಯತ್ನಾತ್ ತತ್ಕುರ್ಯಾದವಿರೋಧಿಚೇತ್ ॥ ೯ ॥**

**ಕೋಶವಸ್ತ್ರಾನ್ನತಾಂಬೂಲಗಂಧ ಪಾನೌಷಧಾದಿಕಂ ।**
**ತತ್ಸರ್ವಮನಿಯುಕ್ತಾನಾಂ ದೋಷವತ್ವಾದ್ವಿರುಧ್ಯತೇ ॥ ೧೦ ॥**

**ಯತ್ತು ಮುಕ್ತಮನುಷ್ಠೇಯಂ ಗೃಹಸಂಮಾರ್ಜನಾದಿಕಂ ।**
**ಸ್ತ್ರೀಣಾಮನಧಿಕಾರೇಪಿ ಪ್ರಾಯಸ್ತದ್ವಿಧಿರುಚ್ಯತೇ ॥ ೧೧ ॥**

**ಅಭ್ಯಂಗೋದ್ವರ್ತನಂ ಸ್ನಾನಂ ಭೋಜನಂ ಮಂಡನಾನಿ ಚ ।**
**ಕುರ್ಯಾದ್ಭರ್ತುರಪತ್ಯಾನಾಂ ಧಾತ್ರೀಕರ್ಮಾಣಿ ಸಾದರಂ ॥ ೧೨ ॥**

---

ಬೇಕು. ಎಂದರೆ, ಜೊಂಡುಹುಲ್ಲು ಪ್ರವಾಹಬಂದಾಗ ಬಾಗಿದ್ದು ಅದರ ಸೆಳೆತ ನಿಂತ ಮೇಲೆ ಪುನಃ ಎದ್ದು ನಿಲ್ಲುವಂತೆ ಸಮಯಬಿದ್ದಾಗ ಅವಳನ್ನು ಉಪಾಶ್ರಯಿಸಿ ಮಿಕ್ಕ ಕಾಲದಲ್ಲಿ ಸಾಮಾನ್ಯವಾಗಿ ಇರಬೇಕು.

೯. ಬೇರೆಯವಳು ಮಾಡಬೇಕಾದ ಕೆಲಸವಾವುದೋ, ಯಾವ ಕೆಲಸವನ್ನು ಮಾಡಿ ಒಪ್ಪಿಸಲು ಏನೂ ತೊಂದರೆಯಿಲ್ಲವೋ, ಅದನ್ನು ಗಂಡನಿಗೆ ತಿಳಿಯದಂತೆಯೇ ಮಾಡಬಹುದು.

೧೦. ದುಡ್ಡುಕಾಸಿನ ಆಡಳಿತ, ಬಟ್ಟೆ, ಆಹಾರ, ತಾಂಬೂಲ, ಗಂಧ, ಪಾನ ಸಾಮಗ್ರಿಗಳು, ಔಷಧ ಮೊದಲಾದುವುಗಳು, ಇವುಗಳನ್ನು ಪತಿಗೆ ವಿರುದ್ಧವಲ್ಲದಿದ್ದರೆ ಮಾಡಬೇಕು. ಇವುಗಳನ್ನು ಮಾಡೆಂದು ಹೇಳದಿರುವಾಗ ಮಾಡಿ ಅದರಿಂದ ದೋಷ ವುಂಟಾದರೆ ಆಗ ಅದು ವಿರುದ್ಧವಾಗುವುದು.

೧೧. ಮನೆಯನ್ನು ಗುಡಿಸುವುದು, ಮೊದಲಾದ ಕೆಲಸಗಳಲ್ಲಿ, ಯಾವುದನ್ನು ಇನ್ನೂ ಮಾಡಿರುವುದಿಲ್ಲವೋ, ಅದನ್ನು ತನಗೆ ಅಧಿಕಾರಕೊಟ್ಟಿಲ್ಲವೆಂದು ಸುಮ್ಮನಿರದೆ ಮಾಡಬೇಕು. ಪ್ರಾಯಿಕವಾಗಿ ಇದು ವಿಧಿಯೆಂದು ಹೇಳುತ್ತಾರೆ.

೧೨. ಮಕ್ಕಳಿಗೆ ಎಣ್ಣೆಹಚ್ಚಿ ಮೈಕೈಉಜ್ಜಿ ಎರೆಯುವುದು, ಭೋಜನ ಮಾಡಿಸುವುದು, ಅಲಂಕರಿಸುವುದು, ಇವೇ ಮೊದಲಾದ ದಾದಿಯರು ಮಾಡುವ ಕೆಲಸಗಳನ್ನು ಪ್ರೀತಿಯಿಂದ ಮಾಡಬೇಕು.

ಆತ್ಮವತ್ತ್ವಾನ್ಯಪತ್ಯಾನಿ ಸಾಧಯತ್ಯನುಯೋಗತಃ ।
ಸ್ವೇನಾಪ್ಯಮೀಷಾಂ ವಿತ್ತೇನ ವಿದಧ್ಯಾನ್ಮಂಡನಾದಿಕಂ ॥ ೧೩ ॥

ಭೋಗಃ ಸ್ವಯಮುಪತ್ಯೈರ್ವಾ ಸ್ತ್ರೀವಿತ್ತಸ್ಯ ಪತಿರ್ವಿಧಾ ।
ಪೂರ್ವೇ ವಯಸ್ಯಭಿನಂದ್ಯ ಪಶ್ಚಿನೋಪಯೋಜನಂ ॥ ೧೪ ॥

ಉಭೇಯೋಗೋಸ್ತು ವಾ ಮಾವಾ ಕರ್ಮಜಃ ಪೃಥಗೇವ ಸಃ ।
ಸದ್ವೃತ್ತೇ ತ್ವಧಿಕಾಂ ಖ್ಯಾತಿಂ ಕುರ್ವೀತ ಕ್ರಿಯಯಾ ಪುನಃ ॥ ೧೫ ॥

ನ ಕಾಪಿ ದುರ್ಭಗಾ ನಾಮ ಸುಭಗಾ ನಾಮ ಜಾತಿತಃ ।
ವ್ಯವಹಾರಾದ್ಭವತ್ಯೇಷ ನಿರ್ದೇಶೋ ರಿಪುಮಿತ್ರವತ್ ॥ ೧೬ ॥

---

೧೩. ಆ ಮಕ್ಕಳನ್ನು ತನ್ನ ಮಕ್ಕಳಂತೆ ತಿಳಿದು "ನಿನಗೇನು ಬೇಕು" ಎಂದು ಕೇಳಿ ತನ್ನ ಹಣವನ್ನೋ, ಆ ಮಕ್ಕಳ ಹಣವನ್ನೋ ಉಪಯೋಗಿಸಿ ಪೋಷಿಸಬೇಕು. ಒಡವೆ, ಮೊದಲಾದುವುಗಳನ್ನು ಮಾಡಿಸಿ ಅಲಂಕರಿಸಬೇಕು.

೧೪. ತನ್ನ ತವರುಮನೆಯ ಹಣವನ್ನು ತಾನೇ ಆದರೂ, ತನ್ನ ಮಕ್ಕಳೇ ಆದರೂ ತನ್ನ ಪತಿಯ ಆಜ್ಞೆಯಂತೆ ಅನುಭವಿಸಬೇಕು. ಮಕ್ಕಳನ್ನು ಚಿಕ್ಕಂದಿನಲ್ಲಿ ಎತ್ತಿ, ಆಡಿಸಿ, ಸಾಕಿ, ಸಲಹಿ ಅವರು ದೊಡ್ಡವರಾದ ಮೇಲೆ ಅವರಿಂದ ತನ್ನ ಕೆಲಸಗಳನ್ನು ಮಾಡಿಸಿಕೊಳ್ಳಬೇಕು.

೧೫. ಶಿಶುಪೋಷಣರೂಪವಾದ ಕರ್ಮದಿಂದ ಉಂಟಾಗಬಹುದಾದ ಫಲವು ಇವರಿಗೆ ಲಭಿಸಬಹುದು. ಅಥವಾ ಲಭಿಸದೆ ಇರಬಹುದು. ಫಲಪ್ರಾಪ್ತಿಯ ವಿಚಾರವೇ ಬೇರೆ. ಗಂಡಸು ತನ್ನ ಹೆಂಡತಿಯ ನಡವಳಿಕೆಯು ಸರ್ವೋತ್ಕೃಷ್ಟವಾಗಿರುವಂತೆ ಏರ್ಪಡಿಸಿ, ಆ ಮೂಲಕ ತನಗೆ ಹೆಚ್ಚು ಖ್ಯಾತಿಯುಂಟಾಗುವಂತೆ ಮಾಡಿಕೊಳ್ಳಬೇಕು.

೧೬. ಯಾರನ್ನೇ ಆಗಲಿ ಇವಳು ಒಳ್ಳೆಯವಳು, ಇವಳು ಕೆಟ್ಟವಳು, ಎಂದು ಅವರ ಹುಟ್ಟಿನಿಂದಲೇ ನಿಶ್ಚಯಿಸುವುದಕ್ಕಾಗುವುದಿಲ್ಲ. ಅವರವರು ನಡೆಯುವ ನಡೆವಳಿಕೆಗಳನ್ನು ನೋಡಿ ಇವರು ಮಿತ್ರರು, ಇವರು ಶತ್ರುಗಳು ಎಂದು ನಿರ್ಧರಿಸುವ ಹಾಗೆ ಇವಳು ಮಾಡುವ ಕೆಲಸದಿಂದಲೇ ಕೆಟ್ಟವಳೆನಿಸಿಕೊಳ್ಳಲೂಬಹುದು, ಒಳ್ಳೆಯವಳೆನಿಸಿಕೊಳ್ಳಲೂಬಹುದು.

ಭರ್ತೃಶ್ಚಿತ್ತಾಪರಿಜ್ಞಾನಾದನನುಷ್ಠಾನತೋऽಪಿವಾ ।
ವೃತ್ತ್ಯೈರ್ಲೋಕವಿರುದ್ಧೈಶ್ಚ ಯಾಂತಿ ದುರ್ಭಗತಾಂ ಸ್ತ್ರಿಯಃ ॥ ೧೭ ॥

ಆನುಕೂಲ್ಯಾನ್ಮನೋವೃತ್ತೇಃ ಪರೋऽಪಿ ಪ್ರಿಯತಾಂ ವ್ರಜೇತ್ ।
ಪ್ರಾತಿಕೂಲ್ಯಾನ್ನಿಜೋऽಪ್ಯಾಶು ಪ್ರಿಯಃ ಪ್ರದ್ವೇಷ್ಯತಾಮಿಯಾತ್ ॥ ೧೮ ॥

ತಸ್ಮಾತ್ ಸರ್ವಾಸ್ವವಸ್ಥಾಸು ಮನೋವಾಕ್ಕಾಯಕರ್ಮಭಿಃ ।
ಪ್ರಿಯಂ ಸಮಾಚರೇನ್ನಿತ್ಯಂ ತಚ್ಚಿತ್ತಾನುವಿಧಾಯಿನೀ ॥ ೧೯ ॥

ಯಾಮನ್ಯಾಂ ಕಾಮಯೇತ್ತಾಸಾಂ ತಂ ತಯಾ ಸಂಪ್ರಯೋಜಯೇತ್ ।
ಕುಪಿತಾಂ ಚ ಪ್ರಿಯಾಂ ಕಾಂಚಿತ್ ಯತ್ನಾದಸ್ಮೈ ಪ್ರಸಾದಯೇತ್ ॥ ೨೦ ॥

---

೧೭. ಗಂಡನ ಮನಸ್ಸನ್ನು ತಿಳಿಯದೆ ಹೋಗುವುದರಿಂದಲೋ, ತಿಳಿದರೂ ಅದರಂತೆ ಆಚರಿಸದೆ ಇರುವುದರಿಂದಲೋ, ಲೋಕಕ್ಕೆ ವಿರುದ್ಧಗಳಾದ ನಡತೆಗಳಿಂದಲೋ, ಸ್ತ್ರೀಯರು ಕೆಟ್ಟವರೆನಿಸುತ್ತಾರೆ.

೧೮. ತನ್ನ ಮನೋವೃತ್ತಿಗೆ ಅನುಗುಣವಾಗಿ ನಡೆದುಕೊಂಡವನು, ತನಗೆ ಸಂಬಂಧವಿಲ್ಲದ ಅನ್ಯನಾದರೂ ಪ್ರಿಯನೇ ಆಗಿಬಿಡುವನು. ತನ್ನ ಸ್ವಂತ ಬಂಧುವೂ, ಪ್ರಿಯನೂ ಆಗಿದ್ದರೂ ತನ್ನ ಮನೋವೃತ್ತಿಗೆ ವಿರುದ್ಧವಾಗಿ ನಡೆಯುವವನು ದ್ವೇಷಕ್ಕೆ ಪಾತ್ರನಾಗುತ್ತಾನೆ.

೧೯. ಆದುದರಿಂದ ಸ್ತ್ರೀಯು ನಿತ್ಯವೂ, ಎಲ್ಲ ಸ್ಥಿತಿಗಳಲ್ಲಿಯೂ ಗಂಡನ ಮನೋವೃತ್ತಿಗೆ ಅನುಸಾರವಾಗಿ ಮನೋವಾಕ್ಕಾಯಗಳಿಂದಲೂ ನಡೆಯುತ್ತಾ ಪತಿಗೆ ಪ್ರಿಯವನ್ನೇ ಮಾಡಬೇಕು.

೨೦. ಪತಿಗೆ ಇರುವ ಅನೇಕ ಸ್ತ್ರೀಯರಲ್ಲಿ ಪತಿಯು ಯಾವಳಾದರೊಬ್ಬಳನ್ನು ಆಶಿಸಿದರೆ ಸಂಧಾನಮಾಡಿ ಅವನನ್ನು ಅವಳೊಡನೆ ಸೇರಿಸಬೇಕು. ಯಾವಳಾದರೂ ಅವನ ಮೇಲೆ ಕೋಪಗೊಂಡಿದ್ದರೆ ಸರ್ವಪ್ರಯತ್ನದಿಂದ ಅವಳ ಮನಸ್ಸನ್ನು ಅವನ ಕಡೆಗೆ ಒಲಿಸಬೇಕು.

ತತ್ಪಾದ ಪರಿಚರ್ಯಾಯಾಂ ಗಾತ್ರಸಂವಾಹನೇ ತಥಾ ।
ಪೀಡನೇ ಶಿರಸಶ್ಚೈವ ಪರಂ ಕೌಶಲಮಭ್ಯಸೇತ್ ॥ ೨೧ ॥

ಪೀಡನಂ ಮೃದು ಮಧ್ಯಂ ಚ ಗಾತ್ರಾವಸ್ಥಾ ವಿಶೇಷತಃ ।
ಮುಖಗಾತ್ರಾದಿಭಿರ್ಲಿಂಗೈಃ ಪ್ರಯೋಜ್ಯಂ ತತ್ಸುಖಾವಹಂ ॥ ೨೨ ॥

ಬಾಹೂರುಕಟಿಪೃಷ್ಠೇಷು ಸ್ಕಂಧೇ ಶಿರಸಿ ಪಾದಯೋಃ ।
ಗಾಢಮರ್ದನಮಿಚ್ಛಂತಿ ಪ್ರಾಯೋಽನ್ಯತ್ರಾಪಿ ಮಧ್ಯಮಂ ॥ ೨೩ ॥

ನಿರ್ಮಾಂಸೇಷು ಪ್ರದೇಶೇಷು ನಾಭಿಮೂಲೇಷು ಮರ್ಮಸು ।
ಹೃದ್ಗಂಡಕ ಕಪೋಲಾದಾವಿಚ್ಛಂತಿ ಮೃದುಮರ್ದನಂ ॥ ೨೪ ॥

ಗಾಢಂ ಜಾಗ್ರದವಸ್ಥಾಯಾಮರ್ಧಸುಪ್ತಸ್ಯ ಮಧ್ಯಮಂ ।
ಕಿಂಚಿತ್ಸಪರಿಘಾತಂ ಚ ಮೃದುಸುಪ್ತಸ್ಯ ನೇತಿವಾ ॥ ೨೫ ॥

---

೨೧. ಪತಿಯ ಪಾದಸೇವೆಯಲ್ಲಿಯೂ, ಅಂಗಮರ್ದನದಲ್ಲಿಯೂ, ತಲೆಗೆ ಎಣ್ಣೆ ಒತ್ತುವುದರಲ್ಲೂ, ಹೆಚ್ಚು ಜಾಣತನವನ್ನು ಅಭ್ಯಾಸಮಾಡಬೇಕು.

೨೨. ಪತಿ ಶರೀರದ ಅವಸ್ಥಾವಿಶೇಷಕ್ಕನುಸಾರವಾಗಿ ಅಂಗಮರ್ದನವನ್ನು ಮೃದುವಾಗಿಯೋ, ಮಧ್ಯಮವಾಗಿಯೋ ಮಾಡಬೇಕು. ಅಂಗಮರ್ದನಕಾಲದಲ್ಲಿ ಆತನಿಗೆ ಶರೀರಕ್ಕೆ ಹಿತವಾಗುತ್ತದೆಯೇ ಅಥವಾ ಇಲ್ಲವೇ ಎಂಬುದನ್ನು ಆತನ ಮುಖ ಲಕ್ಷಣದಿಂದ ತಿಳಿದು, ಅವನಿಗೆ ಸುಖವಾಗುವಂತೆ ಆ ಕಾರ್ಯವನ್ನು ನಡೆಯಿಸಬೇಕು.

೨೩. ತೋಳುಗಳು, ತೊಡೆಗಳು, ಸೊಂಟ, ಬೆನ್ನು, ಹೆಗಲು, ತಲೆ, ಪಾದಗಳು, ಈ ಭಾಗಗಳನ್ನು ಕೆಲವರು ಗಾಢವಾಗಿ ಮರ್ದಿಸಿಕೊಳ್ಳುತ್ತಾರೆ. ಇತರ ಭಾಗಗಳನ್ನು ಅಷ್ಟು ಹೆಚ್ಚಾಗಿ ಮರ್ದಿಸಿಕೊಳ್ಳುವುದಿಲ್ಲ.

೨೪. ಹೆಚ್ಚು ಮಾಂಸವಿಲ್ಲದ ಪ್ರದೇಶದಲ್ಲೂ, ಹೊಕ್ಕಳಿನ ಬುಡ, ಮರ್ಮಸ್ಥಾನಗಳೆನಿಸಿದ ಹೃದಯ, ಕೆನ್ನೆ, ಹಣೆಗಪೋಲ, ಇವುಗಳಲ್ಲಿಯೂ ಮೃದುಮರ್ದನವೇ ಹಿತವಾಗುವುದು.

೨೫. ಎಚ್ಚರವಾಗಿರುವಾಗ ಗಟ್ಟಿಯಾಗಿ ಮರ್ದಿಸಬಹುದು. ಅರ್ಧನಿದ್ರೆ, ಅರ್ಧಎಚ್ಚರದ ಸ್ಥಿತಿಯಲ್ಲಿ ಗಟ್ಟಿಯೂ ಅಲ್ಲ, ಮೆತ್ತಗೂ ಅಲ್ಲ ಎಂಬಂತಹ ಮಧ್ಯಮ

**ವಿರುದ್ಧಂ ಕಟಿ ಗುಹ್ಯೇಷು ಲೋಮವತ್ಸು ವಿಶೇಷತಃ ।**
**ಉತ್ಕಂಡೂಯತ್ಸು ಸೋದ್ಧರ್ಷಂ ಸ್ನೇಹಾಕ್ತೇಷು ಚ ಮರ್ದನಂ ॥ ೨೬ ॥**

**ಸ್ಪರ್ಶಾದ್ರೋಮಾಂಚಜನನಂ ಸನಖಚ್ಛುರಿತಂ ಶನ್ಯೈಃ ।**
**ಪುಲಕೋಲ್ಲೇಖನೋಪೇತಂ ಶಿರಃಕಂಡೂಶ್ಚ ಪಾರ್ಶ್ವಯೋಃ ॥ ೨೭ ॥**

**ತೇಷು ತೇಷು ಚ ಗಾತ್ರೇಷು ತತ್ಪ್ರಯೋಜ್ಯಂ ತಥಾ ತಥಾ ।**
**ನಿದ್ರಾಗಮಾಯ ತತ್ಕಾಲೇ ರಾಗಸಂಧುಕ್ಷಣಾಯ ಚ ॥ ೨೮ ॥**

**ತಿಷ್ಠತಶ್ಚೋಪವಿಷ್ಟಸ್ಯ ಜಾಗ್ರತಃ ಸ್ವಪತೋಪಿ ವಾ ।**
**ಸಂವಾಹನಂ ಪ್ರಶಂಸಂತಿ ಯದತ್ಯರ್ಥಂ ಸುಖಾವಹಂ ॥ ೨೯ ॥**

---

ಸ್ಥಿತಿಯಲ್ಲಿ ಮರ್ದಿಸಬೇಕು ನಿದ್ದೆಮಾಡುತ್ತಿರುವವನಿಗೆ ಮೃದುವಾಗಿ ಮರ್ದಿಸಬಹುದು. ಅಥವಾ ಮರ್ದಿಸದೆ ಬಿಟ್ಟರೂ ಬಿಡಬಹುದು.

೨೬. ಸೊಂಟ, ಗುಹ್ಯಸ್ಥಾನ, ಇವುಗಳಲ್ಲಿಯೂ, ವಿಶೇಷವಾಗಿ ರೋಮಗಳುಳ್ಳ ಅವಯವಗಳಲ್ಲೂ ಮರ್ದನಮಾಡತಕ್ಕದ್ದಲ್ಲ. ಬಹಳ ನವೆಯಾಗುತ್ತಿರುವ ಸಂದರ್ಭದಲ್ಲಿ ಹೆಚ್ಚು ಸಂತೋಷದಿಂದ ಎಣ್ಣೆಹಚ್ಚಿ ಚೆನ್ನಾಗಿ ಮರ್ದನಮಾಡಬೇಕು.

೨೭. ತಾನು ಸ್ಪರ್ಶಮಾಡುವುದರಿಂದ ರೋಮಾಂಚವುಂಟುಮಾಡುವುದರ ಮೂಲಕವೂ, ರೋಮಾಂಚವಾದ ಸ್ಥಳದಲ್ಲಿ ಮೆಲ್ಲಗೆ ಉಗುರುಗಳಿಂದ ತುರಿಸುವ ಮೂಲಕವೂ, ತಲೆಯ ಮೇಲೂ ಪಾರ್ಶ್ವಗಳಲ್ಲಿಯೂ ಕೆರೆಯುವ ಮೂಲಕವೂ, ಹಿತವಾಗುವಂತೆ ಮಾಡಬೇಕು.

೨೮. ಆಯಾ ಅಂಗಗಳಲ್ಲಿ ತುರಿಸುವುದು, ಕೆರೆಯುವುದು ಮೊದಲಾದ ಉಪಚಾರಗಳನ್ನು ಹೇಗೆ ಹೇಗೆ ನಡೆಯಿಸುವುದು ಹಿತವೋ, ಹಾಗೆ ಹಾಗೆ ನಡೆಯಿಸಬೇಕು. ಪತಿಗೆ ನಿದ್ದೆ ಬರುವುದಕ್ಕೋಸ್ಕರ ನಿದ್ರಾರಂಭಕಾಲದಲ್ಲಿ ತನ್ನಲ್ಲಿ ಅವನಿಗಿರುವ ಅನುರಾಗವನ್ನು ಉದ್ದೀಪನಮಾಡಬೇಕು.

೨೯. ನಿಂತಿದ್ದಾಗಲೂ, ಕೂತಿದ್ದಾಗಲೂ, ಎಚ್ಚರವಾಗಿದ್ದಾಗಲೂ, ನಿದ್ರಿಸುತ್ತಿದ್ದಾಗಲೂ, ಅಂಗಮರ್ದನವು ಅತ್ಯಂತ ಸುಖಕರವೆಂದು ಹೇಳಬಹುದು.

ನೈಷ್ಪಂದ್ಯಂ ಪುಲಕೋದ್ಭೇದೋ ಗಾತ್ರಾಣಾಮಕ್ಷಿ ಮೀಲನಂ ।
ತತ್ಪ್ರದೇಶಾರ್ಪಣಂ ಕಿಂಚಿತ್ ಬೋಧೇದ್ವಿಕೃತಿದರ್ಶನಂ ॥ ೩೦ ॥

ಊರುಮೂಲಾದಿ ದೇಶೇ ಚ ತತ್ಪಾಣಿಪ್ರತಿಪೀಡನಂ ।
ಲಕ್ಷಯೇನ್ನಿಪುಣಾ ಯತ್ರ ತತ್ರೈವಾಧಿಕಮಾಚರೇತ್ ॥ ೩೧ ॥

ಏವಮೇವ ಯಥೋದ್ದಿಷ್ಟಂ ಸ್ತ್ರೀವೃತ್ತಂ ಯಾನುತಿಷ್ಠತಿ ।
ಪತಿಮಾರಾಧ್ಯ ಸಂಪೂರ್ಣಂ ತ್ರಿವರ್ಗಂ ಸಾऽಧಿಗಚ್ಛತಿ ॥ ೩೨ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸ್ತ್ರೀಧರ್ಮ ವರ್ಣನಂ ನಾಮ ಪಂಚದಶೋऽಧ್ಯಾಯಃ.



೩೦. ಈರೀತಿ ಮರ್ದನಕಾಲದಲ್ಲಿ ಸುಖಪಾರವಶ್ಯದಿಂದ ನಿಶ್ಚಲತ್ವ, ಅಂಗ ಗಳಲ್ಲಿ ರೋಮಾಂಚವೇಳುವುದು. ಕಣ್ಣುಮುಚ್ಚಿಕೊಳ್ಳುವುದು. ಮರ್ದನಮಾಡ ಬೇಕಾದ ಅವಯವಗಳನ್ನು ವಶಪಡಿಸುವುದು, ಈ ಮೊದಲಾದ ವಿಕಾರಗಳು ಅವರಲ್ಲಿ ಕಾಣುತ್ತವೆ.

೩೧. ತೊಡೆಯ ಬುಡ, ಮೊದಲಾದ ಪ್ರದೇಶದಲ್ಲಿ ಹಸ್ತ ಸೋಕುವುದರಿಂದ ಅವನಿಗೆ ಸುಖಾನುಭವವುಂಟಾಗುವುದೆಂದು ಎಲ್ಲಿ ತೋರುವುದೋ ಅಲ್ಲಿ ನಿಪುಣ ರಾದವರು ವಿಶೇಷವಾಗಿ ಮರ್ದನಮಾಡಬೇಕು.

೩೨. ಈವರೆಗೆ ಹೇಳಿದ ಪ್ರಕಾರವಾಗಿ ಹೆಂಗಸರ ನಡವಳಿಕೆಗಳನ್ನೆಲ್ಲಾ ಯಾವಳು ಅನುಸರಿಸಿ ನಡೆದುಕೊಳ್ಳುವಳೋ ಅವಳು ಪತಿಯನ್ನು ಸಂಪೂರ್ಣವಾಗಿ ಸೇವಿಸಿ, ಧರ್ಮಾರ್ಥಕಾಮಗಳೆಂಬ ತ್ರಿವರ್ಗಗಳನ್ನು ಹೊಂದುತ್ತಾಳೆ.

ಎಂಬಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಸ್ತ್ರೀಧರ್ಮ ವರ್ಣನವೆಂಬ ಹದಿನೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಷೋಡಶೋಽಧ್ಯಾಯಃ

---

॥ ಸುಮಂತುರುವಾಚ ॥

ಇತ್ಯುಕ್ತ್ವಾ ಭಗವಾನ್ ಬ್ರಹ್ಮಾ ಸ್ತ್ರೀಲಕ್ಷಣಮಶೇಷತಃ ।
ತದ್ವೃತ್ತಂ ಚ ತಥಾ ಸ್ತ್ರೀಣಾಂ ಜಗಾಮ ಸ ನಿಜಾಲಯಂ ॥ ೧ ॥

ಋಷಯಶ್ಚ ತಥಾ ಜಗ್ಮುಃ ಸ್ವಾನಿ ಧಿಷ್ಣ್ಯಾನ್ಯಶೇಷತಃ ।
ಸ್ತ್ರೀ ಲಕ್ಷಣಂ ತಥಾವೃತ್ತಂ ಶ್ರುತ್ವಾ ಕೃತ್ಯಂ ಮಹೀಪತೇ ॥ ೨ ॥

ಇತ್ಥಂ ಲಕ್ಷಣಸಂಪನ್ನಾಂ ಭಾರ್ಯಾಂ ಪ್ರಾಪ್ಯ ಮಹೀಪತೇ ।
ಕರ್ತವ್ಯಂ ಯದ್ಗೃಹಸ್ಥೇನ ತದಿದಾನೀಂ ನಿಬೋಧ ಮೇ ॥ ೩ ॥

---

## ಹದಿನಾರನೆಯ ಅಧ್ಯಾಯ

೧-೨. ಸುಮಂತು ಮುನಿವರ್ಯರು ಹೇಳುತ್ತಾರೆ—ಹೀಗೆ ಭಗವಂತನಾದ ಬ್ರಹ್ಮನು ಸ್ತ್ರೀ ಲಕ್ಷಣವನ್ನೂ ಮತ್ತು ಸ್ತ್ರೀಯ ಒಳ್ಳೆಯ ನಡತೆಯನ್ನೂ, ಸಮಗ್ರವಾಗಿ ಹೇಳಿ ತನ್ನ ವಾಸಸ್ಥಾನಕ್ಕೆ ಹೋದನು. ಋಷಿಗಳೆಲ್ಲರೂ ತಮ್ಮ ತಮ್ಮ ಆಶ್ರಮಗಳಿಗೆ ಹೋದರು.

೩. ಎಲೈ ರಾಜನೇ ! ಈ ಹೇಳಿದ ಲಕ್ಷಣಗಳಿಂದಲೂ ನಡವಳಿಕೆಯಿಂದಲೂ ಕೂಡಿದ ಹೆಂಡತಿಯನ್ನು ಪಡೆದು ಗೃಹಸ್ಥನು ಮಾಡಬೇಕಾದುದನ್ನು ಹೇಳುತ್ತೇನೆ ಕೇಳು.

ವೈವಾಹಿಕಾಗ್ನೌ ಕುರ್ವೀತ ಗೃಹ್ಯಂ ಕರ್ಮ ಯಥಾವಿಧಿ ।
ಪಂಚಯಜ್ಞವಿಧಾನಂ ತು ಪಂಕ್ತ್ಯಾಂ ಕುರ್ಯಾತ್ಸದಾ ಗೃಹೀ ॥ ೪ ॥

ಪಂಚಸೂನಾ ಗೃಹಸ್ಥಸ್ಯ ತೇನ ಸ್ವರ್ಗಂ ನ ಗಚ್ಛತಿ ।
ಕಾಂಡನೀ ಪೇಷಣೀ ಚುಲ್ಲೀ ಉದಕುಂಭೀಃ ಪ್ರಮಾರ್ಜನೀ ॥ ೫ ॥

ಆಸಾಂ ಕ್ರಮೇಣ ಸರ್ವಾಸಾಂ ವಿಶುದ್ಧ್ಯರ್ಥಂ ಮನೀಷಿಭಿಃ ।
ಪೇಚೋದ್ದಿಷ್ಟಾಃ ಮಹಾಯಜ್ಞಾಃ ಪ್ರತ್ಯಹಂ ಗೃಹಮೇಧಿನಾಂ ॥ ೬ ॥

ಅಧ್ಯಾಪನಂ ಬ್ರಹ್ಮಯಜ್ಞಃ ಪಿತೃಯಜ್ಞಶ್ಚ ತರ್ಪಣಂ ।
ಹೋಮೋ ದೈವೋ ಬಲಿರ್ಭೌಮಃ ತಥಾನ್ಯೋಽತಿಥಿಪೂಜನಂ ॥ ೭ ॥

ಪಂಚೈತಾನ್ಯೋ ಮಹಾಯಜ್ಞಾನ್ ನ ಹಾಪಯತಿ ಶಕ್ತಿತಃ ।
ಸ ಗೃಹೇಪಿ ವಸನ್ನಿತ್ಯಂ ಸೂನಾದೋಷೈರ್ನ ಲಿಪ್ಯತೇ ॥ ೮ ॥

---

೪. ಗೃಹಸ್ಥನು ಮನೆಯಲ್ಲಿದ್ದು, ಶಾಸ್ತ್ರಪ್ರಕಾರ ಗೃಹ್ಯಸೂತ್ರದಲ್ಲಿ ಹೇಳಿದ ರೀತಿ ಕರ್ಮವನ್ನು ವಿವಾಹಾಗ್ನಿಯಲ್ಲಿ ಮಾಡಬೇಕು. ಪಂಚಯಜ್ಞವಿಧಿಯನ್ನು ಶಾಸ್ತ್ರಾನುಸಾರವಾಗಿ ಸದಾ ಮಾಡಬೇಕು.

೫. ಗೃಹಸ್ಥನಿಗೆ ಐದು ಸೂನಾದೋಷಗಳುಂಟಾಗುವುದರಿಂದ ಸ್ವರ್ಗಪ್ರಾಪ್ತಿಗೆ ಪ್ರತಿಬಂಧವಾಗುವುದು, ಕುಟ್ಟುವುದು (ಬಡಿಯುವುದು), ಅರೆಯುವುದು (ಬೀಸುವುದು), ಒಲೆಯಲ್ಲಿ ಬೇಯಿಸುವುದು, ಕೊಡಗಳಲ್ಲಿ ನೀರುತುಂಬುವುದು, ಪೊರಕೆಯಿಂದ ಗುಡಿಸುವುದು, ಇವೇ ಐದು ಸೂನಾದೋಷಗಳು.

೬. ತಿಳಿದವರು ಈ ಎಲ್ಲಾ ದೋಷಗಳೂ ನಿವೃತ್ತಿಯಾಗುವುದಕ್ಕಾಗಿ ಪ್ರತಿದಿನವೂ ಪಂಚಮಹಾಯಜ್ಞಗಳನ್ನು ಮಾಡತಕ್ಕದ್ದೆಂದು ಗೃಹಸ್ಥನಿಗೆ ವಿಧಿಸಿದ್ದಾರೆ.

೭. ವೇದಾಧ್ಯಯನಮಾಡುವುದೇ ಬ್ರಹ್ಮಯಜ್ಞ, ತರ್ಪಣವೇ ಪಿತೃಯಜ್ಞ, ಹೋಮಮಾಡುವುದೇ ದೇವಯಜ್ಞ, ಮೂಕಪ್ರಾಣಿಗಳಿಗೆ ಆಹಾರಕೊಡುವುದೇ ಭೂತಯಜ್ಞವು, ಅತಿಥಿಗಳಿಗೆ ಸತ್ಕಾರಮಾಡುವುದು ಮನುಷ್ಯಯಜ್ಞವು.

೮. ಈ ಪಂಚಮಹಾಯಜ್ಞಗಳನ್ನು ಶಕ್ತ್ಯನುಸಾರವಾಗಿ ತಪ್ಪದೆ ಮಾಡುವವನು ಮನೆಯಲ್ಲಿ ವಾಸಿಸುತ್ತಿದ್ದರೂ ಸೂನಾದೋಷಗಳನ್ನು ಹೊಂದುವುದಿಲ್ಲ.

ದೇವತಾತಿಥಿಭೃತ್ಯಾನಾಂ ಪಿತೄಣಾಮಾತ್ಮನಶ್ಚ ಯಃ ।
ನ ನಿರ್ವಪತಿ ಪಂಚಾನಾಮುಚ್ಛ್ವಸನ್ನ ಚ ಜೀವತಿ ॥ ೯ ॥

॥ ಶತಾನೀಕ ಉವಾಚ ॥

ಯಸ್ಯ ನಾಸ್ತಿ ಗೃಹೇತ್ವಗ್ನಿಃ ಸ ಮೃತೋ ನಾತ್ರ ಸಂಶಯಃ ।
ನ ಸ ಪೂಜಯಿತುಂ ಶಕ್ತೋ ದೇವಾದೀನ್ ಬ್ರಾಹ್ಮಣೋತ್ತಮಃ ॥ ೧೦ ॥

ನಿರಗ್ನಿಕಸ್ಯ ವಿಪ್ರಸ್ಯ ಕಥಂ ದೇವಾದಯೋ ದ್ವಿಜ ।
ಪ್ರೀತಾ ಸ್ಯುಃ ಶಾಂತಯೇ ತಸ್ಯ ಪರಂ ಕೌತೂಹಲಂ ಮಮ ॥ ೧೧ ॥

॥ ಸುಮಂತುರುವಾಚ ॥

ಸಾಧು ಪೃಷ್ಟೋಽಸ್ಮಿ ರಾಜೇಂದ್ರ ಶ್ರೂಯತಾಂ ಪರಮಂ ವಚಃ ।
ಅನಗ್ನಯಸ್ತು ಯೇ ವಿಪ್ರಾಃ ತೇಷಾಂ ಶ್ರೇಯೋಽಭಿಧೀಯತೇ ॥ ೧೨ ॥

ವ್ರತೋಪವಾಸನಿಯಮೈಃ ನಾನಾದಾನೈಸ್ತಥಾ ನೃಪ ।
ದೇವಾದಯೋ ಭವಂತ್ಯೇವ ಪ್ರೀತಾಸ್ತೇಷಾಂ ನ ಸಂಶಯಃ ॥ ೧೩ ॥

---

೯. ದೇವತೆಗಳು, ಅತಿಥಿಗಳು, ಭೃತ್ಯರು, ಪಿತೃಗಳು, ಆತ್ಮ ಈ ಐವರನ್ನೂ ಯಾವನು ತೃಪ್ತಿಪಡಿಸಲಾರನೋ ಅವನು ಬದುಕಿದ್ದರೂ ಬದುಕಿದಂತಲ್ಲ ಎಂದನು.

೧೦. ಶತಾನೀಕರಾಜನು ಹೇಳುತ್ತಾನೆ—ಯಾವನ ಮನೆಯಲ್ಲಿ ಅಗ್ನಿಯು (ಔಪಾಸನ, ಅಗ್ನಿಹೋತ್ರ ಇವು) ಇಲ್ಲವೋ ಅವನು ಮೃತಪ್ರಾಯನೇ ಸರಿ. ಈ ವಿಷಯದಲ್ಲಿ ಸಂದೇಹವಿಲ್ಲ. ವಸ್ತುತಃ ಅವನು ಬ್ರಾಹ್ಮಣಶ್ರೇಷ್ಠನೇ ಆಗಿದ್ದರೂ ದೇವತೆಗಳು ಮೊದಲಾದವರನ್ನು ಪೂಜಿಸುವುದಕ್ಕೆ ಅರ್ಹನಲ್ಲ.

೧೧. ಆಹಿತಾಗ್ನಿಯಲ್ಲದ ಬ್ರಾಹ್ಮಣನಿಗೆ ದೇವತೆಗಳು ಸುಪ್ರೀತರಾಗಿ ಮನಶ್ಶಾಂತಿ ಕೊಡುವುದು ಹೇಗೆ? ಇದನ್ನು ಕೇಳಲು ನನಗೆ ಆಶೆ ಎಂದನು.

೧೨. ಸುಮಂತುಮುನಿವರ್ಯರು ಹೇಳುತ್ತಾರೆ—ಎಲೈ ರಾಜಶ್ರೇಷ್ಠನೇ! ನೀನು ನನ್ನನ್ನು ಚನ್ನಾಗಿ ಕೇಳಿದೆ. ನಾನು ಹೇಳುವ ಮಾತನ್ನು ಕೇಳು. ಆಹಿತಾಗ್ನಿಯಲ್ಲದೆ ಇದ್ದ ಬ್ರಾಹ್ಮಣನಿಗೆ ಒಳ್ಳೆಯದಾಗುವ ವಿಧಾನವನ್ನು ಹೇಳುತ್ತೇನೆ.

೧೩. ವ್ರತ, ಉಪವಾಸ, ನಿಯಮಗಳು, ಇವುಗಳಿಂದಲೂ; ಬಗೆಬಗೆಯ ದಾನಗಳಿಂದಲೂ; ಅವರಿಗೆ ದೇವ, ಪಿತೃ, ಅತಿಥಿ, ಇವರು ಪ್ರೀತರಾಗಿಯೇ ಆಗುತ್ತಾರೆ ಇದಕ್ಕೆ ಸಂದೇಹವಿಲ್ಲ.

ವಿಶೇಷಾದುಪವಾಸೇನ ತಿಥೌ ಕಿಲ ಮಹೀಪತೇ ।
ಪ್ರೀತಾ ದೇವಾದಯಸ್ತೇಷಾಂ ಭವಂತಿ ಕುರುನಂದನ ॥ ೧೪ ॥

॥ ಶತಾನೀಕ ಉವಾಚ ॥
ಭಗವಂಸ್ತ್ವಂ ತಿಥೀನ್ ಬ್ರೂಹಿ ತಿಥೀನಾಂ ಚ ವಿಧಿಂ ಹಿ ಮೇ ।
ಪ್ರಾಶನಂ ಗೃಹ್ಯಧರ್ಮಾಂಶ್ಚ ಉಪವಾಸವಿಧೀನಪಿ ॥ ೧೫ ॥

ಮುಚ್ಯೇಮ ಯೇನ ಪಾಪೌಘಾತ್ ತ್ವತ್ಪ್ರಸಾದ್ದ್ವಿಜೋತ್ತಮ ।
ಸಂಸಾರಾಚ್ಚಾಪಿ ವಿಪ್ರೇಂದ್ರ ಶ್ರೇಯಸೇ ಜಗತಸ್ತಥಾ ॥ ೧೬ ॥

॥ ಸುಮಂತುರುವಾಚ ॥
ಶೃಣು ಕೌರವ ಕರ್ಮಾಣಿ ತಿಥಿಗುಹ್ಯಾಶ್ರಿತಾನಿ ತು ।
ಶ್ರುತಾನಿ ಘ್ನಂತಿ ಪಾಪಾನಿ ಉಪೋಷಿತಫಲಾನಿ ಚ ॥ ೧೭ ॥

---

೧೪. ಮೇಲಾಗಿ ಒಂದೊಂದು ಕ್ಲುಪ್ತವಾದ ತಿಥಿಯಲ್ಲಿ ಒಂದೊಂದು ಬಗೆಯ ಆಹಾರವನ್ನು ತೆಗೆದುಕೊಳ್ಳುವುದರಿಂದಲೂ, ವಿಶೇಷವಾದ ಕೆಲವು ತಿಥಿಗಳಲ್ಲಿ ಉಪವಾಸಮಾಡುವುದರಿಂದಲೂ, ದೇವತೆಗಳು ಮೊದಲಾದವರು ಪ್ರೀತರಾಗುತ್ತಾರೆ ಎನ್ನಲು,

೧೫ ಆಗ ಶತಾನೀಕರಾಜನು ಹೇಳುತ್ತಾನೆ—"ಸ್ವಾಮಿ, ಪೂಜ್ಯರಾದ ಸುಮಂತುಮುನಿವರ್ಯರೇ! ತಿಥಿಗಳನ್ನೂ, ತಿಥಿಗಳಲ್ಲಿ ನಡೆಯಿಸಬೇಕಾದ ವಿಧಿಗಳನ್ನೂ, ಆಯಾ ತಿಥಿಗಳಲ್ಲಿ ಭಕ್ಷಿಸಬೇಕಾದ ವಸ್ತುಗಳನ್ನೂ, ಗೃಹ್ಯಸೂತ್ರೋಕ್ತ ಧರ್ಮಗಳನ್ನೂ, ಉಪವಾಸ ವಿಧಿಗಳನ್ನೂ ನನಗೆ ವಿವರಿಸಿ ಹೇಳಿ".

೧೬. "ಓ ಬ್ರಾಹ್ಮಣೋತ್ತಮರೇ, ನಿಮ್ಮ ಅನುಗ್ರಹದಿಂದ ನಾವು ಪಾಪಗಳಿಂದಲೂ, ಸಂಸಾರದಿಂದಲೂ ಹೇಗೆ ಬಿಡುಗಡೆಹೊಂದುತ್ತೇವೆಯೋ ಆ ವಿಧಿಯನ್ನು ಜಗತ್ತಿಗೆ ಪ್ರಯೋಜನವುಂಟಾಗುವುದಕ್ಕಾಗಿ ಹೇಳಿ" ಎಂದನು.

೧೭. ಆಗ ಸುಮಂತುಮುನಿವರ್ಯರು ಹೇಳುತ್ತಾರೆ—ಎಲೈ ಕುರುವಂಶೋದ್ಭವನೇ! ಆಯಾ ತಿಂಗಳಿಗೆ ಸಂಬಂಧಪಟ್ಟ ಕರ್ಮಗಳ ವಿಚಾರವನ್ನು ಹೇಳುತ್ತೇನೆ ಕೇಳು. ಈ ಕರ್ಮಗಳ ವಿಧಾನವನ್ನೂ ಮತ್ತು ಮಾಡುವುದರ ಫಲಗಳನ್ನೂ ಕೇಳಿದರೆ ಸಮಸ್ತ ಪಾಪಗಳೂ ನಾಶವಾಗುತ್ತವೆ.

ಪ್ರತಿಪದಿ ಕ್ಷೀರಪ್ರಾಶನಂ । ದ್ವಿತೀಯಾಯಾಂ ಲವಣವರ್ಜನಂ ।
ತೃತೀಯಾಯಾಂ ತಿಲಾನ್ನಂ ಪ್ರಾಶ್ನೀಯಾತ್ । ಚತುರ್ಥ್ಯಾಂ ಕ್ಷೀರಾಶನಶ್ಚ । ಪಂಚಮ್ಯಾಂ ।
ಫಲಾಶನಃ । ಸದಾಷಷ್ಠ್ಯಾಂ ಶಾಕಾಶನಂ । ಸಪ್ತಮ್ಯಾಂ ಬಿಲ್ವಾಹಾರೋಷ್ಟಮ್ಯಾಂ ತು ॥ ೧೮ ॥

ಪಿಷ್ಟಾಶನೋ । ನವಮ್ಯಾಂ ಅನಗ್ನಿಪಾಕಾಹಾರೋ । ದಶಮ್ಯಾಂ ।
ಏಕಾದಶ್ಯಾಂ ಘೃತಾಹಾರೋ ದ್ವಾದಶ್ಯಾಂ ಪಾಯಸಾಹಾರಃ ॥ ೧೯ ॥

ತ್ರಯೋದಶ್ಯಾಂ ಗೋಮೂತ್ರಾಹಾರಃ ಚತುರ್ದಶ್ಯಾಂ ಯವಾನ್ನಾಹಾರಃ ॥
ಕುಶೋದಕ ಪ್ರಾಶನಃ ಪೌರ್ಣಮಾಸ್ಯಾಂ । ಹವಿಷ್ಯಾಹಾರೋಽಮಾವಾಸ್ಯಾಯಾಂ ।
ಏಷಪ್ರಾಶನ ವಿಧಿಃ । ತಿಥೀನಾಮೇವಚಾನೇನ ವಿಧಿನಾ ಪಕ್ಷಮೇಕಂ ಯೋ ವರ್ತಯತಿ ॥ ೨೦ ॥

---

೧೮. ಪಾಡ್ಯಮಿಯ ದಿನ ಹಾಲು ಕುಡಿಯುವುದು, ಬಿದಿಗೆಯ ದಿನ ಉಪ್ಪು ಹಾಕದ ಆಹಾರಸೇವನೆ, ತದಿಗೆಯ ದಿನ ಎಳ್ಳುಹುಡಿಯ ಅನ್ನವನ್ನು ತಿನ್ನುವುದು, ಚತುರ್ಥಿಯ ದಿನ ಹಾಲುಅನ್ನವನ್ನು ತಿನ್ನುವುದು, ಪಂಚಮಿಯ ದಿನ ಬಗೆಬಗೆಯ ಹಣ್ಣುಗಳನ್ನು ತಿನ್ನುವುದು, ಷಷ್ಠಿಯ ದಿನ ಬಗೆಬಗೆಯ ತರಕಾರಿ ತಿನ್ನುವುದು, ಸಪ್ತಮಿಯ ದಿನ ಬಿಲ್ವವನ್ನು ಭಕ್ಷಿಸುವುದು.

೧೯. ಅಷ್ಟಮಿಯ ದಿನ ಹಿಟ್ಟಿನಿಂದ ಮಾಡಿದ ತಿಂಡಿಯನ್ನು ತಿನ್ನುವುದು, ನವಮಿಯಲ್ಲಿ ಬೇಯಿಸದೆ ಇರುವ ಹಸಿಯ ಆಹಾರವನ್ನು ತಿನ್ನುವುದು, ದಶಮಿ, ಏಕಾದಶಿ ದಿನಗಳಲ್ಲಿ ತುಪ್ಪವನ್ನೇ ಆಹಾರವಾಗಿ ತೆಗೆದುಕೊಳ್ಳುವುದು, ದ್ವಾದಶಿಯಲ್ಲಿ ಪಾಯಸವನ್ನು ಸೇವಿಸುವುದು, ತ್ರಯೋದಶಿಯಲ್ಲಿ ಹಸುವಿನ ಗಂಜಲವನ್ನು ಸೇವಿಸುವುದು, ಚತುರ್ದಶಿಯ ದಿವಸ ಜವೆಗೋಧಿಯ ಅನ್ನವನ್ನು ತಿನ್ನುವುದು.

೨೦. ಪೂರ್ಣಿಮೆಯ ದಿವಸ ಕುಶೋದಕ ಪಾನಮಾಡುವುದು, ಅಮಾವಾಸ್ಯೆಯಲ್ಲಿ ಅಕ್ಕಿಯನ್ನು ತೊಳೆಯದೆ, ಗಂಜಿಯನ್ನು ಬಸಿಯದೆ ಮಾಡಿದ ಹವಿಷ್ಯಾನ್ನವನ್ನು ಸೇವಿಸುವುದು. ಇದೇ ಆಹಾರ ತೆಗೆದುಕೊಳ್ಳುವ ಕ್ರಮ. ಉಕ್ತಕ್ರಮವನ್ನನುಸರಿಸಿ ಆಯಾ ತಿಥಿಗಳಲ್ಲಿ,

**ಸೋಽಶ್ವಮೇಧಫಲಂ ದಶಗುಣಫಲಮವಾಪ್ನೋತಿ ।**
**ಸ್ವರ್ಗೇ ಮನ್ವಂತರಾಣಿ ಯಾವತ್ಪ್ರತಿವಸತಿ ॥ ೨೧ ॥**

**ಉಪಗೀಯಮಾನೋಽಪ್ಸರೋ ಗಂಧರ್ವೈರ್ಮಾಸತ್ರಯ ಚತುಷ್ಟಯಂ ।**
**ಸೋಽಶ್ವಮೇಧ ರಾಜಸೂಯಾನಾಂ ಶತಗುಣಮವಾಪ್ನೋತಿ ॥ ೨೨ ॥**

**ಸ್ವರ್ಗೇ ಉಪಗೀಯಮಾನೋಽಪ್ಸರೋ ಗಂಧರ್ವೈಶ್ಚತುರ್ಯುಗಾನಾಂ**
**ದಶಶತೀರ್ಯಾವತ್ಪ್ರತಿವಸತಿ ।**
**ತಥಾಷ್ಟಮಾಸತಾರಣೇ ರಾಜಸೂಯಾಶ್ವಮೇಧಾಭ್ಯಾಂ ಸಹಸ್ರಗುಣ ಫಲ**
**ಮವಾಪ್ನೋತಿ ॥ ೨೩ ॥**

**ಸ್ವರ್ಗೇ ಚತುರ್ದಶ ಮನ್ವಂತರಾಣಿ ಯಾವತ್ಪ್ರತಿವಸತಿ ।**
**ಉಪಗೀಯ ಮಾನೋಽಪ್ಸರೋಽಗಂಧರ್ವೈಃ ।**
**ಯ ಏವಂ ನಿಯಮಮಾಸ್ಥಾಯ ವರ್ಷಮೇಕಂ ವರ್ತಯತಿ ॥ ೨೪ ॥**

---

೨೧. ಆಯಾ ಆಹಾರಗಳನ್ನು ತೆಗೆದುಕೊಳ್ಳುತ್ತಾ ಒಂದುಪಕ್ಷದವರೆಗೆ ಯಾವನು ಈ ವಿಧಿಯನ್ನು ನಡೆಯಿಸುತ್ತಾನೋ ಅವನು ಹತ್ತು ಅಶ್ವಮೇಧ ಯಜ್ಞ ಮಾಡಿದ ಫಲವನ್ನು ಹೊಂದುತ್ತಾನೆ. ಒಂದು ಮನ್ವಂತರಕಾಲ ಸ್ವರ್ಗಲೋಕದಲ್ಲಿ ವಾಸಿಸುತ್ತಾನೆ.

೨೨. ಅಲ್ಲಿ ಅಪ್ಸರರು, ಗಂಧರ್ವರು ಹಾಡುವ ಸಂಗೀತವನ್ನು ಕೇಳುತ್ತಾ ಮೂರು ನಾಲ್ಕು ತಿಂಗಳು ಸುಖವಾಗಿ ಸ್ವರ್ಗದಲ್ಲಿ ವಾಸಿಸುತ್ತಾನೆ. ಅವನಿಗೆ ನೂರಾರು ಅಶ್ವಮೇಧ, ನೂರಾರು ರಾಜಸೂಯಯಾಗಗಳನ್ನು ಮಾಡಿದ ಫಲಬರುತ್ತದೆ.

೨೩. ಸ್ವರ್ಗಲೋಕದಲ್ಲಿ ಅಪ್ಸರರೂ, ಗಂಧರ್ವರೂ, ಹಾಡುವ ಸಂಗೀತವನ್ನು ಕೇಳುತ್ತಾ ಸಾವಿರ ಚತುರ್ಯುಗಗಳ ಕಾಲ ವಾಸಿಸುತ್ತಾನೆ. ಹೀಗೆ ಎಂಟು ತಿಂಗಳನ್ನು ಕಳೆದರೆ ರಾಜಸೂಯ, ಅಶ್ವಮೇಧ ಯಜ್ಞಗಳ ಫಲಗಳಿಗಿಂತಲೂ ಸಾವಿರಾರುಪಾಲು ಹೆಚ್ಚು ಫಲವನ್ನು ಹೊಂದುತ್ತಾನೆ.

೨೪–೨೫. ಮತ್ತೆ ಕೆಲವರು ಹೇಳುತ್ತಾರೆ—ಹದಿನಾಲ್ಕು ಮನ್ವಂತರಗಳ ಕಾಲ ಸ್ವರ್ಗದಲ್ಲಿ ವಾಸಿಸುತ್ತಾನೆ. ಒಂದುವರ್ಷ ಪರ್ಯಂತ ಯಾವನು ಇದೇ

ಸ ಸವಿತುರ್ಲೋಕೇ ಕಾಲಂ ಮನ್ವಂತರಂ ಪ್ರತಿವಸತಿ ॥ ೨೫ ॥

ಯ ಏವಂ ನಿಯಮವಾನ್ ರಾಜನ್ನಾಶ್ವಯುಜ ನವಮ್ಯಾಂ ಮಾಘ ಮಾಸಸ್ಯ ಸಪ್ತಮ್ಯಾಂ ವೈಶಾಖ ತೃತೀಯಾಯಾಂ ಕಾರ್ತಿಕ ಪೌರ್ಣಮಾಸ್ಯಾಂ ತಿಥಿವ್ರತಾನಿ ಗೃಹ್ಣಾತಿ ಬ್ರಹ್ಮಚಾರೀ ಗೃಹಸ್ಥೋ ವನಸ್ಥೋ ನಾರೀ ನರೋ ವಾ ಶೂದ್ರಃ ಪ್ರಯತಮಾನಸಃ ದೀರ್ಘಾಯುಷ್ಯಂ ಸವಿತುಃ ಸಾಲೋಕ್ಯಂ ವ್ರಜತಿ ॥ ೨೬ ॥

ಯೈಶ್ಚಾಪಿ ಪುರಾ ರಾಜನ್ನನೇನ ವಿಧಿನಾ ಏತಾಸು ತಿಥಿಷು ಅನ್ಯ ಜನ್ಮಾಂತರೇ ಉಪವಾಸವಿಧಿಃ ಕೃತಃ ದಾನಾನಿ ದತ್ತಾನಿ ವಿವಿಧ ಪ್ರಕಾರಾಣಿ ಬ್ರಾಹ್ಮಣಾನಾಂ ತಪಸ್ವಿಜನೇಷು ವಾ ॥ ೨೭ ॥

ತ್ರಿರಾತ್ರೋಪವಾಸಿನಾಂ ತೀರ್ಥಯಾತ್ರಾತಪೋಗುರುಮಾತಾಪಿತೃ ।
ಶುಶ್ರೂಷಾನಿರತಾನಾಂ ತೇಷಾಂ ಸ್ವರ್ಗಾದಿ ಭೋಗವಾಸನಾತ್

---

ಪ್ರಕಾರ ನಡೆಯಿಸುತ್ತಿರುವನೋ ಅವನು ಅಪ್ಸರರು, ಗಂಧರ್ವರು ಇವರು ಹಾಡುವ ಗೀತವನ್ನು ಕೇಳುತ್ತಾ ಸೂರ್ಯಲೋಕದಲ್ಲಿ ಒಂದು ಮನ್ವಂತರ ಕಾಲದವರೆಗೂ ವಾಸಿಸುತ್ತಾನೆ.

೨೬. ಈ ಪ್ರಕಾರ ನಿಯಮವುಳ್ಳವನಾಗಿ ಆಶ್ವಯುಜ ಶುದ್ಧ ನವಮಿ, ಮಾಘ ಶುದ್ಧ ಸಪ್ತಮಿ, ವೈಶಾಖ ಶುದ್ಧ ತೃತೀಯೆ, ಕಾರ್ತಿಕ ಶುದ್ಧ ಪೂರ್ಣಿಮಾ ಇವುಗಳಲ್ಲಿ ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಮುಂತಾದ ಯಾವ ಆಶ್ರಮದ ಪುರುಷನೇ ಆಗಲಿ, ಸ್ತ್ರೀಯೇ ಆಗಲಿ, ಪರಿಶುದ್ಧವಾದ ಮನಸ್ಸಿನಿಂದ ಆಯಾ ತಿಥಿಗಳಲ್ಲಿ ಮಾಡಬೇಕೆಂದು ಉಕ್ತವಾದ, ಆಯಾ ವ್ರತಗಳನ್ನು ಗ್ರಹಣಮಾಡಿದರೆ ದೀರ್ಘಾಯುಸ್ಸನ್ನೂ, ಸತ್ಯ ಲೋಕವನ್ನೂ ಪಡೆಯಬಹುದು.

೨೭. ಓ ಪ್ರಭುವೇ! ಈ ಹೇಳಿದ ವಿಧಿಯಿಂದ, ಈ ಹೇಳಿದ ತಿಥಿಗಳಲ್ಲಿ, ಹಿಂದಿನ ಜನ್ಮದಲ್ಲಿ ಯಾವನು ಉಪವಾಸವ್ರತವನ್ನು ಆಚರಿಸಿದ್ದಾನೋ, ಬ್ರಾಹ್ಮಣರಿಗೂ, ತಪಸ್ವಿಗಳಿಗೂ ಯಾವನು ನಾನಾಪ್ರಕಾರವಾದ ದಾನಗಳನ್ನು ಕೊಟ್ಟಿದ್ದಾನೋ ಅಂಥವನೂ,

೨೮. ಮತ್ತು ಮೂರುರಾತ್ರಿ ಉಪವಾಸಮಾಡಿದವರೂ, ತೀರ್ಥಯಾತ್ರೆ, ತಪಸ್ಸು ಗುರುಶುಶ್ರೂಷೆ, ತಾಯಿತಂದೆಗಳ ಶುಶ್ರೂಷೆ ಇವುಗಳಲ್ಲಿ ನಿರತರಾದ ಜನರೂ,

ಇಹಾಗತಾನಾಂ ಫಲನಿಷ್ಪತ್ತಿಚಿಹ್ನಾನಿ ಮನುಷ್ಯಲೋಕೇ ಪ್ರತ್ಯಕ್ಷತ ಏವ ದೃಶ್ಯಂತೇ ॥ ೨೮ ॥

ಹಸ್ತ್ಯಶ್ವಯಾನಯುಗ್ಯಧನರತ್ನ ಕನಕಹಿರಣ್ಯ ಕಟಕಕೇಯೂರಗ್ರೈವೇಯಕ ಕಟಿಸೂತ್ರ ಬ್ರಹ್ಮಸೂತ್ರ ಕರ್ಣಾಲಂಕಾರ ಮುಕುಟವರ ವಸ್ತ್ರವರ ನಾರೀವರ ವಿಲೇಪನ ಸುರೂಪ ಗುಣದೀರ್ಘಾಯುಷೋ ವಿಗತಾಧಿವ್ಯಾಧಯೋ ದಾನೋಪವಾಸರತಾನಾಂ ಫಲಾನ್ಯೇತಾನಿ ನೃತ್ಯಗೀತ ವಾದಿತ್ರ ಮಂಗಲಪಾಠಕ ಶಬ್ದೈರಿಹಾದ್ಯಾಪಿ ಪುಣ್ಯಕೃತೋ ಬೋಧ್ಯಮಾನಾದೃಶ್ಯಂತ ಇತಿ ॥ ೨೯ ॥

ತಥಾ ಕೃತೋಪವಾಸಾ ಅಪಿ ಹಿ ದೃಶ್ಯಂತೇ ॥ ೩೦ ॥

ತಥಾ ಅದತ್ತದಾನಾ ಅಕೃತಪುಣ್ಯಾಶ್ಚ ಪ್ರತ್ಯಕ್ಷತ ಏವ ದೃಶ್ಯಂತೇ ॥ ೩೧ ॥

---

ಸ್ವರ್ಗಭೋಗವನ್ನು ಅನುಭವಿಸುವರು. ಅಲ್ಲದೆ ಇಲ್ಲಿಗೆ ಬಂದಾಗ ಯಾವ ಫಲವುಂಟಾಗುವುದೆಂಬುದರ ಚಿಹ್ನೆಗಳು ಈ ಲೋಕಲ್ಲಿ ಪ್ರತ್ಯಕ್ಷವಾಗಿ ಕಾಣುತ್ತವೆ.

೨೯. ಅವರು ಆನೆ, ಕುದುರೆ, ಪಲ್ಲಕ್ಕಿ, ಬಂಡಿ, ಇವುಗಳ ಮೇಲೆ ಪ್ರಯಾಣ ಮಾಡುವುದು; ಹಣಕಾಸು, ರತ್ನ, ಚಿನ್ನ, ಸ್ವರ್ಣಕಂಕಣ, ನಾಗಮುರಿಗೆ, ಕಂಠಾಭರಣ, ಉಡಿದಾರ, ಡಾಬು, ಜನಿವಾರ, ಓಲೆ, ಕಡಕು, ಕುಂಡಲ, ಕಿರೀಟ, ಶ್ರೇಷ್ಠವಾದ ಬಟ್ಟೆಗಳು, ಶ್ರೇಷ್ಠವಾದ ಸ್ತ್ರೀಜನ, ಶ್ರೇಷ್ಠವಾದ ಅನುಲೇಪನದ್ರವ್ಯ ಇವುಗಳುಳ್ಳವರೂ, ಸೌಂದರ್ಯಯುಕ್ತರೂ, ಉತ್ತಮಗುಣವುಳ್ಳವರೂ, ದೀರ್ಘಾಯುಷ್ಮಂತರೂ, ರೋಗ, ಮನೋವ್ಯಥೆ ಇವುಗಳಿಲ್ಲದವರೂ, ಆಗಿ ಇರುವುದು; ಇವೆಲ್ಲಾ ದಾನ, ಉಪವಾಸ ಇವುಗಳಲ್ಲಿ ಆಸಕ್ತರಾದವರಿಗೆ ಈ ಲೋಕದಲ್ಲಿ ಕಾಣುವ ಫಲಗಳಾಗಿವೆ. ಇಂಥ ಪುಣ್ಯಾತ್ಮರು ಗೀತ, ವಾದ್ಯ, ಮಂಗಳಸ್ತುತಿಪಾಠ ಇವುಗಳ ಶಬ್ದವನ್ನು ಕೇಳಿ ಎಚ್ಚರಗೊಳ್ಳುತ್ತಾ ವೈಭವದಿಂದ ಇರುವುದನ್ನು ಈ ಲೋಕದಲ್ಲಿ ಈಗಲೂ ಕಾಣಬಹುದು.

೩೦. ಉಕ್ತಕ್ರಮದಿಂದ ಉಪವಾಸಮಾಡಿದವರೂ ಸಹ ಈ ಭೋಗವನ್ನು ಅನುಭವಿಸುತ್ತಾರೆ.

೩೧. ದಾನವನ್ನೂ ಕೊಡದೆ, ಪುಣ್ಯಕಾರ್ಯಗಳನ್ನೂ ಮಾಡದೆ ಇರುವವರ ಸ್ಥಿತಿ ಪ್ರತ್ಯಕ್ಷವಾಗಿಯೇ ಕಾಣುತ್ತದೆ.

ತಥ್ಯಥಾ ಕಾಣಕುಷ್ಠಿ ಬಧಿರಜಡಮೂಕವ್ಯಂಗಾ ।
ರೋಗದಾರಿದ್ರ್ಯೋಪಸರ್ಗವ್ಯಾಧಿ ಹತಾಯುಷಶ್ಚ ದೃಶ್ಯಂತೇಽದ್ಯಾಪಿ
ಮಾನವಾಃ ॥ ೩೨ ॥

॥ ಶತಾನೀಕ ಉವಾಚ ॥

ದ್ವಿಜೇಂದ್ರ ತಿಥಯಃ ಪ್ರೋಕ್ತಾ ಸಮಾಸೇನ ತ್ವಯಾ ಬುಧ ।
ವಿಸ್ತರೇಣೈವ ಮೇ ಭೂಯಃ ಪ್ರಬ್ರೂಹಿ ದ್ವಿಜಸತ್ತಮ ॥ ೩೩ ॥

ರಹಸ್ಯಂ ಯತ್ತಿಥೀನಾಂ ತು ದೇವಾನಾಂ ಚ ವಿಚೇಷ್ಟಿತಂ ।
ಯಾನೀಷ್ಟಾನಿ ಚ ದೇವಾನಾಂ ಭೋಜ್ಯಾನಿ ನಿಯಮಾಸ್ತಥಾ ॥ ೩೪ ॥

ತಾನಿ ಮೇ ವದ ಧರ್ಮಜ್ಞ ಯೇನ ಪೂತೋ ಭವೇನ್ನಹಂ ।
ನಿರ್ದ್ವಂದ್ವೋ ಹಿ ಯಥಾ ವಿಪ್ರ ಲಭೇ ಯಾಗಫಲಾನಿ ತು ॥ ೩೫ ॥

---

೩೨. ಅಂಥವರು ಕುರುಡರೋ, ತೊನ್ನು ಹಿಡಿದವರೋ, ಕಿವುಡರೋ, ಮಂಕರೋ, ಮೂಗರೋ, ಅಂಗಹೀನರೋ ಆಗಿರುವುದೂ; ರೋಗ, ಬಡತನ, ಸಾಂಕ್ರಾಮಿಕ ವ್ಯಾಧಿ, ಇತ್ಯಾದಿಗಳಿಂದ ಅರ್ಧಾಯುಸ್ಸಿನಲ್ಲಿಯೇ ಮೃತಿಹೊಂದುವುದೂ; ಈಗಲೂ ಕಣ್ಣಿಗೆ ಬೀಳುತ್ತದೆ.

೩೩. ಶತಾನೀಕರಾಜನು ಕೇಳುತ್ತಾನೆ—"ವಿದ್ವಾಂಸನಾದ ವಿಪ್ರೋತ್ತಮನೇ! ನೀನು ತಿಥಿಗಳ ವಿಷಯವನ್ನು ಸಂಕ್ಷೇಪನಾಗಿ ಹೇಳಿಬಿಟ್ಟೆ ಪುನಃ ಅದನ್ನೇ ನನಗೆ ಮಂದಟ್ಟಾಗುವಂತೆ ವಿಸ್ತಾರವಾಗಿ ಹೇಳು."

೩೪-೩೫. ಎಲೈ ಪೂಜ್ಯನೇ! ಅದಲ್ಲದೆ ತಿಥಿಗಳ ರಹಸ್ಯ ಯಾವುದು, ದೇವತೆಗಳು ನಡೆಯಿಸುವ ಕೆಲಸಗಳೂ, ಅವರಿಗೆ ಇಷ್ಟವಾದ ಭೋಜ್ಯವಸ್ತುಗಳೂ ಆವುವು? ಆ ಸಂದರ್ಭದ ನಿಯಮಗಳು ಆವುವು? ಹೇಳು. ನೀನು ಹೇಳಿದಂತೆ ಪ್ರತಿದಿನವೂ ಆಚರಿಸಿ ನಾನು ಪೂತನಾದೇನು. ಏನುಮಾಡಿದರೆ ಹಸಿವು, ಬಾಯಾರಿಕೆ ಮುಂತಾದ ದ್ವಂದ್ವದುಃಖಗಳಿಲ್ಲದೆ ಯಾಗಫಲವನ್ನು ಹೊಂದಬಹುದೋ ಅದನ್ನು ನನಗೆ ಹೇಳು ಎಂದನು.

॥ ಸುಮಂತುರುವಾಚ ॥

ರಹಸ್ಯಂ ಯತ್ತಿಥೀನಾಂ ಚ ಭೋಜನಂ ಫಲಮೇವ ತು ।
ಯಾವಚ್ಚ ಯೇನ ನಿಯಮೋ ವಿಶೇಷಾತ್ ಸ್ತ್ರೀಜನಸ್ಯ ಚ ॥ ೩೬ ॥

ಏತತ್ತೇ ಸರ್ವಮಾಖ್ಯಾಮೋ ರಹಸ್ಯಂ ತನ್ನಿಬೋಧ ಮೇ ।
ಯನ್ಮಯಾ ನೋಕ್ತಪೂರ್ವಂ ಹಿ ಕಸ್ಯಚಿತ್ಸುಪ್ರಿಯಸ್ಯ ಹಿ ॥ ೩೭ ॥

ತತ್ತೇಽಹಂ ಸಂಪ್ರವಕ್ಷ್ಯಾಮಿ ಯಸ್ಯ ದೇವಸ್ಯ ಯಾ ತಿಥಿಃ ।
ದೇವತಾನಾಂ ರಹಸ್ಯಾನಿ ವ್ರತಾನಿ ನಿಯಮಾಸ್ತಥಾ ॥ ೩೮ ॥

ತಾಞ್ಛೃಣುಷ್ವ ಮಹಾಬಾಹೋ ಗದತೋ ಮಮ ನಾರದ ।
ಸೃಷ್ಟಿಂ ಪೂರ್ವಂ ವದಿಷ್ಯಾಮಿ ಸಂಕ್ಷೇಪೇಣ ತಿಥಿಂ ಪ್ರತಿ ॥ ೩೯ ॥

ತಮೋಭೂತಮಿದಂತ್ವಾಸೀತ್ ಅಲಕ್ಷ್ಯಮವಿತರ್ಕಿತಂ ।
ಜಗದ್ಬ್ರಹ್ಮಾ ಸಮಾಗತ್ಯಾಸೃಜದಾತ್ಮಾನಮಾತ್ಮನಾ ॥ ೪೦ ॥

---

೩೬. ಸುಮಂತು ಮುನಿವರ್ಯರು ಹೇಳುತ್ತಾರೆ—ತಿಥಿಗಳ ರಹಸ್ಯ ಯಾವುದೆಂಬುದನ್ನೂ, ಆಯಾ ತಿಥಿಗಳಲ್ಲಿ ಯಾವ ಆಹಾರ ಸೇವನೆಮಾಡಬೇಕೆಂಬುದನ್ನೂ, ಅದರ ಫಲವನ್ನೂ, ಮತ್ತು ಸ್ತ್ರೀಯರು ವಿಶೇಷವಾಗಿ ಎಷ್ಟು ನಿಯಮವನ್ನು ಯಾವ ಪ್ರಕಾರ ಮಾಡಬೇಕೆಂಬುದನ್ನೂ,

೩೭. ಇವೇ ಮೊದಲಾದ ಬಹು ರಹಸ್ಯವಾದ ವಿಷಯವೆಲ್ಲವನ್ನೂ ನಾನು ಹೇಳುತ್ತೇನೆ ಕೇಳು. ಈ ವಿಚಾರವನ್ನು ನನಗೆ ಅತಿ ಪ್ರಿಯನಾದ ಯಾವನಿಗೂ ನಾನು ಈವರೆಗೂ ಎಂದೂ ಹೇಳಿಲ್ಲ. ಅಂಥಾದ್ದನ್ನು ಈಗ ನಿನಗೆ ಹೇಳುತ್ತೇನೆ.

೩೮. ಅಯ್ಯಾ ನಾರದನಂತೆ ಭಗವದ್ಭಕ್ತನಾದ ರಾಜನೇ! ಯಾವ ತಿಥಿಯು ಯಾವ ದೇವತಾರಾಧನೆಗೆ ಮುಖ್ಯವೆಂಬುದನ್ನೂ ದೇವತೆಗಳ ರಹಸ್ಯಗಳನ್ನೂ ಅವರಿಗೆ ಮೆಚ್ಚಾಗುವ ನಿಯಮಗಳನ್ನೂ ಈಗ ಹೇಳುತ್ತೇನೆ.

೩೯. ತಿಥಿಗಳ ವಿಚಾರ ತಿಳಿಸುವ ಈ ಸಂದರ್ಭದಲ್ಲಿ ಮೊದಲು ಸೃಷ್ಟಿಯ ಕ್ರಮವನ್ನು ಸಂಗ್ರಹವಾಗಿ ಹೇಳುತ್ತೇನೆ.

೪೦. ಈ ಜಗತ್ತು ಕತ್ತಲೆಯ ಮಯವಾಗಿ ಒಬ್ಬರಿಗೂ ಕಣ್ಣಿಗೆ ಏನೂ ಕಾಣಿಸದೆಯೂ, ಯಾರೊಬ್ಬರಿಂದಲೂ, ಊಹಿಸುವುದಕ್ಕೆ ಕೂಡ ಅಸಾಧ್ಯವಾಗಿಯೂ

**ಸಂಭೂತಾತ್ಮೈವ ಆತ್ಮಾಸಾವಂಡಮಧ್ಯಾದ್ವಿನಿಃ ಸೃತಃ ।**
**ಆತ್ಮನೈವಾತ್ಮನೋ ಹ್ಯಂಡಂ ಸೃಷ್ಟ್ವಾ ಸ ವಿಭುರಾದಿತಃ　　॥ ೪೧ ॥**

**ಬ್ರಹ್ಮಾ ನಾರಾಯಣಾಖ್ಯೋಽಸೌ ಸೃಷ್ಟಿಂ ಕರ್ತುಂ ಸಮುದ್ಯತಃ ।**
**ತಾಭ್ಯಾಂ ಸೋಽಂಡಕಪಾಲಾಭ್ಯಾಂ ದಿವಂ ಭೂಮಿಂ ಚ ನಿರ್ಮಮೇ ॥ ೪೨ ॥**

**ದಿಶಶ್ಚೋಪದಿಶಶ್ಚೈವ ದೇವಾದೀನ್ ದಾನವಾಂಸ್ತಥಾ ।**
**ತಿಥಿಂ ಪೂರ್ವಾಮಿಮಾಂ ರಾಜನ್ ಚಕಾರಾಥ ವಿಭುಃ ಸ್ವಯಂ　　॥ ೪೩ ॥**

**ತಿಥೀನಾಂ ಪ್ರವರಾ ಯಸ್ಮಾತ್ ಬ್ರಹ್ಮಣಾ ಸಮುದಾಹೃತಾ ।**
**ಪ್ರತಿಪಾದಿತಾ ಪರೇ ಪೂರ್ವೇ ಪ್ರತಿಪತ್ತೇನ ಪೂಜ್ಯತೇ　　॥ ೪೪ ॥**

---

ಇದ್ದಿತು. ಆಗ ಬ್ರಹ್ಮನು ಬಂದು ತನ್ನ ಬುದ್ಧಿಶಕ್ತಿಯಿಂದ ತನ್ನನ್ನೇ ಮೊದಲು ಸೃಷ್ಟಿಸಿದನು.

೪೧. ಹೀಗೆ ಹುಟ್ಟಿದ ಆತ್ಮವೇ ಬ್ರಹ್ಮಾಂಡಮಧ್ಯದಿಂದ ಹುಟ್ಟಿದ ಆತ್ಮವೆನಿಸಿದನು. ವ್ಯಾಪಕನಾದ ಬ್ರಹ್ಮನು ಮೊದಲಿಂದಲೂ ತನ್ನಿಂದಲೇ ತನ್ನ ಅಂಡವನ್ನು ತಾನೇ ಸೃಷ್ಟಿಮಾಡಿಕೊಂಡು ತಾನೇ ನಾರಾಯಣನೆಂಬ ಹೆಸರುಳ್ಳವನಾಗಿ ಸೃಷ್ಟಿ ಮಾಡಲು ಉದ್ಯುಕ್ತನಾದನು.

೪೨ ಆ ಬ್ರಹ್ಮಾಂಡವನ್ನು ಎರಡು ಹೋಳುಮಾಡಿ ಅವುಗಳಿಂದ ಸ್ವರ್ಗಲೋಕ, ಭೂಲೋಕ ಇವುಗಳನ್ನು ಸೃಷ್ಟಿಸಿದನು.

೪೩. ಆಮೇಲೆ ಮುಖ್ಯ ದಿಕ್ಕುಗಳನ್ನೂ, ಮೂಲೆ ದಿಕ್ಕುಗಳನ್ನೂ, ದೇವತೆಗಳು ಮೊದಲಾದವರನ್ನೂ, ಮತ್ತು ರಾಕ್ಷಸರನ್ನೂ, ಪ್ರತಿಪತ್ತಿಥಿಯನ್ನೂ ಸೃಷ್ಟಿ ಮಾಡಿದನು.

೪೪. ✓ ಈ ಪ್ರತಿಪತ್‌ತಿಥಿಯು ತಿಥಿಗಳಲ್ಲಿ ಶ್ರೇಷ್ಠವಾದುದೆಂದು ಬ್ರಹ್ಮನು ಹೇಳಿರುವುದರಿಂದ ಶುಕ್ಲಪಕ್ಷ, ಕೃಷ್ಣಪಕ್ಷದ ಎರಡು ಪ್ರತಿಪತ್‌ತಿಥಿಗಳೂ ಪೂಜ್ಯವೆಂದು ತಿಳಿಯಬೇಕು.

ಅಸ್ಮಾತ್ಪದಾತ್ತು ತಿಥಯೋ ಯಸ್ಮಾತ್ಪನ್ನಾಃ ಪ್ರಕೀರ್ತಿತಾಃ ।
ಅಸ್ಯಾಂತೇ ಕಥಯಿಷ್ಯಾಮಿ ಉಪವಾಸವಿಧಿಂ ಪರಂ ॥ ೪೫ ॥

ಕಾರ್ತಿಕ್ಯಾಂ ಮಾಘಸಪ್ತಮ್ಯಾಂ ವೈಶಾಖಸ್ಯ ಯುಗಾದಿಷು ।
ನಿಯಮೋಽಪವಾಸಂ ಪ್ರಥಮಂ ಗ್ರಾಹಯೇತ ವಿಧಾನವಿತ್ ॥ ೪೬ ॥

ಯಾಂ ತಿಥಿಂ ನಿಯಮಂ ಕರ್ತುಂ ಭಕ್ತ್ಯಾ ಸಮನುಗಚ್ಛತಿ ।
ತಸ್ಯಾಂ ತಿಥೌ ವಿಧಾನಂ ಯತ್ ತನ್ನಿಬೋಧ ಜನಾಧಿಪ ॥ ೪೭ ॥

ಯದಾ ತು ಪ್ರತಿಪದ್ಯಾಂ ವೈ ಗೃಹ್ಣೀಯಾನ್ನಿಯಮಂ ನೃಪ ।
ಚತುರ್ದಶ್ಯಾಂ ಕೃತಾಹಾರಃ ಸಂಕಲ್ಪಂ ಪರಿಕಲ್ಪಯೇತ್ ॥ ೪೮ ॥

ಅಮಾವಾಸ್ಯಾಂ ನ ಭುಂಜೀತ ತ್ರಿಕಾಲಂ ಸ್ನಾನಮಾಚರೇತ್ ।
ಪವಿತ್ರೋ ಹಿ ಜಪೇನ್ನಿತ್ಯಂ ಗಾಯತ್ರೀಂ ಶಿರಸಾಸಹ ॥ ೪೯ ॥

---

೪೫. ಈ ಪ್ರತಿಪತ್‌ಪದದಿಂದಲೇ ಬೇರೆ ತಿಥಿಗಳೂ ಹುಟ್ಟಿದುವೆಂದು ವ್ಯಕ್ತವಾಗಿದೆ. ಈ ಪ್ರತಿಪತ್‌ತಿಥಿಯಲ್ಲಿ ಆಚರಿಸಿದರೆ ಶ್ರೇಷ್ಠವೆನಿಸಿದ ಉಪವಾಸವಿಧಿಯನ್ನು ನಿನಗೆ ಹೇಳುತ್ತೇನೆ.

೪೬. ವ್ರತವಿಧಿಯನ್ನು ತಿಳಿದಂಥವನು ಕಾರ್ತಿಕ ಶುದ್ಧ ಪೂರ್ಣಿಮಾ, ಮಾಘ ಶುದ್ಧ ಸಪ್ತಮೀ, ವೈಶಾಖ ಶುದ್ಧ ತೃತೀಯಾ ಮತ್ತು ಕೃತಯುಗಾದಿ, ತ್ರೇತಾಯುಗಾದಿ, ದ್ವಾಪರಯುಗಾದಿ, ಮುಂತಾದ ಯುಗಾದಿ ದಿನಗಳು, ಇವುಗಳಲ್ಲಿ ಯಾವುದಾದರೊಂದರಲ್ಲಿ ಮೊದಲು ಉಪವಾಸವ್ರತವನ್ನು ಗ್ರಹಣಮಾಡಬೇಕು.

೪೭. ಓ ರಾಜನೇ! ನಿಯಮಗಳನ್ನು ಬಿಡದೆ ನಡೆಯಿಸುವೆನೆಂಬ ಭಕ್ತಿಯಿಂದ ಯಾವ ತಿಥಿವ್ರತವನ್ನು ಹಿಡಿಯುವನೋ ಆ ತಿಥಿಯಲ್ಲಿ ಆಚರಿಸಬೇಕಾದ ವಿಧಾನವಾವುದೆಂಬುದನ್ನು ಹೇಳುವೆನು ಕೇಳು.

೪೮. ಪ್ರತಿಪತ್ತಿಥಿಯನ್ನು ವ್ರತಕ್ಕಾಗಿ ಹಿಡಿದ ಸಂದರ್ಭದಲ್ಲಿ, ಚತುರ್ದಶೀ ದಿನದ ಆಹಾರವನ್ನು ಸೇವಿಸಿ ಆದಮೇಲೆ ಮುಂದಿನ ಪ್ರತಿಪದ್ವ್ರತವನ್ನು ಹಿಡಿಯುತ್ತೇನೆಂದು ಮನಸ್ಸಿನಲ್ಲಿ ಸಂಕಲ್ಪಮಾಡಿಕೊಳ್ಳಬೇಕು.

೪೯. ಆ ಮಾರನೆಯ ದಿನ ಎಂದರೆ ಅಮಾವಾಸ್ಯೆಯ ದಿನ ಊಟಮಾಡಬಾರದು. ತ್ರಿಕಾಲದಲ್ಲೂ ಸ್ನಾನಮಾಡಿ ನಿರಾಹಾರದಿಂದಿರಬೇಕು. ಮತ್ತು

ಅರ್ಚಯಿತ್ವಾ ಪ್ರಭಾತೇ ತು ಗಂಧಮಾಲ್ಯೈರ್ದ್ವಿಜೋತ್ತಮಾನ್ ।
ಶಕ್ತ್ಯಾ ಕ್ಷೀರಂ ಪ್ರದದ್ಯಾತ್ತು ಬ್ರಹ್ಮಾ ಮೇ ಪ್ರೀಯತಾಂ ಪ್ರಭುಃ ॥ ೫೦ ॥

ತತೋ ಭುಂಜೀತ ಗೋಕ್ಷೀರಮನೇನ ವಿಧಿನಾ ನೃಪ ।
ಏಷ ಏವ ವಿಧಿರ್ದೃಷ್ಟಃ ಸರ್ವಾಸು ತಿಥಿಷು ನೃಪ ॥ ೫೧ ॥

ಸಂವತ್ಸರಗತೇ ಕಾಲೇ ವ್ರತಮೇತತ್ಸಮಾಪ್ಯತೇ ।
ವ್ರತಾಂತೇ ಯತ್ಫಲಂ ತಸ್ಯ ತನ್ನಿಬೋಧ ನರಾಧಿಪ ॥ ೫೨ ॥

ವಿಮುಕ್ತಪಾಪಃ ಶುದ್ಧಾತ್ಮಾ ದಿವ್ಯದೇಹಸ್ಯ ದೇಹಿನಃ ।
ಬ್ರಹ್ಮಾ ದದಾತಿ ಸಂತುಷ್ಟೋ ವಿಮಾನಮತಿತೇಜಸಂ ।
ಅವ್ಯಾಹತಗತಿಂ ದಿವ್ಯಂ ಕಿನ್ನರಾಪ್ಸರಸೈರ್ಯುತಂ ॥ ೫೩ ॥

---

ಪರಿಶುದ್ಧವಾಗಿ (ಮಡಿಯಲ್ಲಿದ್ದು) ಶಿರಸ್ಸಿನಿಂದ ಕೂಡಿದ ಗಾಯತ್ರಿಯನ್ನು ಜಪಿಸುತ್ತಿರಬೇಕು. (ಓಮಾಪಃ ಮೊದಲುಗೊಂಡು ಭೂರ್ಭುವಸ್ಸ್ವರೋಂ ಎಂದು ಮುಗಿಯುವವರೆಗೆ ಇರತಕ್ಕದ್ದು ಗಾಯತ್ರೀ ಶಿರಸ್ಸು).

೫೦. ಆ ಮಾರನೆಯ ದಿನ ಎಂದರೆ ಪ್ರತಿಪತ್ತಿನ ದಿನ ಪ್ರಾತಃಕಾಲದಲ್ಲಿ ಬ್ರಾಹ್ಮಣೋತ್ತಮರನ್ನು ಕರೆತಂದು, ಗಂಧಪುಷ್ಪಾದಿಗಳಿಂದ ಪೂಜಿಸಿ, "ನನ್ನ ವಿಷಯದಲ್ಲಿ ಬ್ರಹ್ಮನು ಸುಪ್ರೀತನಾಗಲಿ" ಎಂದು ಹೇಳಿ ಅವರಿಗೆ ಶಕ್ತ್ಯನುಸಾರ ಕ್ಷೀರದಾನಮಾಡಬೇಕು.

೫೧. ಆಮೇಲೆ ಈ ವಿಧಿಯಿಂದಲೇ ತಾನೂ ಹಸುವಿನ ಹಾಲನ್ನು ಕುಡಿಯಬೇಕು. ಈ ವಿಧಿಯನ್ನೇ ಎಲ್ಲಾ ತಿಥಿವ್ರತಗಳಲ್ಲಿಯೂ ಅನುಸರಿಸಬೇಕು.

೫೨. ಅಯ್ಯಾ ರಾಜನೇ! ಒಂದು ಸಂವತ್ಸರದ ಕಳೆದ ಮೇಲೆ ಈ ವ್ರತ ಮುಗಿಯುವುದು. ಈ ವ್ರತಮಾಡಿ ಮುಗಿಸಿದ ಮೇಲೆ ವ್ರತಮಾಡಿದವನಿಗೆ ಫಲವೇನೆಂಬುದನ್ನು ಹೇಳುವೆನು ಕೇಳು.

೫೩. ಈ ವ್ರತಿಯು ಸಮಸ್ತಪಾಪಗಳನ್ನೂ ಹೋಗಲಾಡಿಸಿಕೊಂಡು ಮನಶ್ಶುದ್ಧಿಹೊಂದಿ ದೇವಲೋಕದ ದಿವ್ಯದೇಹವನ್ನು ಪಡೆಯುತ್ತಾನೆ. ಬ್ರಹ್ಮನೂ ಅವನ ವಿಷಯದಲ್ಲಿ ಸಂತುಷ್ಟನಾಗಿ ಅವನಿಗೆ ಅತಿ ಪ್ರಕಾಶವಾದ ವಿಮಾನವನ್ನು ಕೊಡುತ್ತಾನೆ. ಆ ವಿಮಾನವು ಅಪ್ರತಿಹಹಿತವಾದ ಸಂಚಾರವುಳ್ಳದ್ದಾಗಿ ಕಿನ್ನರರು, ಅಪ್ಸರರು ಮೊದಲಾದವರಿಂದ ಸದಾ ಕೂಡಿದ್ದಾಗಿರುವುದು.

ರಮಿತ್ವಾ ಸುಚಿರಂ ತತ್ರ ದೈವತೈಃಸಹ ದೇವವತ್ ।
ಇಹಚಾಗತ್ಯ ವಿಪ್ರತ್ವಂ ದಶಜನ್ಮಾನ್ಯಸೌ ಲಭೇತ್ ॥ ೫೪ ॥

ವೇದವೇದಾಂಗವಿದ್ವಾಂಶ್ಚ ದೀರ್ಘಾಯುಶ್ಚೈವ ಸುಪ್ರಭಃ ।
ಭೋಗೀ ಧನಪತಿರ್ದಾತಾ ಜಾಯತೇಽಸೌ ಕೃತೇ ಯುಗೇ ॥ ೫೫ ॥

ವಿಶ್ವಾಮಿತ್ರಸ್ತು ರಾಜೇಂದ್ರ ಬ್ರಾಹ್ಮಣತ್ವಜಿಗೀಷಯಾ ।
ತಪಶ್ಚಚಾರ ವಿಪುಲಂ ಸಂತಾಪಾಯ ದಿವೌಕಸಾಂ ।
ಬ್ರಾಹ್ಮಣತ್ವಂ ನ ಲೇಭೇಽಸೌ ಲೇಭೇ ವಿಘ್ನಾನನೇಕಶಃ ॥ ೫೬ ॥

ತತಸ್ತು ನಿಯಮಾತ್ತೇಷಾಂ ತಿಥೀನಾಂ ಪ್ರವರಾ ತಿಥಿಃ ।
ಉಪೋಷಿತಾ ಬಹುವಿಧಾ ಜ್ಞಾತ್ವಾ ಬ್ರಹ್ಮಪ್ರಿಯಾಂ ತಿಥಿಂ ॥ ೫೭ ॥

---

೫೪. ಆ ಲೋಕದಲ್ಲಿ ಅವನು ಬಹುಕಾಲ ಆನಂದಪಟ್ಟು, ಅಲ್ಲಿ ದೇವತೆಗಳೊಡನೆ ಕೂಡಿ ದೇವಸದೃಶನಾಗಿಯೇ ಇರುವನು. ಆಮೇಲೆ ಈ ಲೋಕಕ್ಕೆ ಬಂದು ಹತ್ತು ಜನ್ಮಗಳವರೆಗೂ ಬ್ರಾಹ್ಮಣನಾಗಿಯೇ ಹುಟ್ಟುವನು.

೫೫. ಹೀಗೆ ಬ್ರಾಹ್ಮಣನಾಗಿ ಒಳ್ಳೆಯ ತೇಜಸ್ವಿಯೆನಿಸಿ, ವೇದವೇದಾಂಗ ಮೊದಲಾದ ವಿದ್ಯೆಗಳನ್ನು ಕಲಿತು, ದೀರ್ಘಾಯುಷ್ಮಂತನಾಗಿ ಅನೇಕ ಸುಖವನ್ನನು ಭವಿಸಿ, ಹೆಚ್ಚು ಧನಕ್ಕೆ ಒಡೆಯನೂ, ದಾನಶೀಲನೂ, ಆಗಿ ಕೃತಯುಗದಲ್ಲಿ ಹುಟ್ಟುತ್ತಾನೆ.

೫೬. ಎಲೈ ರಾಜೇಂದ್ರನೇ! ಕ್ಷತ್ರಿಯನಾದ ವಿಶ್ವಾಮಿತ್ರನು ಬ್ರಾಹ್ಮಣ್ಯವನ್ನು ಸಾಧಿಸಬೇಕೆಂಬ ಇಚ್ಛೆಯಿಂದ ದೇವತೆಗಳೂ ಕೂಡ ತಲ್ಲಣಿಸುವಂತಹ ಘೋರ ತಪಸ್ಸನ್ನು ಮಾಡಿದನು.

೫೭. ಎಷ್ಟು ತಪಸ್ಸು ಮಾಡಿದರೂ ಬ್ರಾಹ್ಮಣತ್ವ ಲಭಿಸಲಿಲ್ಲ. ತಪಸ್ಸು ಮಾಡುತ್ತಿರುವಾಗ ಇವನಿಗೆ ಅನೇಕ ವಿಘ್ನಗಳೇ ಬಂದುವು. ಅನಂತರ ಆ ವಿಶ್ವಾಮಿತ್ರನು ತಿಥಿಗಳಲ್ಲಿ ಪ್ರತಿಪತ್ತಿಥಿಯು ಬ್ರಹ್ಮನಿಗೆ ಪ್ರಿಯವಾದ ತಿಥಿಯೆಂದು ಬಹು ಪ್ರಕಾರದಿಂದ ತಿಳಿದು ಆ ತಿಥಿಯಲ್ಲಿ ಯಥೋಕ್ತನಿಯಮದಿಂದ ಕೂಡಿ ಉಪವಾಸವನ್ನಾಚರಿಸಿದನು.

ತತೋ ದೇವೋ ದದೌ ಬ್ರಹ್ಮಾ ವಿಶ್ವಾಮಿತ್ರಾಯ ಧೀಮತೇ ।
ಅತ್ರೈವ ತೇನ ದೇಹೇನ ಬ್ರಾಹ್ಮಣತ್ವಂ ಸುದುರ್ಲಭಂ ॥ ೫೮ ॥

ತಿಥೀನಾಂ ಪ್ರವರಾಹ್ಯೇಷಾ ತಿಥೀನಾಮುತ್ತಮಾ ತಿಥಿಃ ।
ಕ್ಷತ್ರಿಯೋ ವೈಶ್ಯಶೂದ್ರೌ ವಾ ಬ್ರಾಹ್ಮಣತ್ವಮವಾಪ್ನುಯುಃ ॥ ೫೯ ॥

ಏವಂ ತಿಥಿರಿಯಂ ರಾಜನ್ ಕಾಮದಾ ಕಂಜಜಪ್ರಿಯಾ ।
ಸರಹಸ್ಯಾ ಮಯಾ ಪ್ರೋಕ್ತಾ ಯಾ ನೋಕ್ತಾ ಯಸ್ಯಕಸ್ಯಚಿತ್ ॥ ೬೦ ॥

ಹೈಹಯೈಸ್ತಾಲಜಂಘೈಶ್ಚ ತುರುಷ್ಕೈರ್ಯವನೈಶ್ಶಕೈಃ ।
ಉಪೋಷಿತಾ ಇಹಾತ್ರೈವ ಬ್ರಾಹ್ಮಣತ್ವಮಭೀಪ್ಸುಭಿಃ ॥ ೬೧ ॥

ಇತ್ಯೇಷಾ ಪರಮಾ ಪುಣ್ಯಾ ಶಿವಾ ಪಾಪಹರಾ ತಥಾ ।
ಪಠಿತೋಪಾಸಿತಾ ರಾಜನ್ ಶ್ರದ್ಧಯಾ ಚ ಶ್ರುತಾ ತಥಾ ॥ ೬೨ ॥

---

೫೮. ಆಮೇಲೆ ಬ್ರಹ್ಮದೇವನು ಬುದ್ಧಿಶಾಲಿಯಾದ ಆ ವಿಶ್ವಾಮಿತ್ರನಿಗೆ ಈ ಲೋಕದಲ್ಲಿ ಇದೇ ದೇಹದಿಂದಿರುವಾಗಲೇ ದುರ್ಲಭವಾದ ಬ್ರಾಹ್ಮಣತ್ವವನ್ನು ಕೊಟ್ಟನು.

೫೯. ಈ ಪ್ರತಿಪತ್ತೆಂಬುದು ತಿಥಿಗಳಲ್ಲೆಲ್ಲಾ ಶ್ರೇಷ್ಠವಾದುದು. ಮತ್ತು ಉತ್ತಮವಾದುದು. ಕ್ಷತ್ರಿಯನಾಗಲಿ, ವೈಶ್ಯನಾಗಲಿ, ಶೂದ್ರನಾಗಲಿ, ಈ ಪತಿಪದ್ವ್ರತದಿಂದ ಬ್ರಾಹ್ಮಣ್ಯವನ್ನು ಪಡೆಯುತ್ತಾನೆ.

೬೦. ಅಯ್ಯಾ ಪ್ರಭುವೇ! ಈ ಪ್ರತಿಪತ್ತಿಥಿಯು ಇಷ್ಟಾರ್ಥಪ್ರದವಾದುದು. ಮತ್ತು ಬ್ರಹ್ಮನಿಗೆ ಪ್ರಿಯವಾದುದು. ರಹಸ್ಯದಿಂದ ಕೂಡಿದ ಈ ತಿಥಿಯ ವಿಷಯವನ್ನು ನಾನು ನಿನಗೆ ಮಾತ್ರ ಹೇಳಿದೇನೆ. ಈವರೆಗೂ ಇನ್ನಾರಿಗೂ ಹೇಳಿಲ್ಲ.

೬೧. ಹೈಹಯರು, ತಾಲಜಂಘರು, ತುರುಷ್ಕರು, ಯವನರು, ಶಕರು ಮುಂತಾದವರು ಬ್ರಾಹ್ಮಣತ್ವವು ತಮಗೆ ದೊರೆಯಲೆಂಬ ಇಚ್ಛೆಯಿಂದ ಪ್ರತಿಪತ್ತಿಥಿಯಲ್ಲಿ ಉಪವಾಸವನ್ನಾಚರಿಸಿದರು.

೬೨. ಹೀಗೆ ಪ್ರತಿಪತ್ತಿಥಿಯು ಕೇವಲ ಪುಣ್ಯಕರವೂ, ಶ್ರೇಷ್ಠವೂ, ಮಂಗಳಕರವೂ, ಪಾಪಹರವೂ ಆದುದು. ಇದರ ವಿಷಯವನ್ನು ಶ್ರದ್ಧೆಯಿಂದ ಓದಿದರೂ,

**ಮಾಹಾತ್ಮ್ಯಂ ಚಾಪಿ ಯೋಽಸ್ಯಸ್ಯಾ ಶೃಣುಯಾನ್ಮಾನವೋ ನೃಪ ।
ಋದ್ಧಿಂ ವೃದ್ಧಿಂ ತಥಾ ಕೀರ್ತಿಂ ಶಿವಂಚಾಪ್ಯ ದಿವಂ ವ್ರಜೇತ್ ॥ ೬೩ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಪ್ರತಿಪತ್ಕಲ್ಪ
ವರ್ಣನಂ ನಾಮ ಷೋಡಶೋಽಧ್ಯಾಯಃ.**



---

ಈ ವ್ರತೋಪಾಸನೆ ಮಾಡಿದರೂ, ಪ್ರೀತಿಯಿಂದ ಇದರ ವೃತ್ತಾಂತವನ್ನು ಕೇಳಿದರೂ ಪುಣ್ಯ ಪ್ರಾಪ್ತಿಯಾಗುತ್ತದೆ.

೬೩. ಅಯ್ಯಾ ರಾಜನೇ! ಈ ಪ್ರತಿಪತ್ತಿಥಿ ಮಹಾತ್ಮೆಯನ್ನು ಕೇಳಿದವನು ಎಲ್ಲಾ ಬಗೆಯ ವೃದ್ಧಿಗಳನ್ನೂ, ಕೀರ್ತಿಯನ್ನೂ, ಶುಭವನ್ನೂ ಹೊಂದಿ ಸ್ವರ್ಗವನ್ನು ಪಡೆಯುವನು.

ಎಂಬಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಪ್ರತಿಪತ್ಕಲ್ಪ
ವರ್ಣನೆಯೆಂಬ ಹದಿನಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಸಪ್ತದಶೋಽಧ್ಯಾಯಃ

॥ ಶತಾನೀಕ ಉವಾಚ ॥

ಬ್ರೂಹಿ ಮೇ ವಿಸ್ತರಾದ್ಬ್ರಹ್ಮನ್ ಪ್ರತಿಪತ್ಕೃತ್ಯಮಾದರಾತ್ ।
ಬ್ರಹ್ಮಪೂಜಾವಿಧಾನಂ ಚ ಪೂಜನೇ ಯಚ್ಚ ವೈ ಫಲಂ ॥ ೧ ॥

॥ ಸುಮಂತುರುವಾಚ ॥

ಶ್ರುಣುಷ್ವೇಕಮನಾ ರಾಜನ್ ಕಥಯಾಮ್ಯೇಷ ಶಾಂತಿದಂ ।
ಪೂರ್ವಮೇಕಾರ್ಣವೇ ಘೋರೇ ನಷ್ಟೇ ಸ್ಥಾವರಜಂಗಮೇ ॥ ೨ ॥

---

## ಹದಿನೇಳನೆಯ ಅಧ್ಯಾಯ

೧. ಶತಾನೀಕರಾಜನು ಕೇಳುತ್ತಾನೆ—"ಎಲೈ ಬ್ರಾಹ್ಮಣಶ್ರೇಷ್ಠನೇ ! ಪಾಡ್ಯದ ದಿನದಲ್ಲಿ ಮಾಡಬೇಕಾದ ಕೃತ್ಯವನ್ನು ಆದರದಿಂದ ವಿಸ್ತರಿಸಿ ನನಗೆ ಹೇಳು. ಅಲ್ಲದೆ ಆದಿನ ಬ್ರಹ್ಮಪೂಜೆ ಮಾಡುವ ವಿಧಾನವನ್ನೂ, ಆದರಿಂದುಂಟಾಗುವ ಫಲವನ್ನೂ ಹೇಳು" ಎಂದು ಕೇಳಿದನು.

೨. ಆಗ ಸಮಂತುಮುನಿವರ್ಯರು ಹೇಳುತ್ತಾರೆ—ಎಲೈ ರಾಜನೇ ! ಒಂದೇ ಮನಸ್ಸಿನಿಂದ ಕೇಳು. ಶಾಂತಿಯನ್ನುಂಟುಮಾಡುವ ಆ ವಿಷಯವನ್ನು ಹೇಳುವೆನು. ಪೂರ್ವದಲ್ಲಿ ಭಯಂಕರವಾದ ಸಮುದ್ರವೊಂದೇ ಪ್ರಪಂಚವನ್ನೆಲ್ಲಾ ತುಂಬಿಕೊಂಡಿತ್ತು. ಮತ್ತು ಸ್ಥಾವರಜಂಗಮಗಳಲ್ಲಿ ಯಾವುದೂ ಕಾಣುತ್ತಿರಲಿಲ್ಲ.

ಸ್ವಯಂಭೂರಭವದ್ದೇವಃ ಸುರಜ್ಯೇಷ್ಠಶ್ಚತುರ್ಮುಖಃ ।
ಸಸರ್ಜ ಲೋಕಾನ್ ದೇವಾಂಶ್ಚ ಭೂತಾನಿ ವಿವಿಧಾನಿ ಚ ॥ ೩ ॥

ಕಾಯೇನ ಮನಸಾ ವಾಚಾ ಜಂಗಮಸ್ಥಾವರಾಣಿ ಚ ।
ಪಿತಾ ಯಸ್ಸರ್ವದೇವಾನಾಂ ಭೂತಾನಾಂ ಚ ಪಿತಾಮಹಃ ॥ ೪ ॥

ತಸ್ಮಾದೇಷ ಸದಾ ಪೂಜ್ಯೋ ಯತೋ ಲೋಕಗುರುಃ ಪರಃ ।
ಸೃಜತ್ಯೇಷ ಜಗತ್ಕೃತ್ಸ್ನಂ ಪಾತಿ ಸಂಹರತೇ ತಥಾ ॥ ೫ ॥

ರುದ್ರೋಽಸ್ಯ ಮನಸೋಜಾತೋ ವಿಷ್ಣುರ್ಜಾತೋಽಸ್ಯ ವಕ್ಷಸಃ ।
ಮುಖೇಭ್ಯಶ್ಚತುರೋ ವೇದಾಃ ವೇದಾಂಗಾನಿ ಚ ಕೃತ್ಸ್ನಶಃ ॥ ೬ ॥

ದೇವಾಪ್ಸರಸಗಂಧರ್ವಾಃ ಸಯಕ್ಷೋರಗರಾಕ್ಷಸಾಃ ।
ಪೂಜಯಂತಿ ಸದಾ ವೀರ ವಿರಿಂಚಿಂ ಸುರನಾಯಕಂ ॥ ೭ ॥

---

೩. ಸ್ವಾಮಿಯಾದ ಚತುರ್ಮುಖಬ್ರಹ್ಮದೇವನೇ ದೇವತೆಗಳಿಗೆಲ್ಲಾ ಹಿರಿಯನಾಗಿದ್ದನು. ಆತನು ಲೋಕಗಳನ್ನೂ, ದೇವತೆಗಳನ್ನೂ ಬಗೆಬಗೆಯ ಭೂತಗಳನ್ನೂ ಸೃಷ್ಟಿಸಿದನು.

೪. ಎಲ್ಲಾ ದೇವತೆಗಳಿಗೆ ಪಿತೃವೂ, ಸಮಸ್ತಪ್ರಾಣಿಗಳಿಗೆ ಪಿತಾಮಹನೂ ಆದ ಆ ಬ್ರಹ್ಮನು ಮನೋವಾಕ್ಕಾಯಗಳಿಂದಲೂ ಸ್ಥಾವರಜಂಗಮಗಳನ್ನು ಸೃಜಿಸಿದನು.

೫. ಇವನು ಉತ್ಕೃಷ್ಟನಾದ ಲೋಕಗುರುವಾಗಿರುವುದರಿಂದ ಯಾವಾಗಲೂ ಪೂಜಾರ್ಹನು. ಅಲ್ಲದೆ ಲೋಕಗಳನ್ನೆಲ್ಲಾ ಸೃಷ್ಟಿಮಾಡುತ್ತಾನೆ; ರಕ್ಷಿಸುತ್ತಾನೆ; ಮತ್ತು ಸಂಹರಿಸುತ್ತಾನೆ

೬. ರುದ್ರನು ಇವನ ಮನಸ್ಸಿನಿಂದ ಜನಿಸಿದನು. ವಿಷ್ಣುವು ಇವನ ವಕ್ಷಸ್ಥಳದಿಂದ ಜನಿಸಿದನು. ಮುಖಗಳಿಂದ ನಾಲ್ಕು ವೇದಗಳೂ, ಮತ್ತು ವೇದಾಂಗಗಳೂ ಸಮಗ್ರವಾಗಿ ಹುಟ್ಟಿದುವು.

೭. ದೇವತೆಗಳು, ಅಪ್ಸರಸ್ತ್ರೀಯರು, ಗಂಧರ್ವರು, ಯಕ್ಷರು, ಉರಗರು, ರಾಕ್ಷಸರು, ಇವರಿಂದ ಕೂಡಿ; ಸುರನಾಯಕನಾದ ಬ್ರಹ್ಮನನ್ನು ಯಾವಾಗಲೂ ಪೂಜಿಸುವರು.

**ಸರ್ವೋ ಬ್ರಹ್ಮಮಯೋ ಲೋಕಃ ಸರ್ವಂ ಬ್ರಹ್ಮಣಿ ಸಂಸ್ಥಿತಂ ।**
**ತಸ್ಮಾತ್ಸಮರ್ಚಯೇದ್ಬ್ರಹ್ಮ ಇಚ್ಛೇಚ್ಛ್ರೇಯ ಆತ್ಮನಃ ॥ ೮ ॥**

**ಯೋ ನಪೂಜಯತೇ ಭಕ್ತ್ಯಾ ಸುರಜ್ಯೇಷ್ಠಂ ಸುರೇಶ್ವರಂ ।**
**ನ ಸ ನಾಕಸ್ಯ ರಾಜ್ಯಸ್ಯ ನ ಚ ಮೋಕ್ಷಸ್ಯ ಭಾಜನಂ ॥ ೯ ॥**

**ಯಸ್ತು ಪೂಜಯತೇ ಭಕ್ತ್ಯಾ ವಿರಿಂಚಿಂ ಭುವನೇಶ್ವರಂ ।**
**ಸ ನಾಕರಾಜ್ಯಮೋಕ್ಷೇಷು ಕ್ಷಿಪ್ರಂ ಭವತಿ ಭಾಜನಂ ॥ ೧೦ ॥**

**ತಸ್ಮಾತ್ಸೌಮ್ಯಮನಾ ಭೂತ್ವಾ ಯಾವಜ್ಜೀವಂ ಪ್ರತಿಜ್ಞಯಾ ।**
**ಅರ್ಚಯಿತ್ವಾ ಸದಾ ದೇವಮಾಪನ್ನೋಽಪಿ ನರೋ ನೃಪ ॥ ೧೧ ॥**

**ವರಂ ದೇಹಪರಿತ್ಯಾಗೋ ವರಂ ನರಕಸಂಭವಃ ।**
**ನತ್ವೇವಾಪೂಜ್ಯ ಭುಂಜಂತಿ ದೇವಂ ವೈ ಪದ್ಮಸಂಭವಂ ॥ ೧೨ ॥**

---

೮. ಲೋಕವೆಲ್ಲವೂ ಬ್ರಹ್ಮಮಯವು; ಎಲ್ಲವೂ ಬ್ರಹ್ಮನಲ್ಲಿರುವುದು. ಆದುದರಿಂದ ಅಯ್ಯಾ ಜ್ಞಾನಿಯೇ! ಶ್ರೇಯಸ್ಸು ಬೇಕೆಂದು ಬಯಸುವವನು ಬ್ರಹ್ಮನನ್ನು ಪೂಜಿಸಬೇಕು.

೯. ಯಾವನು ದೇವತೆಗಳಿಗೆ ಹಿರಿಯನೂ ಒಡೆಯನೂ ಆದ ಬ್ರಹ್ಮನನ್ನು ಭಕ್ತಿಯಿಂದ ಪೂಜಿಸುವುದಿಲ್ಲವೋ ಅವನಿಗೆ ಸ್ವರ್ಗ ಮೋಕ್ಷಗಳು ಲಭಿಸುವುದಿಲ್ಲ.

೧೦. ಯಾವನು ಲೋಕದೊಡೆಯನಾದ ಬ್ರಹ್ಮನನ್ನು ಭಕ್ತಿಯಿಂದ ಪೂಜಿಸುವನೋ, ಅವನು ಸ್ವರ್ಗ ಮೋಕ್ಷಗಳನ್ನು ಶೀಘ್ರವಾಗಿ ಹೊಂದುತ್ತಾನೆ.

೧೧.✓ ಆದುದರಿಂದ ಎಲೈ ರಾಜನೇ! ಮನುಷ್ಯನು ತಾನು ಕಷ್ಟಕ್ಕೆ ಗುರಿಯಾಗಿದ್ದರೂ, ಶಾಂತಮನಸ್ಕನಾಗಿ ಪ್ರತಿಜ್ಞೆಮಾಡಿಕೊಂಡು ಜೀವಮಾನದಲ್ಲೆಲ್ಲಾ ಬ್ರಹ್ಮನನ್ನು ಪೂಜಿಸಬೇಕು.

೧೨.✓ ಪ್ರಾಣ ಹೋಗುವುದಾದರೂ, ನರಕ ಸಂಭವಿಸುವುದಾದರೂ, ತಿಳಿದವರು ಬ್ರಹ್ಮದೇವನನ್ನು ಪೂಜಿಸದೆ ಯಾವಾಗಲೂ ಊಟವನ್ನು ಮಾಡುವುದಿಲ್ಲ.

ಸದಾ ಪೂಜಯತೇ ಯಸ್ತು ವೀರ ಭಕ್ತ್ಯಾ ಪಿತಾಮಹಂ ।
ಮನುಷ್ಯಚರ್ಮಣಾ ನದ್ಧಃ ಸ ವೇಧಾ ನಾತ್ರ ಸಂಶಯಃ ॥ ೧೩ ॥

ನಹಿ ವೇಧೋಽರ್ಚನಾತ್ಕಿಂಚಿತ್ ಪುಣ್ಯಮಭ್ಯಧಿಕಂ ಭವೇತ್ ।
ಇತಿ ವಿಜ್ಞಾಯ ಯತ್ನೇನ ಪೂಜನೀಯಸ್ಸದಾ ವಿಧಿಃ ॥ ೧೪ ॥

ಯೋ ಬ್ರಹ್ಮಾಣಂ ದ್ವೇಷ್ಟಿ ಮೋಹಾತ್ ಸರ್ವದೇವನಮಸ್ಕೃತಂ ।
ನರೋ ನರಕಗಾಮೀಸ್ಯಾತ್ ತಸ್ಯ ಸಂಭಾಷಣಾದಪಿ ॥ ೧೫ ॥

ಬ್ರಹ್ಮಣೋಽರ್ಚಾಂ ಪ್ರತಿಷ್ಠಾಪ್ಯ ಸರ್ವಯತ್ನೈರ್ವಿಧಾನತಃ ।
ಯತ್ಪುಣ್ಯಂ ಫಲಮಾಪ್ನೋತಿ ತದೇಕಾಗ್ರಮನಾ ಶೃಣು ॥ ೧೬ ॥

ಸರ್ವಯಜ್ಞತಪೋದಾನತೀರ್ಥವೇದೇಷು ಯತ್ಫಲಂ ।
ತತ್ಫಲಂ ಕೋಟಿಗುಣಿತಂ ಲಭೇದ್ವೇಧಃಪ್ರತಿಷ್ಠಯಾ ॥ ೧೭ ॥

---

೧೩. ಯಾವನು ದೃಢಭಕ್ತಿಯಿಂದ ಬ್ರಹ್ಮನನ್ನು ಯಾವಾಗಲೂ ಪೂಜಿಸುತ್ತಾನೆಯೋ ಅವನು ಮನುಷ್ಯಚರ್ಮಾವೃತನಾದ ಬ್ರಹ್ಮದೇವನೇ ಎಂಬುದರಲ್ಲಿ ಸಂಶಯವಿಲ್ಲ.

೧೪. ಬ್ರಹ್ಮದೇವನನ್ನು ಪೂಜಿಸುವುದರಿಂದುಂಟಾಗುವ ಪುಣ್ಯಕ್ಕಿಂತ ಹೆಚ್ಚಿನ ಪುಣ್ಯವು ಮತ್ತಾವ ಪೂಜೆಯಿಂದಲೂ ಉಂಟಾಗುವುದಿಲ್ಲ. ಇದನ್ನು ತಿಳಿದು ಪ್ರಯತ್ನಪೂರ್ವಕವಾಗಿ ಸದಾ ಬ್ರಹ್ಮನನ್ನು ಪೂಜಿಸಬೇಕು.

೧೫. ಎಲ್ಲಾ ದೇವತೆಗಳಿಗೂ ಪೂಜ್ಯನಾದ ಬ್ರಹ್ಮನನ್ನು ಯಾವನು ಅಜ್ಞಾನದಿಂದ ದ್ವೇಷಿಸುತ್ತಾನೋ ಅಂಥವನ ಸಂಗಡ ಮಾತನ್ನಾಡಿದವನೂ ಕೂಡ ನರಕಕ್ಕೆ ಹೋಗುವನು.

೧೬. ಸರ್ವಪ್ರಯತ್ನಗಳಿಂದಲೂ ವಿಧಿಪ್ರಕಾರ ಬ್ರಹ್ಮಪ್ರತಿಷ್ಠೆಯನ್ನು ಮಾಡಿದವನು ಹೊಂದುವ ಪುಣ್ಯವನ್ನು ಏಕಾಗ್ರಮನಸ್ಸುಳ್ಳವನಾಗಿ ಕೇಳು.

೧೭. ಸರ್ವಯಜ್ಞಗಳು, ಎಲ್ಲಾ ಬಗೆಯ ತಪಸ್ಸುಗಳು, ಎಲ್ಲಾ ತೀರ್ಥಗಳಲ್ಲೂ ಸ್ನಾನ, ಎಲ್ಲಾ ವೇದಗಳ ಪಠನ ಇವುಗಳಿಂದ ಯಾವ ಫಲವು ಲಭಿಸುವುದೋ ಅದಕ್ಕೆ ಕೋಟಿಪಾಲು ಹೆಚ್ಚಿನ ಪುಣ್ಯವು ಬ್ರಹ್ಮದೇವರ ಪ್ರತಿಷ್ಠೆಯಿಂದ ಲಭಿಸುವುದು.

**ಕಂಜಜಂ ಸ್ಥಾಪಯೇದ್ಯಸ್ತು ಕೃತ್ವಾ ಶಾಲಾಂ ಮನೋರಮಾಂ ।**
**ಸರ್ವಾಗಮೋದಿತಂ ಪುಣ್ಯಂ ಕೋಟಿಕೋಟಿಗುಣಂ ಲಭೇತ್ ॥ ೧೮ ॥**

**ಮಾತೃಜಾನ್ ಪಿತೃಜಾಂಶ್ಚೈವ ಯಾಂಚೈವೋದ್ವಹತೇ ಸ್ತ್ರಿಯಂ ।**
**ಕುಲೈಕವಿಂಶಮುತ್ತಾರ್ಯ ಬ್ರಹ್ಮಲೋಕೇ ಮಹೀಯತೇ ॥ ೧೯ ॥**

**ಭುಕ್ತ್ವಾ ತು ವಿಪುಲಾನ್ ಭೋಗಾನ್ ಪ್ರಲಯೇ ಸಮುಪಸ್ಥಿತೇ ।**
**ಜ್ಞಾನಯೋಗಂ ಸಮಾಸಾದ್ಯ ಸ ತತ್ರೈವ ವಿಮುಚ್ಯತೇ ॥ ೨೦ ॥**

**ಅಥವಾ ರಾಜ್ಯಮಾಕಾಂಕ್ಷೇತ್ ಜಾಯತೇ ಸಂಭವಾಂತರೇ ।**
**ಸಪ್ತದ್ವೀಪ ಸಮುದ್ರಾಯಾಃ ಕ್ಷಿತೇರಧಿಪತಿರ್ಭವೇತ್ ॥ ೨೧ ॥**

---

೧೮. ಯಾವನು ಮನೋಹರವಾದ ಮಂದಿರವನ್ನು ನಿರ್ಮಿಸಿ ಅದರಲ್ಲಿ ಬ್ರಹ್ಮ ಮೂರ್ತಿಯನ್ನು ಪ್ರತಿಷ್ಠೆಮಾಡುವನೋ ಅವನು ಶಾಸ್ತ್ರಗಳಲ್ಲಿ ಹೇಳಿರುವ ಪುಣ್ಯದ ಕೋಟಿಪಾಲಿನಷ್ಟು ಹೆಚ್ಚು ಪುಣ್ಯವನ್ನು ಹೊಂದುತ್ತಾನೆ.

೧೯. ಈರೀತಿಯಾಗಿ ಬ್ರಹ್ಮಪ್ರತಿಷ್ಠೆಯನ್ನು ಮಾಡಿ ಪೂಜೆಮಾಡೋಣದ ರಿಂದ, ಪೂಜಿಸುವವನು ತನ್ನ ತಾಯಿಯ ವಂಶದ ಹತ್ತುಮಂದಿಯನ್ನೂ, ತಂದೆಯ ವಂಶದ ಹತ್ತುಮಂದಿಯನ್ನೂ, ತಾನು ಮದುವೆಮಾಡಿಕೊಂಡ ಸ್ತ್ರೀಯನ್ನೂ, ಹೀಗೆ ಇಪ್ಪತ್ತೊಂದು ಜನರನ್ನು ವಿಪತ್ತಿನಿಂದ ದಾಟಿಸಿ, ತಾನೂ ಬ್ರಹ್ಮಲೋಕದಲ್ಲಿ ಪೂಜ್ಯ ನಾಗಿರುತ್ತಾನೆ.

೨೦. ಹೀಗೆ ಅಲ್ಲಿಗೆ ಹೋದವನು ಸಮೃದ್ಧಿಯಾಗಿ ಸುಖಗಳನ್ನು ಅನುಭವಿಸಿ ಪ್ರಳಯಕಾಲ ಸಂಭವಿಸಿದಾಗ ಜ್ಞಾನಯೋಗವನ್ನು ಹೊಂದಿ ಆ ಜನ್ಮದಲ್ಲಿಯೇ ಮುಕ್ತನಾಗುತ್ತಾನೆ.

೨೧. ಅವನು ರಾಜ್ಯವನ್ನು ಅಪೇಕ್ಷಿಸುವುದಾದರೆ ಇನ್ನೊಂದು ಜನ್ಮದಲ್ಲಿ ಹುಟ್ಟಿದಾಗ ರಾಜನಾಗುತ್ತಾನೆ. ಹಾಗೆಂದರೆ ಸಪ್ತದ್ವೀಪಗಳಿಂದ ಕೂಡಿದ ಭೂಮಂಡಲಕ್ಕೆಲ್ಲಾ ಒಡೆಯನಾದ ಮಹಾಪ್ರಭುವೇ ಆಗುತ್ತಾನೆ.

ತ್ರಿಸಂಧ್ಯಂ ಯೋ ಜಪೇದ್ಬ್ರಹ್ಮ ಕೃತ್ವಾಷ್ಟದಲಪಂಕಜಂ ।
ಪೌರ್ಣಮಾಸ್ಯಾಂ ಪ್ರತಿಪದಿ ತಸ್ಯ ಪುಣ್ಯಫಲಂ ಶೃಣು ॥ ೨೨ ॥

ಅನೇನೈವ ಸದೇಹೇನ ಬ್ರಹ್ಮಾ ಸಂತಿಷ್ಠತೇ ಕ್ಷಿತೌ ।
ಪಾಪಹಾ ಸರ್ವಮರ್ತ್ಯಾನಾಂ ದರ್ಶನಾತ್ಸ್ಪರ್ಶನಾದಪಿ ॥ ೨೩ ॥

ಉದ್ಧೃತ್ಯ ದಿವಿ ಸಂಸ್ಥಾಪ್ಯ ಕುಲಾನಾಮೇಕವಿಂಶತಿಂ ।
ತೈಃ ಕುಲೈಃ ಸಹಿತೋ ನಿತ್ಯಂ ಮೋದತೇ ಗೋಗತೋ ನೃಪ ॥ ೨೪ ॥

ಅಪ್ಯೇಕವಾರಂ ಯೋ ಭಕ್ತ್ಯಾ ಪೂಜಯೇತ್ಪದ್ಮಸಂಭವಂ ।
ಪದ್ಮಸ್ಥಂ ಮೂರ್ತಿಮಂತಂ ವಾ ಬ್ರಹ್ಮಲೋಕಂ ಸ ಗಚ್ಛತಿ ॥ ೨೫ ॥

---

೨೨. ಪೂರ್ಣಿಮಾ ಪ್ರತಿಪತ್ತಿನಲ್ಲಿ ಅಷ್ಟದಳ (ಎಂಟು ಎಸಳಿನ) ಪದ್ಮವನ್ನು ರಚಿಸಿ ಅಲ್ಲಿ ಬ್ರಹ್ಮನನ್ನು ಆವಾಹನಮಾಡಿ, ತ್ರಿಸಂಧ್ಯೆಗಳಲ್ಲಿಯೂ ಯಾವನು ಬ್ರಹ್ಮ ಮಂತ್ರವನ್ನು ಜಪಮಾಡುವನೋ, ಆವನಿಗೆ ಲಭಿಸುವ ಪುಣ್ಯಫಲವನ್ನು ಹೇಳು ತ್ತೇನೆ ಕೇಳು.

೨೩. ಅವನು ಇದೇ ದೇಹವನ್ನು ಧರಿಸಿದ್ದಾಗ್ಯೂ ಬ್ರಹ್ಮರೂಪದಿಂದ ಭೂಮಿ ಯಲ್ಲಿರುತ್ತಾನೆ. ಆತನನ್ನು ಕೈಯಿಂದ ಮುಟ್ಟಿದ, ಮತ್ತು ಕಣ್ಣಿನಿಂದ ನೋಡಿದಂಥಾ ಸಮಸ್ತ ಮಾನವರ ಪಾಪವೂ ಪರಿಹಾರವಾಗುತ್ತದೆ.

೨೪. ಆತನು ತನ್ನ ತಾಯಿಕಡೆಯ ಹತ್ತು ತಲೆಮಾರಿನವರು, ತಂದೆಯ ಕಡೆಯ ಹತ್ತು ತಲೆಮಾರಿನವರು, ತನ್ನ ಸ್ತ್ರೀ, ಹೀಗೆ ಇಪ್ಪತ್ತೊಂದು ಮಂದಿಯನ್ನು ಉದ್ಧಾರಮಾಡಿ ಸ್ವರ್ಗಲೋಕದಲ್ಲಿ ನಿಲ್ಲಿಸಿ, ಅವರು ಲೋಕದಲ್ಲಿ ಸಂತೋಷಪಡುವಾ ಗಲೇ ತಾನೂ ಆ ಲೋಕದಲ್ಲಿ ಇದ್ದುಕೊಂಡೇ ಸಂತೋಷವನ್ನು ಅನುಭವಿಸುತ್ತಾನೆ.

೨೫. ಹೀಗೆ ಅಷ್ಟದಳ ಪದ್ಮದಲ್ಲಿ ಆವಾಹಿಸಿದ ಬ್ರಹ್ಮನನ್ನಾಗಲಿ, ಅಥವಾ ಪ್ರತಿಷ್ಠಿಸಿದ ಬ್ರಹ್ಮಮೂರ್ತಿಯನ್ನಾಗಲಿ, ಒಂದುಸಾರಿ ಭಕ್ತಿಯಿಂದ ಪೂಜಿಸಿದ ಮಾತ್ರಕ್ಕೆ ಬ್ರಹ್ಮಲೋಕಕ್ಕೆ ಹೋಗುತ್ತಾನೆ.

**ಪುಣ್ಯಕ್ಷಯಾತ್ ಕ್ಷಿತಿಂ ಪ್ರಾಪ್ಯ ಭವೇತ್ ಕ್ಷಿತಿಪತಿರ್ಮಹಾನ್।**
**ವೇದವೇದಾಂಗ ತತ್ವಜ್ಞೋ ಬ್ರಾಹ್ಮಣಶ್ಚಾಪಿ ಜಾಯತೇ ॥ ೨೬ ॥**

**ನ ತತ್ತಪೋಭಿರತ್ಯುಗ್ರೈಃ ನ ಚ ಸರ್ವೈರ್ಮಹಾಮಖೈಃ ।**
**ಗಚ್ಛೇದ್ಬ್ರಹ್ಮಪುರಂ ದಿವ್ಯಂ ಮುಕ್ತ್ವಾ ಭಕ್ತಿಪರಾತ್ಮಕಾ ॥ ೨೭ ॥**

**ಮೃದ್ದಾರ್ವೈರಿಷ್ಟಕೈಶ್ಶೈಲೈರ್ವಾ ಯಃ ಕುರ್ಯಾದ್ಬ್ರಹ್ಮಣೋ ಗೃಹಂ ।**
**ತ್ರಿಸ್ಸಪ್ತಕುಲ ಸಂಯುಕ್ತೋ ಬ್ರಹ್ಮಲೋಕೇ ಮಹೀಯತೇ ॥ ೨೮ ॥**

**ಮೃನ್ಮಯಾತ್ಕೋಟಿಗುಣಿತಂ ಫಲಂ ದಾರ್ವಿಷ್ಟಕಾಮಯೇ ।**
**ಇಷ್ಟಕಾದ್ದ್ವಿಗುಣಂ ಪುಣ್ಯಂ ಕೃತೇ ಶೈಲಮಯೇ ಗೃಹೇ ॥ ೨೯ ॥**

---

೨೬. ತಾನು ಸಂಪಾದಿಸಿದ ಪುಣ್ಯವು ಮುಗಿಯುವವರೆಗೂ ಅಲ್ಲಿದ್ದು ಅದು ಮುಗಿಯುತ್ತಲೆ ಭೂಲೋಕಕ್ಕೆ ಬಂದು ದೊಡ್ಡ ಮಹಾರಾಜನಾಗುವನು. ಇಲ್ಲದಿದ್ದರೆ ವೇದವೇದಾಂಗ ತತ್ವಗಳನ್ನು ತಿಳಿದ ಬ್ರಾಹ್ಮಣನಾಗುವನು.

೨೭. ಭಕ್ತಿಪರವಾದ ಮನಸ್ಸುಳ್ಳವರು ಹೊರತು ಸಾಮಾನ್ಯರು ಘೋರವಾದ ಮಹಾ ತಪಸ್ಸುಮಾಡಿದರೂ, ದೊಡ್ಡ ದೊಡ್ಡ ಯಜ್ಞವನ್ನು ಮಾಡಿದರೂ, ಶ್ರೇಷ್ಠವಾದ ಬ್ರಹ್ಮಲೋಕಕ್ಕೆ ಹೋಗಲಾರರು

೨೮ ಮಣ್ಣಿನಿಂದಾಗಲಿ, ಮರದಿಂದಾಗಲಿ, ಇಟ್ಟಿಗೆಯಿಂದಾಗಲಿ, ಕಲ್ಲಿನಿಂದಾಗಲಿ ಯಾವನು ಬ್ರಹ್ಮದೇವಾಲಯವನ್ನು ನಿರ್ಮಿಸುವನೋ, ಅವನು ತನ್ನ ಮಾತಾಪಿತೃ ಉಭಯವಂಶದ ಇಪ್ಪತ್ತೊಂದು ತಲೆಮಾರಿನವರೊಡನೆ ಬ್ರಹ್ಮಲೋಕದಲ್ಲಿ ಪೂಜಿತನಾಗುವನು.

೨೯. ಮಣ್ಣಿನಲ್ಲಿ ದೇವಾಲಯವನ್ನು ಕಟ್ಟಿಸಿದ ಫಲಕ್ಕಿಂತ ಮರ ಅಥವಾ ಇಟ್ಟಿಗೆಯಿಂದ ದೇವಾಲಯವನ್ನು ಕಟ್ಟಿಸಿದರೆ ಕೋಟಿಪಾಲಿನಷ್ಟು ಹೆಚ್ಚಿನ ಪುಣ್ಯ ಲಭಿಸುವುದು. ಇಟ್ಟಿಗೆಯಿಂದ ಕಟ್ಟಿಸುವುದಕ್ಕಿಂತ ಕಲ್ಲಿನಲ್ಲಿ ಕಟ್ಟಿಸಿದರೆ ಎರಡರಷ್ಟು ಪುಣ್ಯ ಬರುವುದು.

ಕ್ರೀಡಮಾನೋಽಪಿ ಯಃ ಕುರ್ಯಾತ್ ಶಾಲಾಂ ವೈ ಬ್ರಹ್ಮಣೋ ನೃಪ ।
ಬ್ರಹ್ಮಲೋಕೇ ಸ ಲಭತೇ ವಿಮಾನಂ ಸರ್ವಕಾಮಿಕಂ ॥ ೩೦ ॥

ಪುಷ್ಪಮಾಲಾಪರಿಕ್ಷಿಪ್ತಂ ಕಿಂಕಿಣೀಜಾಲಭೂಷಿತಂ ।
ದೋಲಾವಿಕ್ಷೇಪ ಸಂಪನ್ನಂ ಘಂಟಾಚಾಮರಭೂಷಿತಂ ॥ ೩೧ ॥

ಮುಕ್ತಾದಾಮವಿತಾನೇನ ಶೋಭಿತಂ ಸೂರ್ಯಸುಪ್ರಭಂ ।
ಅಪ್ಸರೋಗಣ ಸಂಕೀರ್ಣಂ ಸರ್ವಕಾಮಸುಖಪ್ರದಂ ॥ ೩೨ ॥

ತತ್ರೋಷಿತ್ವಾ ಮಹಾಭೋಗೀ ಕ್ರೀಡಮಾನಃ ಸದಾ ಸುರೈಃ ।
ಪುನರಾಗತ್ಯ ಲೋಕೇಽಸ್ಮಿನ್ ರಾಜಾ ಭವತಿ ಧಾರ್ಮಿಕಃ ॥ ೩೩ ॥

ಪಶ್ಯನ್ ಪರಿಹರನ್ ಜಂತೂನ್ ಮೃದುಪೂರ್ವಂ ಮಹೀಪತೇ ।
ಶನೈಃ ಸಂಮಾರ್ಜನಂ ಕುರ್ವನ್ ಚಾಂದ್ರಾಯಣಫಲಂ ವ್ರಜೇತ್ ॥ ೩೪ ॥

---

೩೦. ಅಯ್ಯಾ ರಾಜನೇ! ಯಾವನು ಉದ್ದೇಶವಿಲ್ಲದೆ ಕ್ರೀಡಾರ್ಥವಾಗಿ ಯಾವರೂ ಬ್ರಹ್ಮದೇವಾಲಯವನ್ನು ಕಟ್ಟಿಸುವನೋ ಅವನು ಬ್ರಹ್ಮಲೋಕದಲ್ಲಿ ಸಕಲ ಇಷ್ಟಾರ್ಥಪ್ರದವಾದ ವಿಮಾನವನ್ನು ಪಡೆಯುವನು.

೩೧. ಆ ವಿಮಾನವು ಹೂವಿನ ಮಾಲೆಗಳಿಂದಲೂ, ಕಿರುಗೆಜ್ಜೆಗಳ ಸಮೂಹದಿಂದಲೂ, ಅಲಂಕೃತವಾದ ತೊಟ್ಟಿಲಿನಂತೆ ಉಯ್ಯಾಲೆಯುಳ್ಳದ್ದೂ, ಚಾಮರ ಗಂಟೆ ಇವುಗಳಿಂದ ಶೃಂಗರಿಸಲ್ಪಟ್ಟದ್ದೂ ಆಗಿರುವುದು.

೩೨. ಆ ವಿಮಾನವು ಮುತ್ತಿನ ಸರಗಳನ್ನು ಇಳಿಯಬಿಟ್ಟ ಮೇಲ್ಕಟ್ಟುಳ್ಳದ್ದೂ, ಸೂರ್ಯನಂತೆ ಮಹಾಪ್ರಕಾಶವುಳ್ಳದ್ದೂ, ಅಪ್ಸರೆಯರ ಸಮೂಹದಿಂದ ಕೂಡಿದುದೂ, ಸಮಸ್ತ ವಿಷಯಸುಖಗಳಿಗೂ ಆಸ್ಪದವಾದುದೂ ಆಗಿರುತ್ತದೆ.

೩೩. ಆ ವಿಮಾನದಲ್ಲಿ ಮಹಾಸುಖಿಯಾಗಿ ಸರ್ವದಾ ದೇವತೆಗಳೊಡನೆ ಕ್ರೀಡಿಸುತ್ತಾ ವಾಸಿಸುತ್ತಿದ್ದು ಪುಣ್ಯ ಮುಗಿದ ಮೇಲೆ ಮತ್ತೆ ಭೂಲೋಕದಲ್ಲಿ ಜನಿಸಿ ಧರ್ಮಿಷ್ಠನಾದ ರಾಜನಾಗುತ್ತಾನೆ.

೩೪. ಅಯ್ಯಾ ರಾಜೇಂದ್ರನೇ! ಈ ಧರ್ಮಾಸಕ್ತಿಯುಳ್ಳ ಮಾನವನು, ಬ್ರಹ್ಮದೇವಾಲಯದಲ್ಲಿ ಇರಬಹುದಾದ ಇರುವೆ ಮುಂತಾದ ಸಣ್ಣ ಪ್ರಾಣಿಗಳನ್ನು

ವಸ್ತ್ರಪೂತೇನ ತೋಯೇನ ಯಃ ಕುರ್ಯಾದುಪಲೇಪನಂ ।
ಪಶ್ಯನ್‌ಪರಿಹರನ್ ಜಂತೂಂಶ್ಚಾಂದ್ರಾಯಣಫಲಂ ಲಭೇತ್ ॥ ೩೫ ॥

ನೈರಂತರ್ಯೇಣ ಯಃ ಕುರ್ಯಾತ್ ಪಕ್ಷಂ ಸಮ್ಮಾರ್ಜನಾರ್ಚನಂ ।
ಯುಗಕೋಟಿಶತಂ ಸಾಗ್ರಂ ಬ್ರಹ್ಮಲೋಕೇ ಮಹೀಯತೇ ॥ ೩೬ ॥

ತಸ್ಯಾಂತೇ ಸ ಚತುರ್ವೇದಃ ಸುರೂಪಃ ಪ್ರಿಯದರ್ಶನಃ ।
ಆಢ್ಯಃ ಸರ್ವಗುಣೋಪೇತಃ ರಾಜಾ ಭವತಿಧಾರ್ಮಿಕಃ ॥ ೩೭ ॥

ಕಪಟೇನಾಪಿ ಯಃ ಕುರ್ಯಾದ್ಬ್ರಹ್ಮಶಾಲಾಂ ಸುಮಾನದ ।
ಸಮ್ಮಾರ್ಜನಾದಿ ವೈ ಕರ್ಮ ಸೋಽಪಿ ಪ್ರಾಪ್ನೋತಿ ತತ್ಫಲಂ ॥ ೩೮ ॥

---

ನೋಡಿ ಅವಕ್ಕೆ ಸೋಕಿ ತೊಂದರೆಯಾಗದಂತೆ ಆ ಪ್ರಾಣಿಗಳನ್ನು ಬಿಟ್ಟು ಮೃದುವಾಗಿ ಗುಡಿಸಿದರೆ ಚಂದ್ರಾಯಣ ವ್ರತ ಮಾಡಿದಷ್ಟು ಪುಣ್ಯವನ್ನು ಪಡೆಯುತ್ತಾನೆ.

೩೫. ಬಟ್ಟೆಯಿಂದ ಶೋಧಿಸಿದ ನೀರಿನಿಂದ ದೇವಾಲಯದ ನೆಲವನ್ನು ಸಾರಿಸುವಾಗ, ಅಲ್ಲಿರಬಹುದಾದ ಇರುವೆ ಮುಂತಾದ ಜಂತುಗಳನ್ನು ನೋಡಿಕೊಂಡು, ಅವುಗಳನ್ನು ಬಿಟ್ಟು ಸಾರಿಸುವವನಿಗೆ, ಚಂದ್ರಾಯಣ ವ್ರತ ಮಾಡುವುದರಿಂದ ಬರುವಷ್ಟು ಪುಣ್ಯವು ಬರುತ್ತದೆ.

೩೬ ಒಂದುದಿನವೂ ತಪ್ಪದೆ ಒಂದುಪಕ್ಷ (ಹದಿನೈದು ದಿವಸ) ಕಾಲ ಈರೀತಿ ಗುಡಿಸಿ ಸಾರಿಸುವುದರಿಂದ ನೂರುಕೋಟಿ ಯುಗಗಳು ಪೂರ್ತಾ ಬ್ರಹ್ಮಲೋಕದಲ್ಲಿ ಪೂಜಿತನಾಗುತ್ತಾನೆ.

೩೭. ಆ ಬ್ರಹ್ಮಲೋಕದ ವಾಸವು ಮುಗಿದ ಮೇಲೆ ಚತುರ್ವೇದಗಳನ್ನು ಅಧ್ಯಯನ ಮಾಡಿದ ವಿಪ್ರನೋ, ಅಥವಾ ಸುಂದರನೂ ನೋಡಲು ಹಿತಕರನೂ, ದ್ರವ್ಯಸಂಪದ್ಯುಕ್ತನೂ, ಸಮಸ್ತ ಗುಣಪೂರ್ಣನೂ, ಧಾರ್ಮಿಕನೂ, ಆದ ರಾಜನೋ ಆಗಿ ಜನಿಸುವನು

೩೮. ಅಯ್ಯಾ ಶತ್ರುಗರ್ವಭಂಜಕನಾದ ಪ್ರಭುವೇ! ಮಾನವನು ಮನಃಪೂರ್ವಕವಾಗಿಲ್ಲದೆ ಕಪಟದಿಂದ ಬ್ರಹ್ಮಶಾಲೆಯನ್ನು ಗುಡಿಸುವುದು, ಸಾರಿಸುವುದು ಮುಂತಾದ ಕೆಲಸಗಳನ್ನು ಮಾಡಿದರೆ ಅವನೂ ಕೂಡ ಯಥೋಕ್ತವಾದ ಫಲವನ್ನೇ ಪಡೆಯುತ್ತಾನೆ.

ತಾವದ್ಭ್ರಮಂತಿ ಸಂಸಾರೇ ದುಃಖಶೋಕಭಯಪ್ಲುತಾಃ ।
ನ ಭವಂತಿ ಸುರಶ್ರೇಷ್ಠೇ ಯಾವದ್ಭಕ್ತಾ ಮಹೀಪತೇ ॥ ೩೯ ॥

ಸಮಾಸಕ್ತಂ ಯಥಾಚಿತ್ತಂ ಜಂತೋರ್ವಿಷಯಗೋಚರೇ ।
ಯದ್ಯೇವಂ ಬ್ರಹ್ಮಣಿ ನ್ಯಸ್ತಂ ಕೋ ನ ಮುಚ್ಯೇತ ಬಂಧನಾತ್ ॥ ೪೦ ॥

ಖಂಡಸ್ಫುಟಿತಸಂಸ್ಕಾರಂ ಶಾಲಾಯಾಂ ಯಃ ಕರೋತಿ ವೈ ।
ಆರಾಮಾವಸಥಾದ್ಯೇಷು ಲಭತೇ ಮೌಕ್ತಿಕಂ ಫಲಂ ॥ ೪೧ ॥

ನಾಸ್ತಿ ಬ್ರಹ್ಮಸಮೋ ದೇವೋ ನಾಸ್ತಿ ಬ್ರಹ್ಮಸಮೋ ಗುರುಃ ।
ನಾಸ್ತಿ ಬ್ರಹ್ಮಸಮಂ ಜ್ಞಾನಂ ನಾಸ್ತಿ ವೇಧಃಸಮಂ ತಪಃ ॥ ೪೨ ॥

---

೩೯. ಅಯ್ಯಾ ರಾಜನೇ ! ಜನರು ಎಲ್ಲಿಯವರೆಗೆ ಬ್ರಹ್ಮಭಕ್ತರಾಗುವುದಿಲ್ಲವೋ ಅಲ್ಲಿಯವರೆಗೂ ಅವರು ದುಃಖ ಭಯ ಇವುಗಳಿಂದ ತೊಂದರೆಪಟ್ಟುಕೊಂಡು ಸಂಸಾರದಲ್ಲಿ ತೊಳಲುತ್ತಾ ಇರುತ್ತಾರೆ.

೪೦. ಪ್ರಾಣಿಗಳಿಗೆ ಮನಸ್ಸು, ವಿಷಯಸುಖಗಳಲ್ಲಿ ಎಷ್ಟರಮಟ್ಟಿಗೆ ಆಸಕ್ತವಾಗುತ್ತದೆಯೋ, ಅಷ್ಟರಮಟ್ಟಿಗೆ ಬ್ರಹ್ಮನಲ್ಲಿಡಲ್ಪಟ್ಟದ್ದೇ ಆದರೆ ಯಾವನುತಾನೇ ಈ ಭವಬಂಧನದಿಂದ ಬಿಡುಗಡೆ ಹೊಂದುವುದಿಲ್ಲ ?

೪೧. ಯಾವನು ಬ್ರಹ್ಮದೇವಾಲಯದಲ್ಲಿ ಒಡೆದುದು, ಮುರಿದುದು ಮುಂತಾದ್ದನ್ನು ನೋಡಿ ಆಗಾಗ್ಗೆ ಸರಿಪಡಿಸುವನೋ, ಮತ್ತು ಆ ದೇವಾಲಯಕ್ಕೆ ಸಂಬಂಧಿಸಿದ ಉದ್ಯಾನ (ಹೂದೋಟ), ಅಲ್ಲಿನ ಗುಡಿಸಲು, ಮೊದಲಾದುವುಗಳಲ್ಲಿಯೂ ಇದೇರೀತಿ ಒಡಕು ಮುರುಕುಗಳನ್ನು ಸಂಸ್ಕರಿಸಿ ಸರಿಪಡಿಸುವನೋ, ಅವನು ಮುತ್ತಿನಂತಹ ಉತ್ತಮ ಫಲವನ್ನು ಪಡೆಯುತ್ತಾನೆ.

೪೨. ಬ್ರಹ್ಮನಿಗೆ ಸಮನಾದ ದೇವತೆ ಇಲ್ಲ. ಬ್ರಹ್ಮನಿಗೆ ಸಮನಾದ ಗುರುವೂ ಇಲ್ಲ. ಬ್ರಹ್ಮನಿಗೆ ಸಮನಾದ ಜ್ಞಾನವೂ ಇಲ್ಲ. ಬ್ರಹ್ಮನಿಗೆ ಸಮನಾದ ತಪಸ್ಸೂ ಇಲ್ಲ.

ಪ್ರತಿಪದ್ಯಾದಿ ಸರ್ವೇಷು ದಿವಸೇಷೂತ್ಸವೇಷು ಚ ।
ಪರ್ವಕಾಲೇಷು ಪುಣ್ಯೇಷು ಪೌರ್ಣಮಾಸ್ಯಾಂ ವಿಶೇಷತಃ ॥ ೪೩ ॥

ಶಂಖಭೇರ್ಯಾದಿ ನಿರ್ಘೋಷೈಃ ಮಹದ್ಭಿರ್ಗೇಯ ಸಂಯುತೈಃ ।
ಕುರ್ಯಾನ್ನೀರಾಜನಂ ದೇವೇ ಸುರಜ್ಯೇಷ್ಠೇ ಚತುರ್ಮುಖೇ ॥ ೪೪ ॥

ಯಾವತ್ಪರ್ವಾಣಿ ವಿಧಿನಾ ಕುರ್ಯಾನ್ನೀರಾಜನಂ ನೃಪ ।
ತಾವದ್ಯುಗಸಹಸ್ರಾಣಿ ಬ್ರಹ್ಮಲೋಕೇ ಮಹೀಯತೆ ॥ ೪೫ ॥

ಸ್ನಾನಕಾಲೇ ತ್ರಿಸಂಧ್ಯಂ ತು ಯಃ ಕುರ್ಯಾನ್ನೃತ್ಯವಾದನಂ ।
ಗೀತಂ ವಾ ಮುಖವಾದ್ಯಂ ವಾ ತಸ್ಯ ಪುಣ್ಯಫಲಂ ಶೃಣು ॥ ೪೬ ॥

ಯಾವಂತ್ಯಹಾನಿ ಕುರುತೇ ಗೇಯನೃತ್ಯಾದಿ ವಾದನಂ ।
ತಾವದ್ಯುಗಸಹಸ್ರಾಣಿ ಬ್ರಹ್ಮಲೋಕೇ ಮಹೀಯತೇ ॥ ೪೭ ॥

---

೪೩. ಪ್ರತಿಪತ್ ಮೊದಲಾದ ದಿನಗಳಲ್ಲೂ ಸಮಸ್ತ ಉತ್ಸವ ದಿನಗಳಲ್ಲಿಯೂ, ಪರ್ವಕಾಲಗಳಲ್ಲಿಯೂ, ವಿಶೇಷವಾಗಿ ಪೌರ್ಣಮಾವಾಸ್ಯೆಯಲ್ಲಿಯೂ,

೪೪. ದೇವತಾಶ್ರೇಷ್ಠನಾದ ಚತುರ್ಮುಖನಿಗೆ ಶಂಖ, ಭೇರಿ ಮುಂತಾದ ಮಹಾವಾದ್ಯಧ್ವನಿ ಸಮೇತ ಸಂಗೀತಾದಿಗಳಿಂದ ಯುಕ್ತವಾಗಿ ಮಂಗಳಾರತಿಯನ್ನು ಮಾಡಬೇಕು.

೪೫. ಮೇಲೆ ಹೇಳಿರುವ ರೀತಿಯಿಂದ ಎಷ್ಟು ಪರ್ವಕಾಲಗಳಲ್ಲಿ ಮಹಾಮಂಗಳಾರತಿಯನ್ನು ಬ್ರಹ್ಮನಿಗೆ ಮಾಡುವನೋ, ಅಷ್ಟು ಸಹಸ್ರ ಯುಗಗಳ ಪರ್ಯಂತ ಬ್ರಹ್ಮಲೋಕದಲ್ಲಿ ಪೂಜ್ಯನಾಗುತ್ತಾನೆ.

೪೬. ಪ್ರಾತರ್ಮಧ್ಯಾಹ್ನ ಸಾಯಂಕಾಲಗಳೆಂಬ ಮೂರು ಸಂಧ್ಯೆಗಳಲ್ಲಿ ಅಭಿಷೇಕಮಾಡುವ ಕಾಲದಲ್ಲಿ ಬ್ರಹ್ಮನ ಮುಂದೆ ನೃತ್ಯವನ್ನಾಗಲಿ, ವಾದ್ಯವಾದನವನ್ನಾಗಲಿ, ಗಾನವನ್ನಾಗಲಿ, ಮುಖವಾದ್ಯವನ್ನಾಗಲಿ ಯಾವನು ಮಾಡುತ್ತಾನೋ ಅವನಿಗೆ ಉಂಟಾಗುವ ಫಲವನ್ನು ಹೇಳುವೆನು.

೪೭. ಹೀಗೆಯೇ ನೃತ್ಯ, ವಾದ್ಯವಾದನ, ಮೊದಲಾದುವುಗಳನ್ನು ಎಷ್ಟು ದಿನಗಳು ಮಾಡುವನೋ ಅಷ್ಟು ಸಹಸ್ರವರ್ಷಗಳವರೆಗೆ ಬ್ರಹ್ಮಲೋಕದಲ್ಲಿ ಪೂಜ್ಯನಾಗಿರುತ್ತಾನೆ.

ಕಪಿಲಾ ಪಂಚಗವ್ಯೇನ ಕುಶವಾರಿಯುತೇನ ಚ ।
ಸ್ನಾಪಯೇನ್ಮಂತ್ರಪೂತೇನ ಬ್ರಾಹ್ಮಂ ಸ್ನಾನಂ ಹಿ ತತ್ಸ್ಮೃತಂ ॥ ೪೮ ॥

ಕಪಿಲಾಪಂಚಗವ್ಯೇ ನ ದಧಿಕ್ಷೀರ ಘೃತೇನ ಚ ।
ಸ್ನಾನೇ ಶತಗುಣಂ ಜ್ಞೇಯಮಿತರೇಷಾಂ ನರಾಧಿಪ ॥ ೪೯ ॥

ದೇವಾಗ್ನಿಕಾರ್ಯಮುದ್ದಿಶ್ಯ ಕಪಿಲಾಮಾಹರೇತ್ಸದಾ ।
ಬ್ರಹ್ಮಕ್ಷತ್ರವಿಶಶ್ಚೈವ ನ ಶೂದ್ರಸ್ತು ಕದಾಚನ ॥ ೫೦ ॥

ಕಾಪಿಲಂ ಯಃ ಪಿಬೇಚ್ಛೂದ್ರೋ ದೇವಕಾರ್ಯಾರ್ಥನಿರ್ಮಿತಂ ।
ಸ ಪಚ್ಯೇತ ಮಹಾಘೋರೇ ಸುಚಿರಂ ನರಕಾರ್ಣವೇ ॥ ೫೧ ॥

---

೪೮. ಕಪಿಲವರ್ಣದ ಹಸುವಿನ ಹಾಲು, ಮೊಸರು, ತುಪ್ಪ, ಸಗಣಿ, ಗಂಜಲ ಈ ಐದರ ಮಿಶ್ರವೆನಿಸಿದ ಪಂಚಗವ್ಯದ ಜೊತೆಗೆ ಕುಶೋದಕವನ್ನು ಸೇರಿಸಿ, ಮಂತ್ರ ಪೂರ್ವಕವಾಗಿ ಮಾಡುವ ಅಭಿಷೇಕಕ್ಕೆ ಬ್ರಾಹ್ಮಸ್ನಾನವೆಂದು ಹೇಳುತ್ತಾರೆ.

೪೯. ಅಯ್ಯಾ ನರಪತಿಯೇ! ಕಪಿಲಾಹಸುವಿನ ಪಂಚಗವ್ಯದಿಂದಲ್ಲದೆ ಕಪಿಲಾಗೋವಿನ ಮೊಸರಿನಿಂದಲೂ, ಹಾಲಿನಿಂದಲೂ, ತುಪ್ಪದಿಂದಲೂ ಸ್ನಾನಮಾಡಿಸಿದರೆ ಬ್ರಾಹ್ಮಣನು ಇದು ತನ್ನ ಕರ್ತವ್ಯವೆಂಬ ತಿಳಿವಳಿಕೆಯಿಂದ ಮಾಡುವುದರಿಂದ ಎಷ್ಟೋ ಅಷ್ಟುಮಾತ್ರ ಫಲವುಂಟು. ಇತರರು ಭಕ್ತಿಗಾಗಿ ಮಾಡಿಸುವುದರಿಂದ ಒಂದಕ್ಕೆ ನೂರರಷ್ಟು ಫಲ ಬರುತ್ತದೆ

೫೦. ದೇವತಾಕಾರ್ಯಕ್ಕಾಗಿಯೂ, ಅಗ್ನಿಕಾರ್ಯಕ್ಕಾಗಿಯೂ ಯಾವಾಗಲೂ ಕಪಿಲೆಹಸುವನ್ನೇ ತರಬೇಕು. ಈ ಎರಡು ಕೆಲಸಗಳನ್ನೂ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಇವರು ಮಾಡಬೇಕೇ ಹೊರತು ಶೂದ್ರರು ಮಾಡಲೇಬಾರದು.

೫೧. ದೇವತಾಕಾರ್ಯಕ್ಕಾಗಿ ಉಪಯೋಗಿಸಬೇಕಾದ ಕಪಿಲಾಗೋವಿನ ಹಾಲನ್ನು ಯಾವ ಶೂದ್ರನು ಕುಡಿಯುವನೋ, ಅವನು ಬಹುದಿವಸ ನರಕಸಮುದ್ರವಲ್ಲಿ ಮುಳುಗಿ ದುಃಖವನ್ನು ಅನುಭವಿಸುತ್ತಾನೆ.

**ವರ್ಷಕೋಟಿಸಹಸ್ರೈಸ್ತು ಯತ್ಪಾಪಂ ಸಮುಪಾರ್ಜಿತಂ ।**
**ಸುರಜ್ಯೇಷ್ಠಘೃತಾಭ್ಯಂಗಾತ್ ದಹೇತ್ಸರ್ವಂ ನ ಸಂಶಯಃ ॥ ೫೨ ॥**

**ಕಲ್ಪಕೋಟಿಸಹಸ್ರೈಸ್ತು ಯತ್ಪಾಪಂ ಸಮುಪಾರ್ಜಿತಂ ।**
**ಪಿತಾಮಹಘೃತಸ್ನಾನಂ ದಹತ್ಯಗ್ನಿರಿವೇಂಧನಂ ॥ ೫೩ ॥**

**ಘೃತಸ್ನಾನಂ ಪ್ರತಿಪದಿ ಸಕೃತ್ಕೃತ್ವಾ ತು ಕಾಂಜಜಂ ।**
**ಕುಲೈಕವಿಂಶಮುತ್ತಾರ್ಯ ವಿಷ್ಣುಲೋಕೇ ಮಹೀಯತೇ ॥ ೫೪ ॥**

**ಅಯುತಂ ಯೋ ಗವಾಂ ದದ್ಯಾತ್ ಭಕ್ತ್ಯಾ ವೈ ವೇದಪಾರಗೇ ।**
**ವಸ್ತ್ರಹೇಮಾದಿಯುಕ್ತಾನಾಂ ಕ್ಷೀರಸ್ನಾನೇನ ಯತ್ಫಲಂ ॥ ೫೫ ॥**

**ಸಕೃದಾಜ್ಯೇನ ಪಯಸಾ ವಿರಿಂಚಿಂ ಸ್ನಪಯೇತ್ತು ಯಃ ।**
**ಗಾಂಗೇಯೇನ ಸ ಯಾನೇನ ಯಾತಿ ಬ್ರಹ್ಮಸಲೋಕತಾಂ ॥ ೫೬ ॥**

---

೫೨. ಬ್ರಹ್ಮದೇವನಿಗೆ ತುಪ್ಪವನ್ನು ಅಭಿಷೇಕ ಮಾಡಿಸುವುದರಿಂದ ಮಾನವನು ಸಹಸ್ರಕೋಟಿ ವರ್ಷಗಳಿಂದ ಸಂಪಾದಿಸಿದ ಪಾಪವನ್ನು ಹೋಗಲಾಡಿಕೊಳ್ಳುವನು. ಈ ವಿಚಾರದಲ್ಲಿ ಸ್ವಲ್ಪವೂ ಸಂದೇಹವಿಲ್ಲ.

೫೩. ಪಿತಾಮಹನಿಗೆ ಮಾಡಿದ ಘೃತಸ್ನಾನವು, ಅಗ್ನಿಯು ಕಾಷ್ಠವನ್ನು ದಹಿಸುವಂತೆ, ಮಾನವನು ಸಹಸ್ರಕೋಟಿ ಕಲ್ಪಗಳಿಂದ ಸಂಪಾದಿಸಿದ ಪಾಪವನ್ನೂ ಕೂಡ ನಾಶಮಾಡುವುದು.

೫೪. ಪ್ರತಿಪತ್ತಿಥಿಯಲ್ಲಿ ಯಾವನಾದರೂ ಬ್ರಹ್ಮನಿಗೆ ಘೃತಸ್ನಾನವನ್ನು ಒಂದು ಸಲ ಮಾಡಿಸಿದ್ದೇ ಆದರೆ ತನ್ನ ಉಭಯಕುಲದ ಇಪ್ಪತ್ತೊಂದು ತಲೆಯವರನ್ನೂ ದುಃಖದಿಂದ ಬಿಡುಗಡೆ ಮಾಡಿ ವಿಷ್ಣುಲೋಕದಲ್ಲಿ ಪೂಜ್ಯನಾಗುತ್ತಾನೆ.

೫೫. ವಸ್ತ್ರ, ಸುವರ್ಣಾದಿಗಳಿಂದ ಅಲಂಕರಿಸಿದ ಹತ್ತುಸಹಸ್ರ ಗೋವುಗಳನ್ನು ವೇದಾಧ್ಯಯನಸಂಪನ್ನನಾದ ಬ್ರಾಹ್ಮಣನಿಗೆ ದಾನಮಾಡಿದರೆ ಯಾವ ಫಲ ಉಂಟಾಗುವುದೋ ಆ ಫಲವು ಬ್ರಹ್ಮದೇವನಿಗೆ ಕ್ಷೀರಾಭಿಷೇಕಮಾಡಿಸುವುದರಿಂದ ಲಭಿಸುತ್ತದೆ.

೫೬. ಯಾವನು ಬ್ರಹ್ಮಮೂರ್ತಿಗೆ ತುಪ್ಪದಿಂದಲೂ, ಹಾಲಿನಿಂದಲೂ ಒಂದು ಸಾರಿ ಅಭಿಷೇಕಮಾಡುವನೋ ಅವನು ಸುವರ್ಣಯಾನವನ್ನು (ವಿಮಾನ) ಹತ್ತಿ ಬ್ರಹ್ಮಲೋಕಕ್ಕೆ ಹೋಗುತ್ತಾನೆ.

ಸ್ನಾಪ್ಯ ದಧ್ನಾ ಸಕೃದ್ವೀರ ಕಂಜಜಂ ವಿಷ್ಣುಮಾಪ್ನುಯಾತ್ ।
ಮಧುನಾ ಸ್ನಾಪಯಿತ್ವಾ ತು ವೀರಲೋಕೇ ಮಹೀಯತೇ ॥ ೫೭ ॥

ಸ್ನಾನಮಿಕ್ಷುರಸೇನೇಹ ಯೋ ವಿರಿಂಚೇಃ ಸಮಾಚರೇತ್ ।
ಸ ಯಾತಿ ಲೋಕಂ ಸವಿತುಃ ತೇಜಸಾ ಭಾಸಯನ್ನಭಃ ॥ ೫೮ ॥

ಶುದ್ಧೋದಕೇನ ಯೋ ಭಕ್ತ್ಯಾ ಸ್ನಪಯೇತ್ಪದ್ಮಸಂಭವಂ ।
ಉತ್ಸೃಜ್ಯ ಪಾಪಕಲಿಲಂ ಸ ಯಾತ್ಯೇವ ಸಲೋಕತಾಂ ॥ ೫೯ ॥

ವಸ್ತ್ರಪೂತೇನ ತೋಯೇನ ಸ್ನಪಯೇದ್ಯಸ್ಸಕೃದ್ವಿಭುಂ ।
ಸ ಸರ್ವಕಾಲಂ ತೃಪ್ತಾತ್ಮಾ ಲೋಕವಶ್ಯತ್ವಮಾಪ್ನುಯಾತ್ ॥ ೬೦ ॥

ಸರ್ವೌಷಧೀಭಿರ್ಯೋ ಭಕ್ತ್ಯಾ ಸ್ನಪಯೇತ್ಪದ್ಮಸಂಭವಂ ।
ಕಾಂಚನೇನ ವಿಮಾನೇನ ಬ್ರಹ್ಮಲೋಕೇ ಮಹೀಯತೇ ॥ ೬೧ ॥

---

೫೭. ಅಯ್ಯಾ ಶೂರಶ್ರೇಷ್ಠನೇ! ಬ್ರಹ್ಮನಿಗೆ ಒಂದುಸಾರಿ ಮೊಸರಿನಿಂದ ಅಭಿಷೇಕಮಾಡಿದವನು ವಿಷ್ಣುಲೋಕವನ್ನು ಪಡೆಯುತ್ತಾನೆ. ಜೇನುತುಪ್ಪದಿಂದ ಅಭಿಷೇಕಮಾಡಿದರೆ, ವೀರರು ಪಡೆಯುವ ಲೋಕವನ್ನು ಪಡೆದು ಪೂಜ್ಯನಾಗುತ್ತಾನೆ.

೫೮. ಕಬ್ಬಿನ ಹಾಲಿನಿಂದ ಬ್ರಹ್ಮದೇವನಿಗೆ ಯಾವನು ಅಭಿಷೇಕಮಾಡುವನೋ ಅವನು ಪ್ರಕಾಶವಾದ ತನ್ನ ತೇಜಸ್ಸಿನಿಂದ ಆಕಾಶವನ್ನೆಲ್ಲಾ ಬೆಳಗುತ್ತಾ ಸೂರ್ಯಲೋಕಕ್ಕೆ ಹೋಗುತ್ತಾನೆ.

೫೯ ಯಾವನು ಶುದ್ಧೋದಕದಿಂದ ಭಕ್ತಿಯುತನಾಗಿ ಬ್ರಹ್ಮನಿಗೆ ಅಭಿಷೇಕ ಮಾಡುವನೋ, ಅವನು ಪಾಪವೆಂಬ ಕಲ್ಮಷವಿಲ್ಲದವನಾಗಿ ಬ್ರಹ್ಮಸಾಲೋಕ್ಯವನ್ನು ಹೊಂದುತ್ತಾನೆ

೬೦ ಯಾವನು ವಸ್ತ್ರದಿಂದ ಶೋಧಿಸಿದ ನೀರಿನಿಂದ ಬ್ರಹ್ಮನಿಗೆ ಒಂದುಸಾರಿ ಅಭಿಷೇಕಮಾಡುವನೋ, ಅವನು ನಿತ್ಯತೃಪ್ತಿಯನ್ನು ಪಡೆದು ಲೋಕವನ್ನೇ ವಶಪಡಿಸಿ ಕೊಳ್ಳುವ ಶಕ್ತಿಯನ್ನು ಪಡೆಯುವನು.

೬೧. ಯಾವನು ಭಕ್ತಿಯುಕ್ತನಾಗಿ ಎಲ್ಲಾ ಮೂಲಿಕೆಗಳ ರಸದಿಂದ ಬ್ರಹ್ಮನಿಗೆ ಅಭಿಷೇಕಮಾಡುವನೋ ಅವನು ಸುವರ್ಣವಿಮಾನದಲ್ಲಿ ಪ್ರಯಾಣಮಾಡಿ ಬ್ರಹ್ಮಲೋಕವನ್ನು ಸೇರಿ ಪೂಜ್ಯತೆಯನ್ನು ಪಡೆಯುತ್ತಾನೆ.

**ಗಂಧಚಂದನತೋಯೇನ ಸ್ನಾಪಯೇದ್ಯೋಂಬುಜೋದ್ಭವಂ ।**
**ರುದ್ರಲೋಕಮವಾಪ್ನೋತಿ ತೇಜಸಾ ಹೇಮಸನ್ನಿಭಃ　　॥ ೬೨ ॥**

**ಪಾಟಲೋತ್ಪಲಪದ್ಮಾನಿ ಕರವೀರಾಣಿ ಸರ್ವದಾ ।**
**ಸ್ನಾನಕಾಲೇ ಪ್ರಯೋಜ್ಯಾನಿ ಸ್ಥಿರಾಣಿ ಸುರಭೀಣಿ ಚ　　॥ ೬೩ ॥**

**ಏಷಾಮೇಕತಮಂ ಸ್ನಾನಂ ಭಕ್ತ್ಯಾ ಕೃತ್ವಾ ತು ವೇಧಸಿ ।**
**ವಿಧೂಯ ಪಾಪಕಲಿಲಂ ವಿಧಿಲೋಕೇ ಮಹೀಯತೇ　　॥ ೬೪ ॥**

**ಕರ್ಪೂರಾಗರುತೋಯೇನ ಸ್ನಪಯೇದ್ಯಸ್ತು ಕಂಜಜಂ ।**
**ಸರ್ವಪಾಪವಿಶುದ್ಧಾತ್ಮಾ ಬ್ರಹ್ಮಲೋಕೇ ಮಹೀಯತೇ　　॥ ೬೫ ॥**

**ಗಾಯತ್ರೀ ಶತಜಪ್ತೇನ ವಿಮಲೇನಾಂಭಸಾ ವಿಭುಂ ।**
**ಸ್ನಪಯಿತ್ವಾ ಸಕೃದ್ಭಕ್ತ್ಯಾ ಬ್ರಹ್ಮಲೋಕಮವಾಪ್ನುಯಾತ್　　॥ ೬೬ ॥**

---

೬೨. ಚೆನ್ನಾಗಿ ಒಲಿತು ಸುವಾಸನೆಗೂಡಿದ ಗಂಧಕಾಷ್ಠವನ್ನು ತೇಯ್ದು ಕದಡಿದ ನೀರಿನಿಂದ ಯಾವನು ಬ್ರಹ್ಮನಿಗೆ ಸ್ನಾನಮಾಡಿಸುವದೋ ಅವನು ಸುವರ್ಣ ಕಾಂತಿಯಂತೆ ದೇಹಕಾಂತಿಯುಳ್ಳವನಾಗಿ ರುದ್ರಲೋಕವನ್ನು ಪಡೆಯುತ್ತಾನೆ.

೬೩. ಸರ್ವಕಾಲದಲ್ಲಿಯೂ ಸ್ಥಿರಗಳೂ, ಸುಗಂಧಯುಕ್ತಗಳೂ ಆದ ಪಾದರಿ, ನೈದಿಲೆ, ಕಣಿಗಲೆ, ಈ ಪುಷ್ಪಯುಕ್ತವಾದ ಜಲದಿಂದ ಬ್ರಹ್ಮನಿಗೆ ಅಭಿಷೇಕ ಮಾಡಬೇಕು.

೬೪. ಬ್ರಹ್ಮನಲ್ಲಿ ಭಕ್ತಿಯುತನಾಗಿ ಈ ಪುಷ್ಪೋದಕಗಳಿಂದ ಯಾವನು ಒಂದು ಆವೃತ್ತಿಯಾದರೂ ಅಭಿಷೇಕಮಾಡುವನೋ ಅವನು ತನ್ನ ಪಾಪವೆಂಬ ಕಲ್ಮಷವನ್ನು ಹೋಗಲಾಡಿಸಿಕೊಂಡು ಬ್ರಹ್ಮಲೋಕವನ್ನು ಸೇರಿ ಪೂಜ್ಯನೆನಿಸುತ್ತಾನೆ.

೬೫. ಪಚ್ಚಕರ್ಪೂರ, ಅಗಿಲುಚಕ್ಕೆ, ಇವುಗಳನ್ನು ತೆಯ್ದು ಕದರಿದ ನೀರಿನಿಂದ ಯಾವನು ಬ್ರಹ್ಮದೇವನಿಗೆ ಅಭಿಷೇಕಮಾಡುತ್ತಾನೆಯೋ ಅವನು ಎಲ್ಲಾ ಪಾಪಗಳಿಂದಲೂ ಬಿಡುಗಡೆಹೊಂದಿ ಶುದ್ಧಾತ್ಮನಾಗಿ ಬ್ರಹ್ಮಲೋಕದಲ್ಲಿ ಪೂಜ್ಯನಾಗುತ್ತಾನೆ.

೬೬. ನೂರುಸಾರಿ ಗಾಯಿತ್ರೀಮಂತ್ರದಿಂದ ಅಭಿಮಂತ್ರಣಮಾಡಿದ ನಿರ್ಮಲವಾದ ನೀರಿನಿಂದ ಬ್ರಹ್ಮಮೂರ್ತಿಗೆ ಒಂದಾವರ್ತಿ ಭಕ್ತಿಯಿಂದ ಸ್ನಾನಮಾಡಿಸಿದವನು ಬ್ರಹ್ಮಲೋಕವನ್ನು ಹೊಂದುತ್ತಾನೆ.

ವಿಭುಂ ಶೀತಾಂಬುನಾ ಸ್ನಾಪ್ಯ ಧಾರೋಷ್ಣಪಯಸಾ ತತಃ ।
ತತಃ ಪಶ್ಚಾತ್ ಘೃತಸ್ನಾನಂ ಕೃತ್ವಾ ಪಾಪೈರ್ವಿಮುಚ್ಯತೇ ॥ ೬೭ ॥

ನಿತತ್‌ಸ್ನಾನತ್ರಯಂ ಕೃತ್ವಾ ಪೂಜಯಿತ್ವಾ ತು ಭಕ್ತಿತಃ ।
ಅಶ್ವಮೇಧಸಹಸ್ರಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೬೮ ॥

ಮೃತ್ಕುಂಭೈಸ್ತಾಮ್ರಜೈಃ ಕುಂಭೈಃ ಸ್ನಾನಂ ಶತಗುಣಂ ಭವೇತ್ ।
ರೌಪ್ಯೆ ಲಕ್ಷೋತ್ತರಂ ಪ್ರೋಕ್ತಂ ಹೇಮ್ನೈಃ ಕೋಟಿಗುಣಂ ಭವೇತ್ ॥೬೯ ॥

ಬ್ರಹ್ಮಣೋ ದರ್ಶನಂ ಪುಣ್ಯಂ ದರ್ಶನಾತ್ಸ್ಪರ್ಶನಂ ಪರಂ ।
ಸ್ಪರ್ಶನಾದರ್ಚನಂ ಶ್ರೇಷ್ಠಂ ಘೃತಸ್ನಾತ ಮತಃಪರಂ ॥ ೭೦ ॥

ವಾಚಿಕಂ ಮಾನಸಂ ಪಾಪಂ ಘೃತಸ್ನಾನೇನ ದೇಹಿನಾಂ ।
ಕ್ಷಿಣುತೇ ಪದ್ಮಜೋ ಯಸ್ಮಾತ್ ತಸ್ಮಾತ್ಸ್ನಾನಂ ಸಮಾಚರೇತ್ ॥ ೭೧ ॥

---

೬೭ ಸ್ವಾಮಿಗೆ ಶೀತೋದಕದಿಂದ ಸ್ನಾನಮಾಡಿಸಿ ಆಮೇಲೆ ಆಗತಾನೇ ಕರೆದಂಥ ಧಾರೋಷ್ಣವಾಗಿರುವ ಆಕಳಹಾಲಿನಿಂದ ಅಭಿಷೇಕಮಾಡಿ ಅನಂತರ ಘೃತವನ್ನೂ ಅಭಿಷೇಕಮಾಡಿದರೆ ಸಮಸ್ತ ಪಾಪಗಳಿಂದಲೂ ಮುಕ್ತನಾಗುತ್ತಾನೆ.

೬೮. ಶೀತೋದಕ, ನೊರೆಹಾಲು, ತುಪ್ಪ ಈ ಮೂರರಿಂದ ಪ್ರತ್ಯೇಕವಾಗಿ ಸ್ನಾನಗಳನ್ನು ಮಾಡಿಸಿ ಭಕ್ತಿಯಿಂದ ಪೂಜಿಸಿದ ಮನುಷ್ಯನು ಸಾವಿರ ಅಶ್ವಮೇಧ ಯಜ್ಞಗಳನ್ನು ಮಾಡಿದ್ದರಿಂದ ಬರುವಷ್ಟು ಫಲವನ್ನು ಹೊಂದುತ್ತಾನೆ.

೬೯. ಅಭಿಷೇಕಮಾಡಲು ಮಣ್ಣಿನ ಪಾತ್ರೆಗಳನ್ನು ಉಪಯೋಗಿಸುವುದಕ್ಕಿಂತ ತಾಮ್ರದ ಪಾತ್ರೆಗಳನ್ನು ಅಭಿಷೇಕಕ್ಕೆ ಉಪಯೋಗಿಸುವುದು ಶತಗುಣ ಫಲಪ್ರದವೂ ಅಭಿಷೇಕಕ್ಕೆ ಬೆಳ್ಳಿಯ ಪಾತ್ರೆಯನ್ನು ಉಪಯೋಗಿಸಿದರೆ ಲಕ್ಷಪಾಲು ಹೆಚ್ಚುಫಲವೂ ಸುವರ್ಣ ಕಲಶದಿಂದ ಅಭಿಷೇಕಮಾಡಿದರೆ ಕೋಟಿಪಾಲಿನಷ್ಟು ಹೆಚ್ಚುಫಲವೂ ಉಂಟಾಗುತ್ತದೆ.

೭೦. ಬ್ರಹ್ಮದೇವರ ದರ್ಶನವೇ ಪುಣ್ಯಕರವು. ದರ್ಶನಕ್ಕಿಂತ ಸ್ಪರ್ಶನವೂ, ಸ್ಪರ್ಶನಕ್ಕಿಂತ ಪೂಜೆಯೂ, ಅದಕ್ಕಿಂತ ಘೃತಸ್ನಾನವೂ ಶ್ರೇಷ್ಠವು.

೭೧.. ಬ್ರಹ್ಮನಿಗೆ ಘೃತಾಭಿಷೇಕ ಮಾಡೋಣದರಿಂದ ಪ್ರಾಣಿಗಳ ವಾಚಿಕ ಪಾಪವೂ, ಮಾನಸಪಾಪವೂ ಕ್ಷೀಣವಾಗುತ್ತವೆ. ಏಕೆಂದರೆ ಈ ಸ್ನಾನದಿಂದ ಪದ್ಮಜನು ಸುಪ್ರೀತನಾಗುತ್ತಾನೆ.

ಸ್ನಪಯಿತ್ವಾರ್ಚಯೇದ್ಭಕ್ತ್ಯಾ ಯಥಾ ತಚ್ಛೃಣು ಭಾರತ ।
ಶುಚಿವಸ್ತ್ರಧರಃ ಸ್ನಾತಃ ಕೃತನ್ಯಾಸಶ್ಚ ಭಾರತ ॥ ೭೨ ॥

ಚತುರ್ಹಸ್ತಂ ಲಿಖೇತ್ಪದ್ಮಂ ಚತುರ್ಭಾಗ ವಿಭಾಗಿತಂ ।
ಮಧ್ಯೇ ತಸ್ಯ ಲಿಖೇಚ್ಚಕ್ರಂ ದಲೈರ್ದ್ವಾದಶಭಿಶ್ಚಿತಂ ॥ ೭೩ ॥

ಸರೋಜಾನಿ ತತೋ ಸ್ಯಸ್ಯ ಅಕ್ಷರಾಣಿ ಸಮಂತತಃ ।
ಅಕ್ಷರಂ ವಿಹಿತಂ ಚಾನ್ಯತ್ಪತ್ರಭಾಗೇ ಪ್ರಕೀರ್ತಿತಂ ॥ ೭೪ ॥

ನಾನಾವರ್ಣಕ ಸಂಯೋಗಾತ್ ಲಿಖೇಚ್ಚೈವಾನುಪೂರ್ವಶಃ ।
ಕೃಷ್ಣೋತ್ಕಟಂ ತು ಮಧ್ಯಂ ಸ್ಯಾತ್ಪೀತರಕ್ತಂ ತಥಾಪರಂ ॥ ೭೫ ॥

ಸಿತಂ ಶುದ್ಧಂ ತು ಕರ್ತವ್ಯಂ ಮಧ್ಯಭಾಗೇ ತು ವರ್ತುಲಂ ।
ಪ್ರಭಾಕುಂಡಲಕೈರ್ಬಾಹ್ಯೈಃ ವೇಷ್ಟಯೇಚ್ಚಕ್ರನಾಯಕಂ ॥ ೭೬ ॥

---

೭೨. ಎಲೈ ಭರತಕುಲೋತ್ಪನ್ನನೇ! ಭಕ್ತಿಯಿಂದ ಬ್ರಹ್ಮನಿಗೆ ಅಭಿಷೇಕ ಮಾಡಿ ಪೂಜೆಮಾಡುವುದು ಹೇಗೆ? ಎಂಬುದನ್ನು ಹೇಳುತ್ತೇನೆ ಕೇಳು. ಸ್ನಾನ ಮಾಡಿ ಶುಭ್ರವಾದ ಮಡಿವಸ್ತ್ರಗಳನ್ನುಟ್ಟು ನಿತ್ಯಕರ್ಮಾನಂತರ ಅಂಗನ್ಯಾಸಾದಿ ಗಳನ್ನು ಮಾಡಿಕೊಳ್ಳಬೇಕು.

೭೩. ನಾಲ್ಕು ಹಸ್ತ ಉದ್ದದ ಒಂದು ಪದ್ಮವನ್ನು ಬರೆದು ಅದನ್ನು ನಾಲ್ಕು ಭಾಗಮಾಡಿ ಅದರ ಮಧ್ಯದಲ್ಲಿ ಗುಂಡಾದ ಒಂದು ಚಕ್ರವನ್ನು ಬರೆದು ಆ ಚಕ್ರದಲ್ಲಿ ಹನ್ನೆರಡು ದಳಗಳನ್ನು ಬಿಡಿಸಬೇಕು

೭೪. ಕಮಲದ ಸುತ್ತಲೂ ಅಕ್ಷರಗಳನ್ನು ಬರೆಯಬೇಕು. ಒಂದೊಂದು ಅಕ್ಷರವನ್ನು ಒಂದೊಂದು ಪತ್ರಭಾಗದಲ್ಲಿ ವಿಧಾನಮಾಡಬೇಕೆಂದು ಹೇಳಿದೆ.

೭೫. ಕ್ರಮವಾಗಿ ಬಗೆಬಗೆಯ ಬಣ್ಣವನ್ನುಪಯೋಗಿಸಿ ಬರೆಯಬೇಕು ಮಧ್ಯಭಾಗದಲ್ಲಿ ಅಚ್ಚಕಪ್ಪಾಗಿಯೂ, ಇನ್ನೊಂದು ಭಾಗವು ಹಳದಿ ಮಿಶ್ರವಾದ ಕೆಂಪು ಬಣ್ಣವಾಗಿಯೂ ಇರಬೇಕು.

೭೬. ಬೆಳ್ಳಗೆ ಶುದ್ಧವಾಗಿಯೂ, ಮಧ್ಯಭಾಗದಲ್ಲಿ ಗುಂಡಾಗಿಯೂ ಇರುವಂತೆ ಚಕ್ರವನ್ನು ರಚಿಸಬೇಕು. ಆ ಶ್ರೇಷ್ಠವಾದ ಚಕ್ರದಸುತ್ತ ಹೊರಗೆ ನಾನಾ ಪ್ರಮಾಣದ ವರ್ತುಲಗಳ ರಚನೆಯಿಂದ ಕಾಂತಿಯುಕ್ತವಾಗುವಂತೆ ಮಾಡಬೇಕು

ಏವಮಾಲಿಖ್ಯ ಯತ್ನೇನ ಮೂಲಮಂತ್ರಂ ತತೋ ನ್ಯಸೇತ್ ।
ಮೂರ್ಧ್ನಃ ಪಾದತಲಂ ಯಾವತ್ ಪ್ರಣವಂ ವಿನ್ಯಸೇದ್ಬುಧಃ ॥ ೭೭ ॥

ನಾದರೂಪಂ ನ್ಯಸೇತ್ತಾವತ್ ಯಾವಚ್ಛಬ್ದಸ್ಯ ಶೂನ್ಯತಾ ।
ತತ್ಕಾರಂ ವಿನ್ಯಸೇನ್ಮೂರ್ಧ್ನಿ ಸಕಾರಂ ಮುಖಮಂಡಲೇ ॥ ೭೮ ॥

ವಿಕಾರಂ ಕಂಠದೇಶೇ ತು ತುಕಾರಂ ಸರ್ವಸಂಧಿಷು ।
ವಕಾರಂ ಹೃದಿ ಮಧ್ಯೇ ತು ರೇಕಾರಂ ಪಾರ್ಶ್ವಯೋರ್ದ್ವಯೋಃ ॥ ೭೯ ॥

ಣಕಾರಂ ದಕ್ಷಿಣೇಕುಕ್ಷೌ ಯಕಾರಂ ವಾಮಸಂಜ್ಞಿತೇ ।
ಭಕಾರಂ ಕಟಿನಾಭಿಸ್ಥಂ ಗೋರ್ಕಾರಂ ಜಾನುಪರ್ವಸು ॥ ೮೦ ॥

ದೇಕಾರಂ ಜಂಘಯೋರ್ನ್ಯಸ್ಯ ವಕಾರಂ ಪಾದಪದ್ಮಯೋಃ ।
ಸ್ಯಕಾರಮಂಗುಷ್ಠಯೋರ್ನ್ಯಸ್ಯ ಧೀಕಾರಂ ಚೋರಸಿ ನ್ಯಸೇತ್ ॥ ೮೧ ॥

---

೭೭. ಹೀಗೆ ಬರೆದು ಆಮೇಲೆ ಮೂಲಮಂತ್ರವನ್ನು ವಿನ್ಯಾಸಮಾಡಬೇಕು. ಗ್ರಾಜ್ಞನು ಶಿರಸ್ಸಿನಿಂದ ಪಾದದವರಿಗೆ ಪ್ರಣವವನ್ನು ಬರೆಯಬೇಕು.

೭೮. ಬೀಜಾಕ್ಷರಶಬ್ದವು ಎಲ್ಲೆಲ್ಲಿ ಕಾಣುವುದಿಲ್ಲವೋ ಅಲ್ಲಲ್ಲಿ ನಾದರೂಪವಾದ ಓಂಕಾರವನ್ನು ಬರೆಯಬೇಕು. 'ತತ್' ಎಂಬ ಅಕ್ಷರವನ್ನು ನಡುನೆತ್ತಿಯಲ್ಲಿಯೂ, 'ಸ' ಕಾರವನ್ನು ಮುಖದಲ್ಲಿಯೂ ನ್ಯಾಸಮಾಡಬೇಕು.

೭೯. 'ವಿ' ಎಂಬುದನ್ನು ಕಂಠಪ್ರದೇಶದಲ್ಲಿಯೂ, 'ತು' ಎಂಬುದನ್ನು ಸಂಧಿಸ್ಥಾನದಲ್ಲಿಯೂ, 'ವ' ಕಾರವನ್ನು ಹೃದಯದಲ್ಲಿಯೂ, 'ರೇ' ಕಾರವನ್ನು ಎರಡು ಪಾರ್ಶ್ವಗಳಲ್ಲಿಯೂ, ಬರೆಯಬೇಕು.

೮೦. 'ಣ' ಕಾರಣವನ್ನು ಹೊಟ್ಟೆಯ ಬಲಭಾಗದಲ್ಲಿಯೂ, 'ಯ' ಕಾರವನ್ನು ಹೊಟ್ಟೆಯ ಎಡಭಾಗದಲ್ಲಿಯೂ, 'ಭ' ಕಾರವನ್ನು ಸೊಂಟದ ಸ್ಥಳದಲ್ಲಿಯೂ, 'ಗೋರ್' ಎಂಬಕ್ಷರವನ್ನು ಮುಂಡಿಯ ಗಿಣ್ಣುಗಳಲ್ಲಿಯೂ ಬರೆಯಬೇಕು.

೮೧. 'ದೇ' ಕಾರವನ್ನು ಮೊಳಕಾಲುಗಳಲ್ಲಿಯೂ, 'ವ' ಕಾರವನ್ನು ಎರಡು ಪಾದಗಳಲ್ಲಿಯೂ, 'ಸ್ಯ' ಕಾರವನ್ನು ಅಂಗುಷ್ಠಗಳಲ್ಲಿಯೂ, 'ಧೀ' ಕಾರವನ್ನು ಉರಸ್ಸಿನಲ್ಲಿಯೂ ನ್ಯಾಸಮಾಡಬೇಕು.

ಮಕಾರಂ ಜಾನುದೇಶೇ ತು ಹಿಕಾರಂ ಗುಹ್ಯಮಾಶ್ರಿತಂ ।
ಧಿಕಾರಂ ಹೃದಯೇ ನ್ಯಸ್ಯ ಯೋಕಾರೌಚೌಷ್ಠಯೋರ್ನ್ಯಸೇತ್ ॥ ೮೨ ॥

ನಕಾರಂ ನಾಸಿಕಾಗ್ರೇ ತು ಪ್ರಕಾರಂ ನೇತ್ರಮಾಶ್ರಿತಂ ।
ಚೋಕಾರಂ ತು ಭ್ರುವೋರ್ಮಧ್ಯೇ ದಕಾರಂ ಪ್ರಾಣಮಾಶ್ರಿತಂ ॥ ೮೩ ॥

ಯಕಾರಂ ವಿನ್ಯಸೇನ್ಮೂರ್ಧ್ನಿ ತಕಾರಂ ಕೇಶಮಾಶ್ರಿತಂ ।
ನ್ಯಾಸಂ ಕೃತ್ವಾತ್ಮನೋ ದೇಹೇ ದೇವೇ ಕುರ್ಯಾತ್ತಥಾ ನೃಪ ।
ಸರ್ವೋಪಚಾರಸಂಪನ್ನಂ ಕೃತ್ವಾ ಸಮ್ಯಙ್ನಿರೀಕ್ಷಯೇತ್ ॥ ೮೪ ॥

ಕುಂಕುಮಾಗರು ಕರ್ಪೂರ ಚಂದನೇನ ವಿಮಿಶ್ರಿತಂ ।
ಗಂಧತೋಯಮುಪಸ್ಕೃತ್ಯ ಗಾಯತ್ರ್ಯಾ ಪ್ರಣವೇನ ಚ ।
ಪ್ರೋಕ್ಷಯೇತ್ಸರ್ವದ್ರವ್ಯಾಣಿ ಪಶ್ಚಾದರ್ಚನಮಾಚರೇತ್ ॥ ೮೫ ॥

---

೮೨. 'ಮ' ಕಾರವನ್ನು ಮಂಡಿಗಳಲ್ಲಿಯೂ, 'ಹೀ' ಕಾರವನ್ನು ಗುಹ್ಯದಲ್ಲಿಯೂ, 'ಧಿ' ಕಾರವನ್ನು ಹೃದಯದಲ್ಲೂ, 'ಯೋ' ಕಾರಗಳನ್ನು ತುಟಿಗಳಲ್ಲಿಯೂ ನ್ಯಾಸಮಾಡಬೇಕು.

೮೩. 'ನಃ' ಕಾರವನ್ನು ಮೂಗಿನ ತುದಿಯಲ್ಲಿಯೂ, 'ಪ್ರ' ಎಂಬುದನ್ನು ನೇತ್ರದಲ್ಲಿಯೂ, 'ಚೋ' ಎಂಬುದನ್ನು ಭ್ರೂಮಧ್ಯದಲ್ಲಿಯೂ, 'ದ' ಎಂಬುದನ್ನು ಪ್ರಾಣವಾಯು ಸಂಚಾರ ಸ್ಥಳದಲ್ಲಿಯೂ, 'ಯಾ' ಎಂಬುದನ್ನು ಮೂರ್ಧಸ್ಥಾನದಲ್ಲಿಯೂ, 'ತ್' ಕಾರವನ್ನು ಕೇಶಸ್ಥಾನದಲ್ಲಿಯೂ ನ್ಯಾಸಮಾಡಬೇಕು.

೮೪. ಹೀಗೆ ತನ್ನ ದೇಹದಲ್ಲಿಯೂ, ದೇವರ ಶರೀರದಲ್ಲಿಯೂ, ನ್ಯಾಸವನ್ನು ಮಾಡಿ, ಸರ್ವೋಪಚಾರಗಳಿಂದಲೂ ಪೂಜೆಮಾಡಿ, ದೇವತಾಬಿಂಬವನ್ನು ಚೆನ್ನಾಗಿ ದರ್ಶನಮಾಡಬೇಕು.

೮೫. ಕುಂಕುಮಕೇಸರಿ, ಅಗಿಲುಗಂಧ, ಪಚ್ಚಕರ್ಪೂರ, ಶ್ರೀಗಂಧ ಇವುಗಳನ್ನು ಬೆರಸಿ ಕದಡಿದ ಗಂಧೋದಕವನ್ನು ಸಿದ್ಧಪಡಿಸಿ ಗಾಯತ್ರಿಯಿಂದಲೂ, ಪ್ರಣವದಿಂದಲೂ, ಅಭಿಮಂತ್ರಣಮಾಡಿ ಸಮಸ್ತ ಪೂಜಾದ್ರವ್ಯಗಳಿಗೂ ಪ್ರೋಕ್ಷಿಸಿ, ಆಮೇಲೆ ಬ್ರಹ್ಮದೇವರ ಪೂಜೆಯನ್ನು ಮಾಡಬೇಕು.

ಚಕ್ರಗ್ರಂಥಿಷು ಸರ್ವಾಸು ಪ್ರಣವಂ ವಿನಿವೇಶಯೇತ್ ।
ಭೂಯಃ ಪ್ಲುತಂ ಸಮುಚ್ಚಾರ್ಯ ಪ್ರಣವಂ ಸರ್ವತೋಮುಖಂ ॥ ೮೬ ॥

ವಿನ್ಯಸೇತ್ಪದ್ಮ ಮಧ್ಯೇ ತು ಪೀಠನಿಷ್ಪತ್ತಿಹೇತವೆ ।
ಆಸನೇ ಪೃಥಿವೀ ಜ್ಞೇಯಾ ಸರ್ವ ಸತ್ವಧರಾ ಮತಾ ॥ ೮೭ ॥

ಹ್ರಸ್ವೋಂಕಾರೇ ಮತಾ ಸಾ ತು ದೀರ್ಘೋಂಕಾರೇ ತು ದೇವರಾಟ್ ।
ಪ್ಲುತಸ್ತು ವ್ಯಾಪಯೇದ್ಭಾವಂ ಮೋಕ್ಷದಂ ಚಾಮೃತಾತ್ಮಕಂ ॥ ೮೮ ॥

ಯತ್ನಸ್ಥೋ ನ ನಿವರ್ತೇತ ಯೋಗೀ ಪ್ರಾಣಪರಾಯಣಃ ।
ಆವಾಹನಂ ಕತಃ ಕುರ್ಯಾದಕ್ಷರೇಣ ಪರೇಣ ತು ॥ ೮೯ ॥

ಆವಾಹ್ಯ ತೇಜೋರೂಪಂ ತು ನ್ಯಸೇನ್ಮಂತ್ರವರಾಂಸ್ತತಃ ।
ತತೋ ವಿಭಾವಯೇದ್ದೇವಂ ಪದ್ಮಸ್ಥಂ ಚತುರಾನನಂ ॥ ೯೦ ॥

---

೮೬. ಚಕ್ರದ ಎಲ್ಲಾ ಗ್ರಂಥಿಗಳಲ್ಲಿಯೂ, ಪ್ರಣವವನ್ನು ನ್ಯಾಸಮಾಡಬೇಕು. ಆಮೇಲೆ ಪ್ಲುತದಿಂದ ಅದನ್ನು ಉಚ್ಚರಿಸಿ ಸರ್ವಮುಖಗಳಲ್ಲಿಯೂ ಪ್ರಣವವನ್ನು ನ್ಯಾಸಮಾಡಬೇಕು.

೮೭. ಪೀಠವನ್ನು ಏರ್ಪಡಿಸಿ ಪದ್ಮಮಧ್ಯದಲ್ಲಿ ಪ್ರಣವವನ್ನು ಇಡಬೇಕು. ಪೂಜೆಗೆ ಕುಳಿತುಕೊಳ್ಳುವ ಸ್ಥಳದಲ್ಲಿ ಸರ್ವಭೂತಯುಕ್ತವಾದ ಪೃಥ್ವಿಯು ಇದೆ ಎಂದು ತಿಳಿದು ಭೂಪ್ರಾರ್ಥನೆ ಮಾಡಬೇಕು.

ಓಂಕಾರವನ್ನು ಹ್ರಸ್ವವಾಗಿ ಉಚ್ಚರಿಸಿದರೆ ಭೂಮಿಯನ್ನೂ, ದೀರ್ಘವಾಗಿ ಉಚ್ಚರಿಸಿದರೆ ದೇವೇಂದ್ರನನ್ನೂ, ಪ್ಲುತವಾಗಿ ಉಚ್ಚರಿಸಿದರೆ ಮೋಕ್ಷವನ್ನೂ, ಕೊಡುವುದು. ಅಮೃತಾತ್ಮಕವಾಗಿ ಇರುವ ಭಾವವನ್ನೂ ವ್ಯಾಪಿಸುವುದು.

೮೯. ಪ್ರಾಣಾಯಾಮ ಪರಾಯಣನಾದ ಯೋಗಿಯು ತಾನು ಮಾಡಿದ ಪ್ರಯತ್ನದಿಂದ ಯಾವಾಗಲೂ ಹಿಂದಿರುಗಬಾರದು. ಆಮೇಲೆ ಶ್ರೇಷ್ಠವಾದ ಬೀಜಾಕ್ಷರಗಳಿಂದ ಆವಾಹನಮಾಡಬೆಕು.

೯೦. ಆಮೇಲೆ ದೇವನ ತೇಜೋರೂಪವನ್ನು ಆವಾಹನೆಮಾಡಿ ಶ್ರೇಷ್ಠವಾದ ಮಂತ್ರಗಳನ್ನು ನ್ಯಾಸಮಾಡಬೇಕು. ಅನಂತರದಲ್ಲಿ ಚತುರ್ಮುಖಬ್ರಹ್ಮನು ಪದ್ಮದಲ್ಲಿರುವಂತೆ ಭಾವಿಸಬೇಕು.

ಸ್ರಷ್ಟಾರಂ ಸರ್ವಜಗತಾಂ ವಿಷ್ಣುರುದ್ರವಿಧಾನಗಮ್ ।
ಸಂಭಾವ್ಯವಿಧಿವದ್ಭಕ್ತ್ಯಾ ಪಶ್ಚಾಚ್ಚಾರ್ಚನಮಾಚರೇತ್ ॥ ೯೧ ॥

ಗಂಧಪುಷ್ಪಾದಿ ಸಂಭಾರಾನ್ ಕ್ರಮಾತ್ಸರ್ವಾನ್ಪ್ರಕಲ್ಪಯೇತ್ ।
ಗಾಯತ್ರೀಮುಚ್ಚರೇನ್ಮಂತ್ರಂ ಸರ್ವಕರ್ಮಾಣಿ ಕಾರಯೇತ್ ॥ ೯೨ ॥

ಪುಷ್ಪಂ ಧೂಪಂ ತಥಾ ದೀಪಂ ನೈವೇದ್ಯಂ ಸುಮನೋಹರಂ ।
ಖಂಡಲಡ್ಡುಕಶ್ರೀವೇಷ್ಟ ಕಾಸಾರಾಶೋಕವರ್ತಿಕಾಃ ॥ ೯೩ ॥

ಸ್ವಸ್ತಿ ಕೋಲ್ಲೋಪಿತಾ ದುಗ್ಧತಿಲಾವೇಷ್ಟತಿಲಾಢಿಕಾಃ ।
ಫಲಾನಿಚೈವ ಪಕ್ವಾನಿ ಲಗ್ನಮಂಡ ಗುಡಾನಿ ಚ ॥ ೯೪ ॥

ಅನ್ನಾಂಶ್ಚ ವಿವಿಧಾನ್ ದದ್ಯಾತ್ ಪೂಪಾನಿ ವಿವಿಧಾನಿ ಚ ।
ಏವಮಾದೀನಿ ಸರ್ವಾಣಿ ದಾಪಯೇಚ್ಛಕ್ತಿತೋ ನೃಪ ॥ ೯೫ ॥

---

೯೧. ಸಮಸ್ತ ಲೋಕಗಳನ್ನೂ ಸೃಷ್ಟಿಸುವ, ವಿಷ್ಣು ರುದ್ರರಲ್ಲಿ ವ್ಯಾಪಿಸಿರುವ, ಬ್ರಹ್ಮನನ್ನು ವಿಧಿವತ್ತಾಗಿ ಭಕ್ತಿಯಿಂದ ಭಾವನೆಮಾಡಿ ಆಮೇಲೆ ಪೂಜೆಮಾಡಬೇಕು.

೯೨. ಹೂವು, ಗಂಧ ಮುಂತಾದ ಸಾಮಗ್ರಿಗಳನ್ನೆಲ್ಲಾ ಕ್ರಮವಾಗಿ ಸಿದ್ಧ ಮಾಡಿಕೊಳ್ಳಬೇಕು. ಗಾಯತ್ರೀಮಂತ್ರವನ್ನು ಉಚ್ಚರಿಸುತ್ತಾ ಎಲ್ಲಾ ಕೆಲಸ ಗಳನ್ನೂ ಮಾಡಿಕೊಳ್ಳಬೇಕು.

೯೩. ಪುಷ್ಪ, ಧೂಪ, ದೀಪ ಮನೋಹರವಾದ ನೈವೇದ್ಯ ಎಂದರೆ ಲಡ್ಡುಗೆ ಮುಂತಾದುವು. ಹುರಿದ ಎಳ್ಳಿಗೆ ಹಾಲು ಚುಮುಕಿಸಿ ಕಟ್ಟಿದ ಉಂಡೆ, ಎಳ್ಳಿನ ಚಿಗಳಿ ಮತ್ತು.

೯೪. ಸ್ವಸ್ತಿಕದ ಆಕಾರವಾಗಿ ಮಾಡಿರುವ ಚಕ್ಕುಲಿ, ಮುಂತಾದ ಭಕ್ಷ್ಯ ಗಳು, ಹಾಲು, ಎಳ್ಳು ಬೆರಸಿದ ಭಕ್ಷ್ಯ, ಮಾಗಿದ ಹಣ್ಣುಗಳು, ಹಾಲಿನ ಕೆನೆಗೆ ಸಕ್ಕರೆ ಅಥವಾ ಬೆಲ್ಲವನ್ನು ಹಾಕಿ ಮಾಡಿದ ಭಕ್ಷ್ಯ (ಖೋವ).

೯೫. ನಾನಾವಿಧವಾದ ಅನ್ನಗಳು, ಹಿಟ್ಟಿನಿಂದ ಮಾಡಿದ ಅಪೂಪ ಮುಂತಾದ ತಿಂಡಿಗಳು, ಇವೇ ಮುಂತಾದ ಎಲ್ಲಾ ಭಕ್ಷ್ಯಗಳನ್ನೂ ಶಕ್ತ್ಯನುಸಾರವಾಗಿ ಸಮರ್ಪಣೆ ಮಾಡಬೇಕು.

ಮೂಲ ಮಂತ್ರೇಣ ದೇವಸ್ಯ ತತೋ ದೇಹಂ ವಿಭಾವಯೇತ್ ।
ಪೂಜಯೇಚ್ಚಾಪಿ ವಿಧಿನಾ ಯೇನ ತಂ ತೇ ಬ್ರವೀಮ್ಯಹಂ ॥ ೯೬ ॥

ಪ್ರಾಣಯಾಮತ್ರಯಂ ಕೃತ್ವಾ ದೇಹಸಂಶೋಧನಾಯ ವೈ ।
ಆವಾಹಯೇತ್ತತೋನಂತಂ ಧಾರಯಂತಂ ವಚಸ್ಸದಾ ॥ ೯೭ ॥

ಧ್ಯಾತ್ವಾನಂತಂ ತತೋ ರುದ್ರಂ ಪದ್ಮಕಿಂಜಲ್ಕ ಮಧ್ಯಗಂ ।
ಧ್ಯಾಯೇದ್ವಿಷ್ಣುಂ ತತೋ ದೇವಂ ಸ್ವಸೇತ್ಪದ್ಮೋದರೋದ್ಭವಂ ॥ ೯೮ ॥

ಏವಂ ತ್ರಿದೇವತಾರೂಢಂ ಪದ್ಮಮಧ್ಯೇಂಬುಜೋದ್ಭವಂ ।
ಪೂಜಯೇನ್ಮೂಲಮಂತ್ರೇಣ ಪದ್ಮೋದರಭವಂ ನೃಪ ॥ ೯೯ ॥

ಋಗ್ವೇದಂ ತು ಯಜುರ್ವೇದಂ ಸಾಮವೇದಂ ಚ ಪೂಜಯೇತ್ ।
ಜ್ಞಾನ ವೈರಾಗ್ಯಮೈಶ್ವರ್ಯಂ ಧರ್ಮಂ ಸಂಪೂಜಯೇದ್ಬುಧಃ ॥ ೧೦೦ ॥

---

೯೬. ಬ್ರಹ್ಮದೇವನ ಮೂರ್ತಿಯನ್ನು ಮೂಲಮಂತ್ರದಿಂದ ಧ್ಯಾನಿಸಿ ಯಾವ ವಿಧಿಯಿಂದ ಪೂಜಿಸಬೇಕೆಂಬುದನ್ನು ನಾನು ನಿನಗೆ ಹೇಳುವೆನು ಕೇಳು.

೯೭. ದೇಹಶುದ್ಧಿಗೋಸ್ಕರವಾಗಿ ಮೂರು ಪ್ರಾಣಾಯಾಮಮಾಡಿ ವಾಗಿಂದ್ರಿಯಕ್ಕೆ ಶಕ್ತಿ ಕೊಡತಕ್ಕ ಅನಂತನನ್ನು ಆವಾಹನೆ ಮಾಡಬೇಕು.

೯೮. ಆಮೇಲೆ ಅನಂತನನ್ನೂ ಪದ್ಮಕೇಸರದ ಮಧ್ಯೆ ಇರುವ ರುದ್ರನನ್ನೂ ಧ್ಯಾನಿಸಿ, ತರುವಾಯ ವಿಷ್ಣುವನ್ನು ಧ್ಯಾನಮಾಡಬೇಕು.

೯೯. ಬಳಿಕ ಕಮಲಮಧ್ಯದಲ್ಲಿ ಹುಟ್ಟಿದ ಬ್ರಹ್ಮನನ್ನು ಧ್ಯಾನಮಾಡಬೇಕು. ಹೀಗೆ ಮೂರು ದೇವತೆಗಳನ್ನು ಆಕ್ರಮಿಸಿದವನೂ, ಪದ್ಮ ಮಧ್ಯದಲ್ಲಿರುವವನೂ ಆದ ಬ್ರಹ್ಮನನ್ನು ಮೂಲಮಂತ್ರದಿಂದ ಪೂಜಿಸಬೇಕು.

೧೦೦. ಪ್ರಾಜ್ಞನಾದವನು ಅಲ್ಲೇ ಋಗ್ವೇದವನ್ನೂ, ಯಜುರ್ವೇದವನ್ನೂ, ಸಾಮವೇದವನ್ನೂ ಪೂಜಿಸಬೇಕು. ಜ್ಞಾನ, ವೈರಾಗ್ಯ, ಐಶ್ವರ್ಯ, ಧರ್ಮ ಇವುಗಳನ್ನೂ ಪೂಜಿಸಬೇಕು.

**ಈಶಾನಾದಿ ಕ್ರಮಾದ್ರಾಜನ್ ವಿದಿಶಾಸು ಸಮಂತತಃ ।**
**ಶಿಕ್ಷಾ ಕಲ್ಪೋ ವ್ಯಾಕರಣಂ ನಿರುಕ್ತಂ ಛಂದ ಏವ ಚ ॥ ೧೦೧ ॥**

**ಜ್ಯೋತಿಷಂ ಚ ಮಹಾಬಾಹೋ ಉಪವೇದಾಶ್ಚ ಕೃತ್ಸ್ನಶಃ ।**
**ಇತಿಹಾಸ ಪುರಾಣಾನಿ ಯಥಾಯೋಗ್ಯಂ ಯಥಾಕ್ರಮಂ ॥ ೧೦೨ ॥**

**ಶಿಕ್ಷಾ ಕಲ್ಪೋ ವ್ಯಾಕರಣಂ ದೇವಸ್ಯ ಪುರತಸ್ಸದಾ ।**
**ಕಲ್ಪಾದಯಸ್ತತಶ್ಚಾನ್ಯೇ ದಿಶಾಸು ವಿದಿಶಾಸು ಚ ॥ ೧೦೩ ॥**

**ಮಹಾವ್ಯಾಹೃತಯಸ್ಸರ್ವಾಃ ಪ್ರಣವೇನ ಸಮನ್ವಿತಾಃ ।**
**ಪೂರ್ವಾದಿ ಕ್ರಮಯೋಗೇನ ಪೂಜಯೇದ್ವಿಧಿನಾ ನೃಪ ॥ ೧೦೪ ॥**

**ಶಕ್ತಯೋ ಬ್ರಹ್ಮಣಸ್ತ್ವೇತಾಃ ಲೋಕರೂಪಾ ವ್ಯವಸ್ಥಿತಾಃ ।**
**ಪೂಜನೀಯಾಃ ಪ್ರಯತ್ನೇನ ಮಂತ್ರರೂಪಾ ಸ್ಥಿತಾ ಸ್ವಯಂ ॥ ೧೦೫ ॥**

---

೧೦೧–೧೦೨. ಅಯ್ಯಾ ರಾಜನೇ! ಈಶಾನ್ಯ ಮೊದಲಾದ ವಿದಿಕ್ಕುಗಳಲ್ಲಿ ಸುತ್ತಲೂ; ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು, ಜ್ಯೋತಿಷ, ಉಪವೇದಗಳು, ಇತಿಹಾಸ ಪುರಾಣಗಳು ಇವನ್ನು ಸರಿಯಾದ ಯೋಗ್ಯಸ್ಥಾನಗಳಲ್ಲಿ ಕ್ರಮವಾಗಿ ಆವಾಹನೆಮಾಡಿ ಪೂಜಿಸಬೇಕು.

೧೦೩. ಯೋಗ್ಯವಾದ ಸ್ಥಾನವೆಂದರೆ—ಶಿಕ್ಷಾ, ವ್ಯಾಕರಣ ಇವುಗಳನ್ನು ದೇವರ ಮುಂಭಾಗದಲ್ಲಿಯೂ, ಕಲ್ಪ ಮೊದಲಾದುವನ್ನು ಹಿಂಭಾಗದಲ್ಲಿಯೂ, ಹೀಗೆ ದಿಕ್ಕುಗಳಲ್ಲಿ ಕೆಲವು, ವಿದಿಕ್ಕುಗಳಲ್ಲಿ ಕೆಲವು ಈ ಪ್ರಕಾರವಾಗಿ ಆವಾಹಿಸಬೇಕು

೧೦೪. ಅಯ್ಯಾ ಪ್ರಭುವರ್ಯನೇ! ಪ್ರಣವದಿಂದ ಕೂಡಿದ ಎಲ್ಲಾ ಮಹಾ ವ್ಯಾಹೃತಿಗಳನ್ನೂ ಪೂರ್ವ ಮುಂತಾದ ದಿಕ್ಕುಗಳಲ್ಲಿ ಕ್ರಮವಾಗಿ ವಿಧಿಪ್ರಕಾರ ಪೂಜೆ ಮಾಡಬೇಕು.

೧೦೫. ಈ ವ್ಯಾಹೃತಿಗಳು ಲೋಕರೂಪಗಳಾಗಿರುವ ಬ್ರಹ್ಮನ ಶಕ್ತಿಗಳಾಗಿವೆ. ಸ್ವಯಂ ಮಂತ್ರರೂಪಗಳಾಗಿಯೂ ಇರುವ ಈ ಶಕ್ತಿಗಳನ್ನು ಪ್ರಯತ್ನಪಟ್ಟಾದರೂ ಪೂಜಿಸಬೇಕು.

ಅರಕಾಂತರ ಸಂಸ್ಥಾಂಶ್ಚ ಷಟ್‌ಸಮುದ್ರಾನ್ ಸಮರ್ಚಯೇತ್ ।
ನಕ್ಷತ್ರಾಣಿ ಗ್ರಹಾಂಶ್ಚೈವ ರಾಶಯಶ್ಚ ವಿಶೇಷತಃ ।
ಪೂಜ್ಯಾಸ್ಸರ್ವೇ ಯಥಾನ್ಯಾಯಂ ಸುರಾಗ್ರೇಷು ವ್ಯವಸ್ಥಿತಾಃ ।
ನಾಗಾಶ್ಚ ಗರುಡಶ್ಚೈವ ಪೂಜನೀಯಸ್ತಥಾಗ್ರತಃ ॥ ೧೦೬ ॥

ದೇವತಾ ಋಷಯಶ್ಚೈವ ಸಹಿತಾಃ ಕುಲಪರ್ವತಾಃ ।
ತತ್ತೇಜೋನಿಲಯಾಸ್ಸರ್ವೇ ಪೂಜನೀಯಾಃ ಪ್ರಯತ್ನತಃ ॥ ೧೦೭ ॥

ಆಚಮ್ಯ ವಿಧಿವತ್ಪೂರ್ವಂ ಮಂತ್ರಪೂತೇನ ವಾರಿಣಾ ।
ಹೃದಯಾದೀನ್ ನ್ಯಸೇದಂಗಾನ್ ಹೃದಯಾದಿಷು ಕೃತ್ಸ್ನಶಃ ॥ ೧೦೮ ॥

ಶಿಖಾ ನೇತ್ರಂ ತಥಾ ಚರ್ಮ ಅಸ್ತ್ರಂ ಚ ಭರತರ್ಷಭ ।
ಮಹೇಂದ್ರಾದಿ ದಿಶಶ್ಚೈತಾಃ ಪೂಜಯೇದ್ವಿಧಿವನ್ನೃಪ ॥ ೧೦೯ ॥

ಹೃದಯಂ ಪುರತಃ ಪೂಜ್ಯಂ ಶಿರೋ ದೇವಸ್ಯ ಪೃಷ್ಟತಃ ।
ಪೂರ್ವಂ ಸಂಪೂಜಯೇದ್ದೇವಂ ಮೂಲಮಂತ್ರೇಣ ಕೃತ್ಸ್ನಶಃ ॥ ೧೧೦ ॥

---

೧೦೬. ಯಂತ್ರದ ದಳಗಳ ಮಧ್ಯದಲ್ಲಿ ಆರು ಸಮುದ್ರಗಳನ್ನೂ ಆವಾಹಿಸಿ ಪೂಜಿಸಬೇಕು. ದೇವರ ಮುಂಭಾಗದಲ್ಲಿ ನಕ್ಷತ್ರಗಳು, ಗ್ರಹಗಳು, ರಾಶಿಗಳು. ಇವುಗಳ ಅಭಿಮಾನದೇವತೆಗಳನ್ನು ಕ್ರಮತಪ್ಪದೆ ವಿಶೇಷವಾಗಿ ಪೂಜೆಮಾಡಬೇಕು. ಮತ್ತು ಅಷ್ಟನಾಗಗಳನ್ನೂ, ಗರುಡನನ್ನೂ ಅದೇರೀತಿ ಮುಂಭಾಗದಲ್ಲಿ ಆವಾಹಿಸಿ ಪೂಜಿಸಬೇಕು.

೧೦೭. ದೇವತೆಗಳನ್ನೂ, ಋಷಿಗಳನ್ನೂ, ಜತೆಯಲ್ಲಿಯೇ ಕುಲಪರ್ವತಗಳನ್ನೂ ತೇಜಸ್ಥಾನಗಳಲ್ಲಿ ಇರತಕ್ಕುವೆಂದು ಭಾವಿಸಿ ಪ್ರಯತ್ನದಿಂದ ಪೂಜೆಮಾಡಬೇಕು.

೧೦೮. ಮೊದಲು ವಿಧಿಪ್ರಕಾರವಾಗಿ ಮಂತ್ರಪೂತವಾದ ಜಲದಿಂದ ಆಚಮನ ಮಾಡಿ, ಹೃದಯವೇ ಮುಂತಾದ ಸ್ಥಳಗಳಲ್ಲಿ ಹೃದಯಾದಿ ಅಂಗಗಳನ್ನೆಲ್ಲಾ ನ್ಯಾಸ ಮಾಡಿಕೊಳ್ಳಬೇಕು.

೧೦೯. ಅಯ್ಯಾ ರಾಜನೆ! ಶಿಖಾ, ನೇತ್ರ, ಚರ್ಮ, ಅಸ್ತ್ರ ಇವುಗಳನ್ನೂ ಮಹೇಂದ್ರಾದಿಗಳು, ದಿಕ್ಕುಗಳು ಇವುಗಳನ್ನೂ ವಿಧಿಪ್ರಕಾರವಾಗಿ ಪೂಜಿಸಬೇಕು.

**ವಿಸರ್ಜಯೇದ್ದರ್ಶಯಿತ್ವಾ ಮುದ್ರಾಂ ತು ಭರತರ್ಷಭ ।**
**ಅಂಕುಶಂ ನರಶಾರ್ದೂಲ ಹ್ಯಾಹ್ವಾನೇ ಕಂಜಮಾದಿಶೇತ್ ॥ ೧೧೧ ॥**

**ಯಸ್ತ್ವೇವಂ ಪೂಜಯೇದ್ದೇವಂ ಪ್ರತಿಪನ್ನಿತ್ಯಮೇವ ಚ ।**
**ಉಪೋಷ್ಯ ಪಂಚದಶ್ಯಾಂ ತು ಸ ಯಾತಿ ಪರಮಂ ಪದಂ ॥ ೧೧೨ ॥**

**॥ ಸುಮಂತುರುವಾಚ ॥**

**ಆಪೋಹಿಷ್ಠೇತಿ ಮಂತ್ರೋಽಯಂ ಹೃದಯಂ ಪರಿಕೀರ್ತಿತಂ ।**
**ಋತಂಸತ್ಯಂ ಶಿಖಾ ಪ್ರೋಕ್ತಾ ಉದುತ್ಯಂ ನೇತ್ರಮಾದಿಶೇತ್ ॥ ೧೧೩ ॥**

**ಚಿತ್ರಂ ದೇವಾನಾಮಸ್ತ್ರಮಿತಿ ಸರ್ವಲೋಕೇಷು ವಿಶ್ರುತಂ ।**
**ವರ್ಮಣಾತೇಚ್ಛಾದಯಾಮಿ ಕವಚಂ ಸಮುದಾಹೃತಂ ॥ ೧೧೪ ॥**

**ಭೂರ್ಭುವಸ್ಸ್ವರಿತಿ ತಥಾ ಶಿರಸೇ ಪರಿಕೀರ್ತಿತಂ ।**
**ಗಾಯತ್ರೀ ಮೂಲಮಂತ್ರಸ್ತು ಸಾಧಕಃ ಸರ್ವಕರ್ಮಣಾಂ ॥ ೧೧೫ ॥**

---

೧೧೦. ದೇವರ ಮುಂಭಾಗದಲ್ಲಿ ಹೃದಯವನ್ನೂ ಹಿಂಭಾಗದಲ್ಲಿ ಶಿರಸ್ಸನ್ನೂ ಮೊದಲು ಪೂಜಿಸಬೇಕು. ಹೀಗೆ ಪೂಜಿಸುವಾಗ ಸರ್ವಪ್ರಕಾರದಿಂದಲೂ ಮೂಲ ಮಂತ್ರದಿಂದಲೇ ದೇವರನ್ನು ಪೂಜಿಸಬೇಕು.

೧೧೧. ಆಮೇಲೆ ವಿಸರ್ಜನಮುದ್ರೆಯನ್ನು ತೋರಿಸಿ ದೇವರನ್ನು ವಿಸರ್ಜಿಸಬೇಕು. ಭರತವಂಶೋತ್ಪನ್ನನಾದ ಪ್ರಭುವೇ! ವಿಸರ್ಜನಕಾಲದಲ್ಲಿ ಅಂಕುಶ ಮುದ್ರೆ, ಆವಾಹನಕಾಲದಲ್ಲಿ ಕಮಲಮುದ್ರೆ ಈರೀತಿ ತೋರಿಸಬೇಕು.

೧೧೨. ಪೂರ್ಣಿಮಾ, ಅಮಾವಾಸ್ಯೆ, ಎನಿಸಿಕೊಳ್ಳುವ ಹದಿನೈದನೆಯ ತಿಥಿಗಳಲ್ಲಿ ಉಪವಾಸಮಾಡಿ ಪ್ರತಿಪತ್ತಿಥಿಯಲ್ಲಿ ಈ ಪ್ರಕಾರ ಬ್ರಹ್ಮದೇವನನ್ನು ಯಾವನು ಪೂಜಿಸುವನೋ, ಅವನು ಪರಮಪದವನ್ನು ಹೊಂದುತ್ತಾನೆ.

೧೧೩. ಸುಮಂತುಮುನಿವರ್ಯರು ಮುಂದಕ್ಕೆ ಹೇಳುತ್ತಾರೆ.- "ಆಪೋಹಿಷ್ಠಾ" ಮೊದಲಾದ ಮಂತ್ರವನ್ನು ಬ್ರಹ್ಮನ ಹೃದಯವೆಂದೂ, "ಋತಂ ಚ ಸತ್ಯಂ ಚ" ಎಂಬ ಮಂತ್ರವನ್ನು ಶಿಖೆಯೆಂದೂ, "ಉದುತ್ಯಂ ಜಾತವೇದಸಂ" ಮೊದಲಾದ ಮಂತ್ರವನ್ನು ನೇತ್ರವೆಂದೂ ಹೇಳಬೇಕು.

೧೧೪-೧೧೫. "ಚಿತ್ರಂದೇವಾನಾಂ" ಇತ್ಯಾದಿ ಮಂತ್ರವು ತಲೆಯೆಂದು, ಸರ್ವಲೋಕಪ್ರಸಿದ್ಧವಾಗಿದೆ. "ವರ್ಮಣಾತೇ ಛಾದಯಾಮಿ" ಎಂಬ ಮಂತ್ರವನ್ನು

**ಗಾಯತ್ರ್ಯಾ ಪೂಜಯೇದ್ದೇವಂ ಓಂಕಾರೇಣಾಭಿಮಂತ್ರಿತಂ ।**
**ಪ್ರಣವೇನಾಪರಾನ್ ಸರ್ವಾನ್ ಋಗ್ವೇದಾದೀನ್ ಪ್ರಪೂಜಯೇತ್ ॥೧೧೬॥**

**ಆಹ್ವಾನೇ ಪೂಜನೇ ವೀರ ವಿಸರ್ಗೇ ಬ್ರಹ್ಮಣಸ್ತಥಾ ।**
**ಗಾಯತ್ರೀ ಪರಮೋ ಮಂತ್ರೋ ವೇದಮಾತಾ ವಿಭಾವಿನೀ ॥ ೧೧೭ ॥**

**ಗಾಯತ್ರ್ಯಕ್ಷರತತ್ತ್ವೈಸ್ತು ಪೂಜಯೇದ್ಯಸ್ತು ದೇವತಾಂ ।**
**ಸ ಗಚ್ಛೇದ್ಬ್ರಹ್ಮಣಃ ಸ್ಥಾನಂ ದುರ್ಲಭಂ ಯದ್ದುರಾಸದಂ ॥ ೧೧೮ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಪ್ರತಿಪತ್ಕಲ್ಪೇ ಬ್ರಹ್ಮಣೋಽರ್ಚನ ವಿಧಿವರ್ಣನಂ ನಾಮ ಸಪ್ತದಶೋಽಧ್ಯಾಯಃ**



---

ಕವಚವೆಂದು ಹೇಳಿದ್ದಾರೆ. "ಭೂರ್ಭುವಸ್ಸುವಃ" ಎಂಬ ಮಂತ್ರವು ಶಿರಸ್ಸೆಂದು ಕೆಲವರು ಹೇಳಿದ್ದಾರೆ. ಗಾಯತ್ರೀ ಮೂಲಮಂತ್ರವು ಸರ್ವಕರ್ಮಗಳಿಗೂ ಸಾಧಕವಾದುದು.

೧೧೬. ಓಂಕಾರ ಪೂರ್ವಕ ಗಾಯತ್ರೀಮಂತ್ರದಿಂದ ಅಭಿಮಂತ್ರಣ ಮಾಡಿ ದೇವರನ್ನು ಪೂಜಿಸಬೇಕು. ಪ್ರಣವಮಂತ್ರದಿಂದಲೇ ಋಗ್ವೇದ ಮೊದಲಾದ ಇತರ ದೇವತೆಗಳನ್ನು ಪೂಜಿಸಬೇಕು.

೧೧೭. ವೀರಶ್ರೇಷ್ಠನೇ! ಬ್ರಹ್ಮದೇವನ ಆವಾಹನದಲ್ಲಿಯೂ, ಪೂಜೆಯಲ್ಲಿಯೂ, ವಿಸರ್ಜನಕಾಲದಲ್ಲಿಯೂ ವೇದಮಾತೆಯೆನಿಸಿದ ಗಾಯತ್ರಿಯೇ ಶ್ರೇಷ್ಠವಾದ ಮಂತ್ರವೆಂದು ಉಕ್ತವಾಗಿರುತ್ತದೆ.

೧೧೮. ಯಾವನು ಗಾಯತ್ರ್ಯಕ್ಷರ ತತ್ತ್ವಗಳಿಂದ ಈ ದೇವನನ್ನು ಪೂಜೆ ಮಾಡುತ್ತಾನೋ ಅವನು ಇತರರಿಗೆ ಸಾಧ್ಯವಾಗದ ದುರ್ಲಭವಾದ ಬ್ರಹ್ಮಲೋಕವನ್ನು ಹೊಂದುತ್ತಾನೆ.

ಎಂಬಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಪ್ರತಿಪತ್ಕಲ್ಪದಲ್ಲಿ ಬ್ರಹ್ಮಪೂಜಾವಿಧಿವರ್ಣನವೆಂಬ ಹದಿನೇಳನೆಯ ಅಧ್ಯಾಯವು ಮುಗಿದುದು.

